# ವಿಷಯಾನುಕ್ರಮಣಿಕೆ

ಹೆಸರು

ಧರ್ಮವೀರ ಶ್ರೀ ಸ್ವಾಮಿ ಶ್ರದ್ಧಾನಂದರವರು



ಧರ್ಮವೀರ ಶ್ರೀ ಸ್ವಾಮಿ ಶ್ರದ್ಧಾನಂದರವರು

-- ಶ್ರೀರಾಮಸಹಾಯಂ --

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸ ಪುಸ್ತಕಾವಳಿ)

**ಮುನ್ನುಡಿ :—**

ಆಧುನಿಕ ಕಾಲದಲ್ಲಿ ಎಂದರೆ ಈ ಹತ್ತೊಂಬತ್ತನೆಯ ಶತಮಾನದಲ್ಲೇ ಜನಿಸಿ, ನಮ್ಮ ಮಾತೃ ಭೂಮಿಯ ಅಭಿವೃದ್ಧಿಗಾಗಿ ತನು ಮನ ಧನಗಳನ್ನು ತೆತ್ತು ಸೇವೆಮಾಡಿದ ಮಹಾ ಪುರುಷರಲ್ಲಿ, ಈ ಕಥಾನಾಯಕರಾದ ಶ್ರೀ ಸ್ವಾಮಿ ಶ್ರದ್ಧಾನಂದಜೀಯವರು, ಅಗ್ರಗಣ್ಯರ ತರಗತಿಗೆ ಸೇರತಕ್ಕವರು. ಇವರು ದೇಶಾಭಿವೃದ್ಧಿಗಾಗಿ ಕೈಕೊಂಡ ಕಾರ್ಯವು ಏಕಮುಖವಾದುದಲ್ಲ-ಸರ್ವತೋಮುಖವಾದುದು. ಸಹಸ್ರಾರು ವರ್ಷಗಳಿಂದಲೂ ಪರರ ಕಾಲ್ತುಳಿತಕ್ಕೆ ಒಳಪಟ್ಟು ವಿವಿಧ ಕಾರಣಗಳಿಂದ ಹೀನಸ್ಥಿತಿಗೆ ಬಂದಿರುವ ದೇಶವು ನಿಶ್ಚಯವಾದ ಅಭಿವೃದ್ಧಿ ಸ್ಥಿತಿಯನ್ನು ಹೊಂದಬೇಕಾದರೆ ಅದರ ಮೂಲಸ್ಥಾನವು ಯಾವುದು ಎಂಬುದನ್ನು ಶೋಧಿಸಿ ತಿಳಿದು, ಈ ಮಹನೀಯರು ತಮ್ಮ ಕಾರ್ಯಗಳನ್ನು ಆ ತಳಹದಿಯಿಂದ ಪ್ರಾರಂಭಿಸಿದರು. ಆದುದರಿಂದಲೇ ಇವರ ಕಾರ್ಯಗಳೂ, ಅವು ಯಾವ ತತ್ವವನ್ನನುಸರಿಸಿ ಪ್ರಾರಂಭವಾದುವೋ ಆ ತತ್ವಗಳೂ ಶಿಲಾಲೇಖಗಳಂತೆ ದೃಢಮೂಲವಾಗಿವೆ. ಮುಂದೂ ಅವು ಶಾಶ್ವತವಾದ ಪ್ರಕೃತಿ ತತ್ವಗಳಂತೆ ದಿನದಿನಕ್ಕೆ ಅಭಿವೃದ್ಧಿಗೊಳ್ಳುತ್ತಾ ಸಾಗಬೇಕಲ್ಲದೆ- ಎಂದಿಗೂ ಚ್ಯುತಿಯನ್ನು ಹೊಂದಲಾರದಷ್ಟು ದೃಢವಾಗಿವೆ.

ಪೂರ್ವಾಶ್ರಮದಲ್ಲಿ ಲಾಲಾ ಮುನ್ಷಿರಾಂ ಎಂಬ ನಾಮಧೇಯದಿಂದ ಸುಪ್ರಸಿದ್ಧ ನ್ಯಾಯವಾದಿಗಳೆನಿಸಿದ್ದ ಸ್ವಾಮಿ ಶ್ರದ್ಧಾನಂದರನ್ನು ಈ ಬಗೆಯ ಕಾರ್ಯಕ್ಕೆ ಪ್ರೇರಿಸಿ, ಅವರು ತಮ್ಮ ಸರ್ವಸ್ವವನ್ನೂ ತ್ಯಾಗಮಾಡಿ ದೇಶ ಸೇವೆಗೆ ಸಿದ್ಧರಾಗುವಂತೆ ತಯಾರಿಸಿದುವು, ವೈದಿಕ ಧರ್ಮತತ್ವಗಳು,

ಆರ್ಯಸಮಾಜ ಮತ್ತು ಸ್ವಾಮಿ ದಯಾನಂದ ಸರಸ್ವತಿಯವರ ಪವಿತ್ರ ಜೀವನ ಭಾಷಣ ಲೇಖನಾದಿಗಳೇ. ಶ್ರೀ ದಯಾನಂದರು, ಭಾರತೀಯ ಜನತೆಯು ವಿದ್ಯಾಭ್ಯಾಸವು ಯಾವ ಉದ್ದೇಶದಿಂದ ಪೂರ್ವದ ಗುರುಕುಲ ಪದ್ಧತಿಯನ್ನನುಸರಿಸಿ ನಡೆಯಬೇಕೆಂದು ನುಡಿದಿದ್ದರೋ ಆ ಉದ್ದೇಶವು ಶ್ರೀ ಶ್ರದ್ಧಾನಂದರಿಂದ ಸಾರ್ಥಕವಾಯಿತು. ಅವರು, ಯಾವ ಹಿಂದೀಭಾಷೆಯು ಅದ್ಯಂತ ಭಾರತದೇಶದ ರಾಷ್ಟ್ರಭಾಷೆಯಾಗಬೇಕೆಂದು ಕನಸು ಕಂಡಿದ್ದರೋ, ಆ ಭಾಷಾಪ್ರಚಾರ ಕಾರ್ಯದಲ್ಲಿ ನಮ್ಮ ಕಥಾನಾಯಕರು ಅತಿಶಯ ಪರಿಶ್ರಮ ಮಾಡಿದರು. ವೇದಧರ್ಮಪ್ರಚಾರ, ಪಂಚಮೋದ್ಧರಣ, ಗೋಸಂರಕ್ಷಣೆ ಮುಂತಾದುವುಗಳಲ್ಲಿ, ಶ್ರೀ ಸರಸ್ವತಿಯವರು ಏನೇನು ಕಾರ್ಯವಾಗಬೇಕೆಂದು ಆಶಿಸಿದ್ದರೋ ಆ ಕಾರ್ಯಗಳೆಲ್ಲವೂ ಶ್ರೀ ಶ್ರದ್ಧಾನಂದಜೀಯವರಿಂದ ಉತ್ತಮರೀತಿಯಲ್ಲಿ ಪ್ರಾರಂಭಿಸಲ್ಪಟ್ಟುವು. ಈ ಎಲ್ಲಾ ಕಾರ್ಯಗಳಲ್ಲೂ ಕಾಂಗ್ರಿ ಎಂಬಲ್ಲಿ ಅವರು ಸ್ಥಾಪಿಸಿ, ಪ್ರಾರಂಭದ ಇಪ್ಪತ್ತು ವರ್ಷಕಾಲ ಅದರ ಅಧ್ಯಕ್ಷಸ್ಥಾನದಲ್ಲಿದ್ದು-ಸರ್ವ ವಿಧಗಳಿಂದಲೂ ಅಭಿವೃದ್ಧಿಗೊಳಿಸಿ ರಕ್ಷಿಸಿಕೊಂಡು ಬಂದ 'ಗುರುಕುಲ'ದ ಮೂಲಕ ನಡೆವ ಮಹತ್ಕಾರ್ಯವೇ ಸರ್ವಶ್ರೇಷ್ಠವಾದುದು. ಅಲ್ಲೂ, ಶ್ರೀಯವರಿಂದ ಬಾಲಿಕೆಯರಿಗಾಗಿ ಸ್ಥಾಪಿಸಲ್ಪಟ್ಟ ಕನ್ಯಾ ಮಹಾ ವಿದ್ಯಾಲಯದಲ್ಲೂ ಭಾವೀ ಜನಾಂಗದ ಆಧಾರ ಸ್ತಂಭರಾಗಲುಳ್ಳ ವಿದ್ಯಾರ್ಥಿಗಳು ಬ್ರಹ್ಮಚರ್ಯರಕ್ಷಣೆ, ಕಷ್ಟಸಹಿಷ್ಣುತೆ, ಭ್ರಾತೃಭಾವನೆ, ದೇಶ-ಭಾಷಾಭಿಮಾನ ಮುಂತಾದುವುಗಳಲ್ಲಿ ಶಿಕ್ಷಿತರಾಗುತ್ತಿರುವರು. ಶ್ರದ್ಧಾ, ಭಕ್ತಿ ಆತ್ಮಗೌರವಪಾಲನೆ, ದೇಶಾಭಿಮಾನ, ಸ್ವಾವಲಂಬನೆ ಮುಂತಾದ ಗುಣಗಳು, ಅಲ್ಲಿಂದ ವಿದ್ಯಾಭ್ಯಾಸವನ್ನು ಮುಗಿಸಿಕೊಂಡು ಹೊರಬೀಳುವ ವಿದ್ಯಾರ್ಥಿಗಳನ್ನು ಇತರ ರಾಜಕೀಯ ವಿಶ್ವ ವಿದ್ಯಾಲಯಗಳಿಂದ ಮಂದೆ ಮಂದೆಯಾಗಿ ಹೊರಬೀಳುವ ವಿದ್ಯಾರ್ಥಿಗಳಿಂದ ಪ್ರತ್ಯೇಕಿಸುವುವು. ಹೀಗೆ ಜನಾಂಗದ ವೀರ್ಯರಕ್ಷಣೆಮಾಡಿ, ಅದನ್ನು ಸತ್ವಮಯವಾದುದನ್ನಾಗಿಸಿದ ಮಹತ್ಕೀರ್ತಿಯು ಶ್ರೀ ಸ್ವಾಮಿ ಶ್ರದ್ಧಾನಂದರನ್ನು ಸೇರುವುದು.

ಹಿಂದೂಧರ್ಮ ರಕ್ಷಣೆಗಾಗಿ ಶ್ರೀಯವರು ಆವರೆಗೆ ಯಾವ ದೇಶಭಕ್ತರೂ ಕೈಕೊಂಡಿರದ ಇನ್ನೂ ಕೆಲವು ಕೆಲಸಗಳನ್ನು ಪ್ರಾರಂಭಿಸಿದರು.

ಪತಿತೋದ್ಧರಣ, ಶುದ್ಧಿ-ಸಂಘಟನ ಕಾರ್ಯಗಳೇ ಅವುಗಳಲ್ಲಿ ಮುಖ್ಯವಾದುವು. ಇತರ ಎಲ್ಲಾ ದೇಶಸೇವಾಕಾರ್ಯಗಳಿಂದಲೂ ಲೋಕಪ್ರಿಯರೆನಿಸಿದ್ದ ಸ್ವಾಮಿಜೀಯವರು ಈ ಶುದ್ಧಿ-ಸಂಘಟನ ಕಾರ್ಯಗಳಿಂದ ಮಹಮ್ಮದೀಯ ಜನಾಂಗದ ದ್ವೇಷಕ್ಕೆ ಗುರಿಯಾಗಬೇಕಾಯಿತು. ಆದರೂ ಆ ಧೀರರು, ತಾವು ಸತ್ಯವೆಂದೂ ತಮ್ಮ ಮಾತೃಭೂಮಿಯ ಅಭಿವೃದ್ಧಿಗೆ ಆವಶ್ಯಕವಾದುವೆಂದೂ ನಂಬಿದ್ದ ಆ ಕಾರ್ಯಗಳು ತಮಗೆ ಪ್ರಾಣಾಪಾಯಕಾರಿಗಳೆಂದು ತೋರಿದಾಗಲೂ ಹಿಂಜರಿಯದೆ, ಮುಂದರಿಸಿ ನಡೆದರು.—ಅಂತೆಯೇ ಅದಕ್ಕಾಗಿ ತಮ್ಮ ದೇಹವನ್ನೂ ತೆತ್ತರು. ದೇಹ ಹೋದರೇನಾಯಿತು, ಅವರು ಸ್ಥಾಪಿಸಿದ ಆ ತತ್ವವು ಶಾಶ್ವತವಾದುದಲ್ಲವೆ! ಅದು ಎಂದಿಗೂ ನಾಶವಾಗದುದೂ-ಚಿರಜೀವಿಯಾಗಿ ಅಭಿವೃದ್ಧಿಯಾಗಲುಳ್ಳುದೂ ಅಲ್ಲವೆ!

ಹೀಗೆ ದೇಶಮಾತೆಯ ಪಾದತಲದಲ್ಲಿ, ಸ್ವಾಮಿಯವರು ತಮ್ಮ ದೇಹವನ್ನು ಬಲಿದಾನವಾಗಿ ಅರ್ಪಿಸಿ ಈ ೧೯೨೭ ನೆಯ ಡಿಸೆಂಬರು ೨೩ಕ್ಕೆ ಒಂದು ಸಂವತ್ಸರ ಕಾಲವಾಯಿತು. ಧರ್ಮವೀರರಾದ ಅವರ ಈ ಬಲಿದಾನವು ಅವರ ಅನುಯಾಯಿಗಳಲ್ಲೂ-ದೇಶೀಯರಲ್ಲೂ ನವಸ್ಫೂರ್ತಿಯನ್ನು ಉಂಟುಮಾಡಲು ಸಹಾಯಕವಾಗದಿರಲಾರದು.—ನಮ್ಮ ಕರ್ನಾಟಕ ಬಾಲಕರೂ ಆ ಮಹಾಪುರುಷರ ಈ ಪವಿತ್ರಜೀವಿತವನ್ನು ಪಠಿಸಿ ಸ್ವಾರ್ಥತ್ಯಾಗಮಾಡಿ ದೇಶಾಭಿವೃದ್ಧಿಗಾಗಿ ಹೆಣಗುವ ಪವಿತ್ರ ಪಾಠವನ್ನು ಅಭ್ಯಸಿಸತೊಡಗಲು ಈ ಚಿಕ್ಕ ಪುಸ್ತಕವು ಎಷ್ಟು ಅಲ್ಪ ಪ್ರಮಾಣದಿಂದ ಸಹಾಯಕವಾದರೂ ನಮ್ಮ ಈ ಸೇವಾ ಕಾರ್ಯವು ಸಾರ್ಥಕವಾದುದೆಂದೆಣಿಸುವೆವು.

ಬೆಂಗಳೂರು ನಗರ,<br>ತಾ|| ೨೩—೧೨—೧೯೨೭.

ಇತಿ ಸುಜನ ವಿಧೇಯ,<br>ಯಂ. ರಾಮರಾವ್.

# ಶ್ರದ್ಧಾಂಜಲಿ

—:o:—

**॥ ಕಂದ ॥**

ಪತಿತರ, ಹಿಂದೂ ಧರ್ಮ |
ಚ್ಯುತರಾದಾ ಜನರ ಮತ್ತೆ **ಶುದ್ಧಿ**ಯಗೆಯ್ದಾ ||
ಕ್ಷಿತಿಯೊಳ್ **ಖ್ಯಾ**ತರ ನೆಸಗಿದ |
ಧೃತಿ ಪೂರಿತ ಹೃದಯ **ಪತಿತಪಾವನ** ನಲೆ! ಸಿಂ ||

**॥ ವೃತ್ತ ॥**

ಕಸುವಿಂ ಸಂತಸ ದುಷ್ಕಸಿಂಹರುರೆ ಸ್ಪರ್ಶಾಸ್ಪರ್ಶರೆಂವೆಂಬ ಭಾ |
ವನೆ ತಾನಿಲ್ಲವಾಗೆ ನಾಡೆ ನಲವಿಂದಂ ಸರ್ವರೊಳ್ ಪ್ರೇಮದಿಂ ||
ವಸುವಿಂ ಸರ್ವಸಮತ್ವ ಸನ್ಮತಿಯಿಂ ರಾರಾಜಿಸುತ್ತಿರ್ದ್ದ, ಪಾ |
ವನನಾಗಿರ್ದ, ಮಹಾ **ಸುಧಾರಕ ಶಿರೋರತ್ನಾ** ಕಟಾ ಪೋದೆಯಾ! ||

ಭರದಿಂದಂ ಬಾಲ ಬಾಲಾನಿಕರ ಗುರುಕುಲಸ್ಥಾಪನಂ ಗೆಯ್ದು ಹರ್ಷೋ |
ತ್ಕರದಿಂ ಶ್ರೀರಾಮ ರಾಮಾನುಜರಿವರೆನಿಪಾ ಶಿಷ್ಯರಂ ಪೊರ್ದ್ದ ತತ್ವಾ ||
ದರದಿಂದಂ ಬ್ರಹ್ಮತೇಜೋಮಯರಹ ವಿಲಸಚ್ಛಿಷ್ಯ ಸಂದೋಹದಿಂದಂ |
ಪುರೆವಾ **ಶ್ರೀವರ್ಧಮಾನಪ್ರವರನಹ ವಸಿಷ್ಠಂ** ವಲಂ, ಸೋಸೆಯುತ್ತೆ! ||

**॥ ಕಂದ ॥**

**ಹಿಂದೀ ಭಾಷಾ ಮಮತೆಯು** |
ಸಂದಡೆ ನೆರೆ ಜನರೊಳ್ಳದೆ ಪೆರ್ಚಿಪೆನೆನುತಂ ||
ಕುಂದದ ಪರಮೋತ್ಸಾಹದ |
ಬೆಂದುಂ ಕೃಷಿಗೈದು ಕೀರ್ತಿಯಾಂತಿರ್ದಪೆಯ್ಯ! ||
ಚೆಂದದಲಾರ್ಯಾವರ್ತದ |
ಬಂಧುರ ವೈದಿಕ ಸುಧರ್ಮವಂ ಪಿಂದತ್ತಾ ||
ನಂದದೆ ಪುನರುದ್ಧರಿಸಿದ |
**ಹಿಂದೂಜನ ಹೃದಯ ನವ್ಯ ಸಮ್ರಾಟ** ನಲಾ ||

—**ಸುಬೋಧ ಮಾಸಪತ್ರಿಕೆ.**

ಶ್ರೀರಾಮಸಹಾಯಂ

ಧರ್ಮವೀರ

ಶ್ರೀ

# ಸ್ವಾಮಿ ಶ್ರದ್ಧಾನಂದರವರು

## — ವಂಶ —

ನಮ್ಮ ಮಾತೃಭೂಮಿಯಾದ ಈ ಭಾರತದೇಶದ ಸೇವೆಗಾಗಿ ತಮ್ಮ ಸರ್ವಸ್ವವನ್ನೂ ತ್ರಿಕರಣ ಶುದ್ಧಿಯಿಂದ ಸಮರ್ಪಿಸಿ-ದೇಹವನ್ನೂ ಬಲಿದಾನವಾಗಿ ಒಪ್ಪಿಸಿದ ಧೀರಾಗ್ರಗಣ್ಯರು ನಮ್ಮ ಕಥಾನಾಯಕರು. ಇವರ ಹಿರಿಯರು ವಂಶಪಾರಂಪರ್ಯವಾಗಿ ಪಂಜಾಬ್ ದೇಶವಾಸಸ್ಥರು. ಇವರ ಪ್ರಪಿತಾಮಹನ ಹೆಸರು ಸುಖಾನಂದ್. ಇವರ ಪಿತಾಮಹನಾದ ಗುಲಾಬ್‌ರಾಯ ಎಂಬಾತನು ಕಪೂರ್ಥಲ ಸಂಸ್ಥಾನದ ಮಹಾರಾಜಾ ನೌನಿಹಾಲಸಿಂಹನ ರಾಣೀ ಶ್ರೀಮತೀ ಹೀರಾದೇವಿಯ ಅಂತಃಪುರದ ಪಾಲನೆಗೆ ನಿಯಮಿತನಾಗಿದ್ದನು. ಮಹಾರಾಜನ ಅಂತಃಪುರದ ಪಾಲನೆಗೆ ನಿಯಮಿತನಾಗಿದ್ದನೆಂಬುದರಿಂಲೇ ಆತನ ಧಾರ್ಮಿಕನಿಷ್ಠೆ ವ್ಯವಹಾರಚಾತುರ್ಯ, ಜಿತೇಂದ್ರಿಯತ್ವ, ಋಜುಸ್ವಭಾವ ಮುಂತಾದುವುಗಳು ಪ್ರಕಟವಾಗುವುವಲ್ಲವೆ! ಅರಮನೆಯ ಆ ಉದ್ಯೋಗದಲ್ಲಿ ಗುಲಾಬ್‌ರಾಯನ ಪ್ರತಿಷ್ಠೆ ಗೌರವಗಳೂ ಲೌಕಿಕ ಸಂಪತ್ತೂ ವಿಶೇಷರೀತಿಯಿಂದ ಅಭಿವೃದ್ಧಿಯಾದುವು. ಮಹಾರಾಜನ ಆಸ್ಥಾನದ ಸರದಾರ ವಿಕ್ರಮಜಿತ್ ಮತ್ತು ಕುಮಾರ ಸುಚೇತಸಿಂಹ ಇವರು ಕಪೂರ್ಥಲವನ್ನು ಬಿಟ್ಟು ಜಲಂಧರ್ ಪಟ್ಟಣಕ್ಕೆ ಬರಲಾಗಿ, ಗುಲಾಬರಾಯನಾದರೂ ಅವರೊಂದಿಗೇ ಜಲಂಧರ್ ಪಟ್ಟಣಕ್ಕೆ ಹೊರಟುಬಂದು ಮುಂದೆ

ಅಲ್ಲೇ ನೆಲೆಯಾಗಿ ನಿಂತನು. ಆತನಿಗೆ ಆರುಮಂದಿ ಗಂಡುಮಕ್ಕಳು ದರು. ಅವರಲ್ಲಿ ನಮ್ಮ ಕಥಾನಾಯಕರ ತಂದೆಯಾದ ನಾನಕಚಂದ್ ಎಂಬಾತನೇ ಜ್ಯೇಷ್ಠಪುತ್ರನು.

ನಾನಕಚಂದನು ಚಿಕ್ಕಂದಿನಲ್ಲಿ ಸ್ವಲ್ಪಮಾತ್ರ ಫಾರಸಿ ಮತ್ತು ಉರ್ದೂ ಭಾಷೆಗಳನ್ನಲ್ಲದೆ ಹೆಚ್ಚು ವಿದ್ಯೆಯನ್ನು ಅಭ್ಯಾಸಮಾಡಿದವನಲ್ಲ. ಆ ಕಾಲದಲ್ಲಿ ವಿದ್ಯೆಯ ಮಹತ್ವವೂ ಆವಶ್ಯಕತೆಯೂ ಈಗಿನಷ್ಟು ವಿಶೇಷವಾಗಿರಲಿಲ್ಲ. ಸರ್ಕಾರಿ ನೌಕರಿಯಲ್ಲಿ ಪ್ರವೇಶಿಸಬೇಕೆಂದು ಅಪೇಕ್ಷಿಸಿದವರಿಗೂ ಉನ್ನತ ವಿದ್ಯಾಭ್ಯಾಸದ ತಲೆಚೀಟಿ ಇರಬೇಕೆಂಬ ನಿರ್ಬಂಧವಿರಲಿಲ್ಲ. ಲಾಲಾ ನಾನಾಕಚಂದನಿಗೆ ಪ್ರಾರಂಭಕ್ಕೇ ಕಪೂರ್ಥಲ ಸಂಸ್ಥಾನದಲ್ಲಿ ಕಾಲಾ ಎಂಬ ಒಂದು ಊರಿನ ಠಾಣೇದಾರಿ ಉದ್ಯೋಗ ದೊರೆಯಿತು. ಉದ್ಯೋಗವು ಆ ತೇಜಸ್ವಿ ತರುಣನ ಧೈರ್ಯ ಸಾಹಸಗಳ ಫಲವಾಗಿ ಪ್ರಾಪ್ತವಾಗಿದ್ದಿತಾದರೂ, ಆತನ ಖಂಡಿತವಾದಿತನ-ಸತ್ಯನಿಷ್ಠೆ-ನಿರ್ದಾಕ್ಷಿಣ್ಯ ಮುಂತಾದುವುಗಳ ಮಧ್ಯೆ ಅದಕ್ಕೆ ಉಳಿಗಾಲವಿರಲಿಲ್ಲ. ಖಂಡಿತವಾದಿಯು ಲೋಕಕ್ಕೇ ವಿರೋಧಿಯಾಗತಕ್ಕುದು ಸ್ವಾಭಾವಿಕವಲ್ಲವೆ! ಹಾಗೆಯೇ ಮುಂದೆ ಕೆಲದಿನಗಳೊಳಗಾಗಿಯೇ ನಿರ್ದಾಕ್ಷಿಣ್ಯ ಪ್ರಕೃತಿಯ ನಾನಕಚಂದನು ತನ್ನ ಮೇಲ್ಪಟ್ಟ ಉದ್ಯೋಗಸ್ಥನ ಕೋಪಕ್ಕೆ ಪಾತ್ರನಾಗಬೇಕಾಯಿತು. ಆ ಕಾರಣದಿಂದ ಶೀಘ್ರದಲ್ಲೇ ತನ್ನ ಆ ಉದ್ಯೋಗಕ್ಕೆ ರಾಜೀನಾಮೆಕೊಟ್ಟು, ಬಿಡುಗಡೆ ಹೊಂದಿ ಜಲಂಧರಕ್ಕೆ ಹೊರಟುಬಂದನು.

ಆಗ ದೇಶವೆಲ್ಲ ಭಯಂಕರ ಉಪದ್ರವದಿಂದ ಪೀಡಿತವಾಗಿತ್ತು. ೧೮೫೭ ರಲ್ಲಿ ಉತ್ತರ ಭಾರತದಲ್ಲಿ ಅಲ್ಲೋಲಕಲ್ಲೋಲವನ್ನೆಬ್ಬಿಸಿದ್ದ ಸಿಪಾಯಿದಂಗೆಯು, ಇತರ ಭಾಗಗಳಲ್ಲಿ ವ್ಯಾಪಿಸಿದಂತೆ ಪಂಜಾಬಿನಲ್ಲಿ ವ್ಯಾಪಿಸಲಿಲ್ಲ-ಹಾಗೆ ವ್ಯಾಪಿಸದಿದ್ದುದು ಮಾತ್ರವಲ್ಲ! ಪಂಜಾಬು ದೇಶೀಯರು ಆಗ ಬ್ರಿಟಿಷ್ ಸೈನ್ಯದಲ್ಲಿ ಉದ್ಯೋಗವನ್ನು ಸ್ವೀಕರಿಸಿ ಇಂಗ್ಲೀಷರಿಗೆ ಸಹಾಯಕರಾಗಿ ವಿಪ್ಲವಕಾರಿಗಳ ವಿರುದ್ಧವಾಗಿ ಯುದ್ಧವನ್ನು ಸಹ ಮಾಡಿದರು. ಹತ್ತುಮಂದಿಯಂತೆ ನಾನಕಚಂದನಾದರೂ ಸೈನ್ಯಖಾತೆಗೆ ಸೇರಿ, ಸವಾರನಾಗಿ ತನ್ನ ಭಾಗ್ಯಪರೀಕ್ಷೆ ಮಾಡಲು ಉದ್ಯೋಗದಮೇಲೆ ಹೊರಟು ನಡೆದನು. ಆತನ ಕರ್ತವ್ಯನಿಷ್ಠೆಯೂ, ನಂಬಿಕೆ ಸ್ವಾಮಿಭಕ್ತಿಗಳೂ ಋಜುವರ್ತನೆಯೂ

ಮೇಲ್ಪಟ್ಟ ಅಧಿಕಾರಿಗಳಿಗೆ ಆತನ ವಿಷಯದಲ್ಲಿ ಅಧಿಕ ಪ್ರೀತಿ ವಿಶ್ವಾಸಗಳನ್ನುಂಟುಮಾಡಿದುವು. ಮುಂದೆ ಕೆಲದಿನಗಳಲ್ಲೇ ಆತನು 'ಕೊತ್ವಾಲ' ಎಂಬ ಉದ್ಯೋಗಕ್ಕೆ ನಿಯಮಿಸಲ್ಪಟ್ಟನು. ಹೀಗೆ ಉತ್ತೇಜನ ದೊರೆತುದರಿಂದ ಆ ಸ್ವಾಮಿಶಿಷ್ಯ ನಾನಕಚಂದನು ಹೆಚ್ಚು ಉತ್ಸಾಹದಿಂದ ಕೆಲಸಮಾಡತೊಡಗಿ ಪಹರನ್‌ಪುರವನ್ನು ನಿಃಶಸ್ತ್ರ ಮಾಡುವಿಕೆಯಲ್ಲೂ, ಮೇಲಿಂಘಾ ಎಂಬಲ್ಲಿ ದಂಗೆ ಎದ್ದಾಗ ಅದನ್ನು ಅಡಗಿಸಿ ದಂಗೆಕಾರರನ್ನು ಶಿಕ್ಷೆಗೆ ಗುರಿಮಾಡಿದುದರಲ್ಲೂ ಶ್ರದ್ಧೆವಹಿಸಿ ಕೆಲಸಮಾಡಿದನು. ರಾಜಭಕ್ತಿಸೂಚಕ ಈ ಸೇವೆಗಳಿಂದ ಸಂತುಷ್ಟವಾದ ಸರಕಾರವು ಆತನಿಗೆ ಪೋಲೀಸು ಇನಸ್ಪೆಕ್ಟರ ಅಧಿಕಾರವನ್ನು ಕೊಟ್ಟು ಗೌರವಿಸಿತು. ತರುವಾಯ ದಿನದಿನಕ್ಕೂ ಹಾಗೆಯೇ ಅಭಿವೃದ್ಧಿಯಾಗುತ್ತಾ ನಾನಕಚಂದನು ಕೊನೆಗೆ ತಹಶೀಲ್ದಾರಿಯ ಪದವಿಯನ್ನೂ ಪಡೆದನು.

## — ಜನ್ಮ - ಬಾಲ್ಯ —

ಲಾಲಾ ನಾನಕಚಂದನು ಜಲಂಧರಿನಲ್ಲಿ ನೌಕರಿಯಲ್ಲಿದ್ದಾಗಲೇ, ಆ ಜಿಲ್ಲೆಗೆ ಸೇರಿದ ತಲವನ್ ಎಂಬ ಗ್ರಾಮದಲ್ಲಿ ವಿಕ್ರಮಶಕೆ ೧೮೧೩ (ಕ್ರಿ.ಶ. ೧೮೫೬.) ನೆಯ ಸಂ|ದ ಫಾಲ್ಗುಣ ಶುದ್ಧ ತ್ರಯೋದಶಿಯ ಶುಭದಿನದಲ್ಲಿ ನಮ್ಮ ಕಥಾನಾಯಕರ ಜನ್ಮವಾಯಿತು. ಶಿಶು ಜನನವಾದ ವೃತ್ತಾಂತವನ್ನು ಕೇಳಿದ ನಾನಕಚಂದಜೀಯು ಊರಿಗೆಬಂದು, ಅದರ ಪ್ರಸನ್ನ ಮುಖವನ್ನೂ ವಿಶಾಲನೇತ್ರಗಳನ್ನೂ ಭವ್ಯಾಕೃತಿಯನ್ನೂ ನೋಡಿ ಆ ತನ್ನ ಮಗನು ಯುಕ್ತವಯಸ್ಸಿನಲ್ಲಿ ಬಹು ಪ್ರಸಿದ್ಧನಾಗುವ ಲಕ್ಷಣಗಳಿವೆಯೆಂದುಕೊಂಡನು. ಜಾತಕರ್ಮ ನಾಮಕರಣ ಮಹೋತ್ಸವಗಳು ಅತಿ ವಿಜೃಂಭಣೆಯಿಂದ ನಡೆದು, ಬಂಧುಗಳೂ ಮಿತ್ರಪರಿವಾರಗಳವರೂ ಸಾಧುಸಜ್ಜನರೂ, ಅನೇಕ ಮಂದಿ ಬಡಜನರೂ ದಿವ್ಯ ಭೋಜನಾದಿಗಳಿಂದ ತೃಪ್ತಿಪಡಿಸಲ್ಪಟ್ಟರು. ಶಿಶುವಿಗೆ ಮುನ್ಷಿರಾಂ ಎಂದು ನಾಮಕರಣವಾಯಿತು. ಲಾಲಾ ನಾನಕಚಂದನಿಗೆ ಮುನ್ಷಿರಾಮನು ಹುಟ್ಟುವುದಕ್ಕೆ ಮೊದಲೇ ಮೂರೂಮಂದಿ ಪುತ್ರರಿದ್ದರು. ನಾನಕಚಂದನ ಪತ್ನಿಯು ಸುಶೀಲಳೂ ದೈವಭಕ್ತಳೂ ಪತಿವ್ರತೆಯೂ ಆದ ಸಾಧ್ವೀಮಣಿಯು.

ಬಳೆಗೆ ತನ್ನ ಪತಿ-ಪುತ್ರರಲ್ಲಿ ಅತಿಶಯ ಪ್ರೇಮ ವಾತ್ಸಲ್ಯಗಳಿದ್ದುವು. ಅವರ ಮನೆಯು ಆ ಗೃಹಿಣಿಯ ಸಾನ್ನಿಧ್ಯದಿಂದ ಸದಾ ತುಂಬಿದಂತಿದ್ದು ಅತಿಥಿ ಅಭ್ಯಾಗತರ ಆದರಣೆಗೆಡೆಯೆನಿಸಿ ಶಾಂತತೆಯಿಂದ ಶೋಭಿಸುತ್ತಿದ್ದಿತು.

ಲಾಲಾ ನಾನಕಚಂದನು ತನ್ನ ಉದ್ಯೋಗಪ್ರಯುಕ್ತ ಬನಾರಸ್ (ಕಾಶಿ) ಬಲಿಯಾ, ಬರೇಲಿ, ಮಿರ್ಝಾಪುರ ಮುಂತಾದ ಸ್ಥಳಗಳಲ್ಲಿ ಬಹುಕಾಲ ವಾಸಿಸಿದ್ದನು. ಪೋಲೀಸು ಇಲಾಖೆಯಲ್ಲಿ ಅಧಿಕಾರ ಸ್ಥಾನ ವನ್ನು ಹೊಂದುವುದಕ್ಕೆ ಹಿಂದೆ ಬಹು ದಿನಗಳವರೆಗೆ ಆತನು ಬನಾರಸಿನಲ್ಲಿ ಕೊತ್ವಾಲನಾಗಿ ಕೆಲಸಮಾಡಿದ್ದನು. ಆದರೆ ಪೋಲೀಸು ಇನಸ್ಪೆಕ್ಟರ ಅಧಿ ಕಾರ ಪ್ರಾಪ್ತವಾದಮೇಲೆಯೇ ಆತನು ವಿಶೇಷ ಕೀರ್ತಿ ಪ್ರತಿಷ್ಠೆಗಳನ್ನು ಸಂಪಾದಿಸಿ ಸರಿಯವರಲ್ಲಿ ಗಣನೀಯನೆನ್ನಿಸಿಕೊಂಡನು. ಬಹು ಪ್ರಚಂಡರೆ ನಿಸಿದ್ದ ಡಕಾಯಿತೀ ಕಳ್ಳರನ್ನು ಪತ್ತೇಮಾಡಿ ಹಿಡಿದು ಶಿಕ್ಷೆಗೆ ಗುರಿಪಡಿಸು ವುದರಲ್ಲಿ ನಾನಕಚಂದನಿಗೆ ಬಹು ಯಶಸ್ಸು ಲಭ್ಯವಾಯಿತು.-ಪೋಲೀಸು ಉದ್ಯೋಗದಲ್ಲಿದ್ದರೂ ಆತನು ತನ್ನ ಮತಧರ್ಮ ಪದ್ಧತಿಗಳಿಗೆ ಎಂದೂ ಲೋಪ ತಂದವನಲ್ಲ. ಧರ್ಮಪರಾಯಣರೂ ಈಶ್ವರಭಕ್ತರೂ ಆದ ಆ ದಂಪತಿಗಳು ಅನ್ಯೋನ್ಯತೆಯಿಂದ ಸದಾ ಸಾಧುಸಂತರ ಸೇವೆಯಲ್ಲಿ ತತ್ಪರ ರಾಗಿ ನಡೆದುಕೊಳ್ಳುತ್ತಿದ್ದರು. ಗೋಸ್ವಾಮಿ ತುಲಸೀದಾಸಕೃತ ರಾಮಾ ಯಣ ಪಠನವಿಲ್ಲದೆ ಅವರು ಒಂದು ದಿನವೂ ಆಹಾರಗ್ರಹಣಮಾಡಿದುದಿಲ್ಲ. ಊರಿನಲ್ಲಿರಲಿ ಪ್ರಯಾಣದಲ್ಲಿರಲಿ ನಾನಕಚಂದನು ಎಂದೂ ದೇವಪೂಜೆಗೆ ವಿಘ್ನತಂದುದಿಲ್ಲ. ಪೋಲೀಸು ಅಧಿಕಾರ, ಅದರಲ್ಲೂ ಉಚ್ಚಪದ, ಮೇ ಲಾಗಿ ೧೯ನೆಯ ಶತಮಾನದ ಅಂತ್ಯಭಾಗ, ಇಂಥಾದ್ದರಲ್ಲ ಲಂಚ ರುಷುವ ತ್ತುಗಳ ಸುರಿಮಳೆಗೆ ಏನು ಕೊರತೆಯಿದ್ದೀತು! ಆದರೆ ಲಾಲಾ ನಾನಾಕ ಚಂದನು ಆ ಬಗೆಯ ಅಸಭ್ಯ ಸಂಪಾದನೆಗಳಿಗೆ ಮನಗೊಡದೆ ತನ್ನ ಸಹೋ ದ್ಯೋಗಿಗಳಲ್ಲ ಅಧಿಕ ನಿಸ್ಪೃಹಿಯೂ, ಸತ್ಯವಾದಿಯೂ ಎಂಬ ಹೆಸರುವಾಸಿಗೆ ಪಾತ್ರನಾಗಿದ್ದನು.

ಬಾಲಕ ಮುನ್ಷೀರಾಮನು ಮಾತಾಪಿತೃಗಳನ್ನು ತನ್ನ ವಿವಿಧ ಬಾಲಲೀಲೆಗಳಿಂದ ಸಂತೋಷಪಡಿಸುತ್ತ ಅರೋಗದೃಢಕಾಯನಾಗಿ ದಿನ ದಿನಕ್ಕೆ ಅಭಿವೃದ್ಧಿಯಾದನು. ದೊಡ್ಡವನಾದಂತೆಲ್ಲ, ತನ್ನ ತಂದೆಯ ಒಳೆ

ಯಲ್ಲೇ ಇರುತ್ತಲೂ-ಉದ್ಯೋಗನಿಮಿತ್ತ ಆತನು ಎಲ್ಲಿಗೆ ಪ್ರಯಾಣಮಾಡಿದರೆ ತಾನೂ ಅಲ್ಲಿಗೆಲ್ಲಾ ಹೋಗುತ್ತಾ, ಆತನೊಂದಿಗಿದ್ದು ವಿವಿಧ ವಿಚಾರಗಳಲ್ಲಿ ಅನುಭವವನ್ನು ಸಂಪಾದಿಸಿಕೊಳ್ಳುತ್ತಿದ್ದನು. ಯುಕ್ತವಯಸ್ಸಿನಲ್ಲಿ ಮುನ್ಷೀರಾಮನಿಗೆ ಅಕ್ಷರಾಭ್ಯಾಸವಾಗಿ ಬಾಂದೇ ಎಂಬ ಊರಿನಲ್ಲಿ ಪ್ರಾರಂಭ ಶಿಕ್ಷಣವು ಮುಗಿಯಿತು. ಮುಂದೆ ಬಲಿಯಾ, ಬರೇಲೀ ಬನಾರಸ್ ಎಂಬ ಸ್ಥಳಗಳಲ್ಲಿ ಮಧ್ಯಮ ಉನ್ನತ ಶಿಕ್ಷಣಗಳು ನಡೆದುವು. ಬನಾರಸ್ ಕಲೊಜಿಯೆಟ್ ಹೈಸ್ಕೂಲಿನಲ್ಲಿ ಓದುತ್ತಿದ್ದಾಗ್ಗೆ ಮುನ್ಷೀರಾಮನ ಪ್ರತಿಭೆಯು ಆತನ ತಂದಯನ್ನೂ ಮೆಚ್ಚಿಸಿತು. ವಿದ್ಯಾರ್ಥಿ ಧರ್ಮನಿಷ್ಠೆಯಲ್ಲಿ ನಿಷ್ಣಾತನಾಗಿದ್ದ ಮುನ್ಷೀರಾಮನು, ಆಗ ಆ ಪಾಠಶಾಲೆಯ ಮುಖ್ಯಾಧ್ಯಾಪಕರಾಗಿದ್ದ ಪಂ. ಮಥುರಾ ಪ್ರಸಾದಜೀಯವರ ಪ್ರೀತಿ ವಿಶ್ವಾಸಗಳಿಗೆ ಪಾತ್ರನಾದನು. ಆ ವರ್ಷವೇ ಆತನು ಮೆಟ್ರಿಕ್ಯುಲೇಷನ್ ಪರೀಕ್ಷೆಗೆ ಉಮೇದುವಾರನಾಗಿ ಸೇರಿದುದು. ಆದರೆ ಹಾಗೆ ಪರೀಕ್ಷೆಗೆ ಕುಳಿತು, ಹೊರಕ್ಕೆಬಂದ ಕೆಲವು ದಿನಗಳೊಳಗಾಗಿಯೇ ಆತನ ಪ್ರಿಯಮಾತೃವಿನ ದೇಹಾಂತವಾಯಿತು. ಪ್ರೀತಿಮಯಿಯಾದ ತಮ್ಮ ಆ ತಾಯಿಯ ಅಗಲಿಕೆಯು ಆತನ ಹೃದಯದಲ್ಲಿ ಎಂತಹ ವೇದನೆಯನ್ನು ಉಂಟುಮಾಡಿರಬಹುದೆಂಬುದನ್ನು ಹೇಳಬೇಕಾದ್ದೇನು! ಇತ್ತ ಮಾತೃವಿಯೋಗದ ದುಃಖವು ಪ್ರಾಪ್ತವಾದ ಆ ಸಂದರ್ಭದಲ್ಲೇ, ಅತ್ತ ತಾನು ಪರೀಕ್ಷೆಯಲ್ಲಿ ಉತ್ತೀರ್ಣನಾದುದರ ಸಂತೋಷವಾರ್ತೆಯೂ ತಲುಪಿತು. ಆ ಕುಟುಂಬದಲ್ಲೆಲ್ಲ ಇಂಗ್ಲಿಷ್ ವಿದ್ಯಾಭ್ಯಾಸದಲ್ಲಿ ಅಷ್ಟುಮಟ್ಟಿನ ಉನ್ನತಿಯನ್ನೂ ಪ್ರತಿಭೆಯನ್ನೂ ಗಳಿಸಿದವನು ಮುನ್ಷೀರಾಮನೊಬ್ಬನೇ! ಆದುದರಿಂದ ಮನೆಯವರಿಗೆ ಇದರಿಂದ ಉಂಟಾದ ಸಂತೋಷವೂ ಅಲ್ಪವಾಗಿರಲಿಲ್ಲ. ಹೀಗೆ ವ್ಯಸನ-ಸಂತೋಷಗಳ ಮಿಶ್ರಣದಿಂದ ಆ ಕುಟುಂಬದವರಲ್ಲಿ ಒಂದು ಬಗೆಯ ವಿಚಿತ್ರ ಮನಸ್ಥಿತಿಯುಂಟಾಗಿದ್ದಿತು.

ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ಉತ್ತೀರ್ಣನಾದ ತರುವಾಯ ಮುನ್ಷೀರಾಮನು ಪುನಃ ಕಾಲೇಜಿನಲ್ಲಿ ಅಭ್ಯಾಸವನ್ನು ಮುಂದರಿಸಿದನು. ಆಗ ಬನಾರಸ್ ಕಾಲೇಜಿನಲ್ಲಿ ಬಹು ಪ್ರಸಿದ್ಧರಾದ ಅಧ್ಯಾಪಕರಿದ್ದು ಅವರು ಸದಾ ವಿದ್ಯಾರ್ಥಿಗಳ ಅಭಿವೃದ್ಧಿಯಲ್ಲೇ ತತ್ಪರರಾಗಿದ್ದರು. ಋಗ್ವೇದ ಮತ್ತು ರಾಮಾ

ಯಣಗಳನ್ನು ಇಂಗ್ಲೀಷ್ ಭಾಷೆಯಲ್ಲಿ ಅನುವಾದ ಮಾಡಿದ್ದ ಮಿ|| ಗ್ರಿಫಿತ್ ಸಾಹೇಬನೆಂಬ ವಿದ್ವಾಂಸನು ಆಗ ಆ ಕಾಲೇಜಿನ ಅಧ್ಯಕ್ಷನಾಗಿದ್ದನು. ಇಂಗ್ಲಿಷ್ ಭಾಷಾವಿಶಾರದ (ಪ್ರೊಫೆಸರ್) ನಾದ ಪಂ. ಲಕ್ಷ್ಮೀಶಂಕರ ಎಂ. ಎ. ಎಂಬಾತನ ಪ್ರಭಾವವಾದರೂ ವಿದ್ಯಾರ್ಥಿಗಳ ಮನಸ್ಸಿನಮೇಲೆ ವಿಶೇಷರೀತಿಯ ಪರಿಣಾಮವನ್ನುಂಟುಮಾಡುವಂತಿತ್ತು. ಆ ಮಹಾಪಂಡಿತರ ಸಾಹಿಧ್ಯದಲ್ಲಿದ್ದು ಸಾಗುತ್ತಿದ್ದರೂ ಮುರ್ಚೀರಾಮನ ಕಾಲೇಜು ವಿದ್ಯಾಭ್ಯಾಸವು ಒಂದು ವಿಚಿತ್ರಗತಿಯನ್ನು ಹೊಂದಿತ್ತು. ಕೆಲಕೆಲವು ವೇಳೆ ವಿವಿಧ ಗ್ರಂಥಗಳನ್ನು ಓದುವಿಕೆಯ ಹಂಬಲ, ಕೆಲವು ವೇಳೆ ಕವಿತಾರಚನೆಯ ಹುಚ್ಚು, ಮತ್ತೆ ಕೆಲವೇಳೆಗಳಲ್ಲಿ ಉಪನ್ಯಾಸದ ಲಹರಿ, ಬೇರೆ ಕೆಲವು ವೇಳೆಗಳಲ್ಲಿ ವಿವಿಧ ವಿಚಾರಗಳಮೇಲೆ ವ್ಯಾಸಗಳನ್ನು ಬರೆವ ವ್ಯಸನ! ಉನ್ನತ ಉದ್ಯೋಗದಲ್ಲಿದ್ದ ಸಾನಕಚಂದನ ಪುತ್ರನಾದ ಆತನಿಗೆ ಮನೆಯಲ್ಲಿ ದ್ರವ್ಯದ ಕೊರತೆಯಿರಲಿಲ್ಲ. ತಂದೆಯ ಉದ್ಯೋಗದ ಬಲದಿಂದ ನೆರೆಹೊರೆಯವರಲ್ಲಿ ವಿಶೇಷ ಪ್ರತಿಷ್ಠೆಗೂ ಎಡೆಯಿತ್ತು. ಹೀಗೆ ಆಗ ಮಾತೃವಿಯೋಗದ ವ್ಯಸನವೊಂದಲ್ಲದೆ, ಆತನು ಇತರ ಎಲ್ಲಾ ವಿಷಯಗಳಲ್ಲೂ ನಿಶ್ಚಿಂತನಾಗಿದ್ದನು. ಬಾಲಕರಿಗೆ ಇಂತಹ ನಿಶ್ಚಿಂತ-ನಿರ್ಬಾಧಕ ಸ್ಥಿತಿಯು ಲಭಿಸಿ ವಿದ್ಯಾಭ್ಯಾಸವು ಸಾಗುವುದೂ ಸುಕೃತ ವಿಶೇಷವು. ಆದರೆ ಅದು ಅನೇಕರ ಲಭ್ಯದಲ್ಲಿರುವುದಿಲ್ಲ.

ಬನಾರಸಿನಲ್ಲಿ ಮುರ್ಷೀರಾಮನು ವಾಸಿಸುತ್ತಿದ್ದಾಗ್ಗೆ ನಡೆದ ಒಂದೆರಡು ಘಟನೆಗಳ ವಿವರಣೆಯು ಆತನ ಭವಿಷ್ಯ ಚರಿತ್ರೆಯಮೇಲೆ ಒಂದು ಬಗೆಯ ಪ್ರಕಾಶವನ್ನುಂಟುಮಾಡತಕ್ಕುದಾಗಿರುವುದರಿಂದ ಅದನ್ನು ಇಲ್ಲಿ ಕೊಡಲೆಳಸುತ್ತೇವೆ. ೧೮೭೬ ನೆಯ ಸಂ|| ದಲ್ಲಿ ಇಂಗ್ಲೆಂಡಿನ ಎಡ್ವರ್ಡ್ ರಾಜಕುಮಾರನು ಭಾರತ ಪರ್ಯಟನೆಗೆಂದು ಬಂದಿದ್ದಾಗ್ಗೆ ಬನಾರಸ್ ಕಾಲೇಜನ್ನೂ ಸಂದರ್ಶಿಸುವುದಕ್ಕಾಗಿ ಬರಬೇಕೆಂದು ಅಲ್ಲಿಯ ಅಧಿಕಾರಿಗಳು ಆಹ್ವಾನಿಸಿದರು. ಅದೇ ಸಂದರ್ಭದಲ್ಲೇ ಸುತ್ತಮುತ್ತಿನ ಲಕ್ಷಾಂತರ ಜನರು, ರಾಜಪುತ್ರನ ದರ್ಶನಕ್ಕಾಗಿ ಬಂದು ನೆರೆದರು. ರಾಜಪುತ್ರನಿಗೆ ಸಲಾಮು ಹಾಕಿ ಅನುಗ್ರಹ ಸಂಪಾದನೆಮಾಡಿಕೊಳ್ಳುವುದಕ್ಕಾಗಿ ಅನೇಕ ಮಂದಿ ಸಂಸ್ಥಾನಾಧೀಶರೂ ಬಂದು ಸೇರಿದರು. ಆದರೆ, ಆ ಗಲಭೆಯಲ್ಲಿ

ಬ್ರಿಟಿಷ್ ಫೌಜಿನ ಒಬ್ಬ ಸಣ್ಣ ಅಧಿಕಾರಿಯೂ ನಮ್ಮಾ ಸಂಸ್ಥಾನಾಧೀಶರ ಮೇಲೆ ಏರಿಹೋಗಿ ಕಣ್ಣುಬಿಟ್ಟು ಅಂಜಿಸುತ್ತಾ, ಗದರಿಸುತ್ತಾ ಕೇವಲ ಅಪರಾಧಿಯೋ ಎಂಬಂತೆ ಅವರ ವಿಷಯದಲ್ಲಿ ವರ್ತಿಸುತ್ತಿದ್ದ ಆ ನೋಟವು ಕೋಮಲ ಹೃದಯದ ಮುನ್ಷೀರಾಮನ ಮನಸ್ಸನ್ನು ಬಹುಮಟ್ಟಿಗೆ ಮರು ಗಿಸಿತು.—'ಇದೇನು, ಪರದೇಶೀಯ ಕೇವಲ ಒಬ್ಬ ನೌಕರನು ಲಕ್ಷಾಂತರ ಜನರ ಯೋಗಕ್ಷೇಮ ಕರ್ತರಾದ ನಮ್ಮ ಸಂಸ್ಥಾನಾಧೀಶರನ್ನು ಇಷ್ಟು ತುಚ್ಛಭಾವನೆಯಿಂದ ಕಾಣುವ ಸ್ಥಿತಿಯು ಪ್ರಾಪ್ತಿಸಿತಲ್ಲಾ! ಇದೆಂತಹ ಅಧಮ ಸ್ಥಿತಿಯು!' ಎಂದುಕೊಂಡನು.

ಲಾಲಾ ನಾನಕಚಂದನ ಧರ್ಮನಿಷ್ಠೆ ಭಗವದ್ಭಕ್ತಿಗಳ ವಿಚಾರವನ್ನು ಕುರಿತು ಮೇಲೊಂದೆಡೆಯಲ್ಲಿ ಪ್ರಸ್ತಾಪಿಸಿದೆಯಲ್ಲವೆ! ಆಸ್ತಿಕನಾದ ಮನೆಯ ಯಜಮಾನನ ಆ ಆಚರಣೆಯು ಮನೆಯಲ್ಲಿ ಹುಡುಗರು ಮಕ್ಕಳಿಗೆಲ್ಲ ಉದಾಹರಣಸ್ವರೂಪವಾಗಿ ಎಲ್ಲರಲ್ಲೂ ವ್ಯಾಪಿಸಿತು. ಮಿಕ್ಕ ಮೂವರು ಮಕ್ಕಳೂ ಭಗವದ್ಭಜನೆಯಲ್ಲೂ ಪೂಜಾ ಆರಾಧನೆಗಳಲ್ಲೂ ತಮ್ಮ ತಂದೆಯೊಂದಿಗೆ ಬೆರೆಯುತ್ತಿದ್ದರು. ಮುನ್ಷೀರಾಮನು ಮಾತ್ರ ಧ್ಯಾನ ಪರ ಚಿತ್ತವೃತ್ತಿಯುಳ್ಳವನಾಗಿದ್ದು, ಚಿಕ್ಕಂದಿನಿಂದಲೂ, ಆಡಂಬರದ ಬಾಹ್ಯ ಪೂಜೆ ಅಭಿಷೇಕ ಪುಷ್ಪಾರ್ಚನೆ ನೈವೇದ್ಯಾದಿಕಲಾಪಗಳಲ್ಲಿ ಹೆಚ್ಚು ಅಭಿಲಾಷೆಯಿಲ್ಲದೆ, ಸರ್ವಶಕ್ತನೂ ಲೋಕನಾಯಕನೂ ಆದ ಪರಮೇಶ್ವರನ ಅನಂತ ಮಹಿಮೆಗಳ ವ್ಯಕ್ತಸ್ವರೂಪವಾದ ಸೃಷ್ಟಿಯಲ್ಲೇ ಭಗವಂತನನ್ನು ಕಂಡು, ಧ್ಯಾನರೂಪದಲ್ಲಿ ಆತನ ಸೇವೆಗಳನ್ನು ನಡಿಸುತ್ತಿದ್ದನು. ಆದರೂ ಮಹಾ ಪುಣ್ಯಕ್ಷೇತ್ರವಾದ ಆ ಬನಾರಸಿನಲ್ಲಿ ಒಂದಾನೊಂದು ವೇಳೆ, ಪ್ರತಿನಿತ್ಯದ ಪ್ರಾತಃಸಾಯಂಕಾಲಗಳಲ್ಲಿ ಪಂಚದೇವತಾ ದರ್ಶನಮಾಡಿ ಪ್ರದಕ್ಷಿಣೆ ನಮಸ್ಕಾರಗಳನ್ನು ಒಪ್ಪಿಸಿ ಪ್ರಸಾದವನ್ನು ಸ್ವೀಕರಿಸದ ವಿನಹ ಅನ್ನೋದಕಗಳನ್ನು ಗ್ರಹಿಸುವುದಿಲ್ಲವೆಂಬ ಒಂದು ವ್ರತವನ್ನು ಕೈಕೊಂಡು ಕೆಲ ಕಾಲ ನಡೆಯಿಸಿದ್ದನು. ಹೀಗಿರುವಲ್ಲಿ ಒಂದು ದಿನ ದೇವತಾದರ್ಶನಕ್ಕೆಂದು ವಿಶ್ವನಾಥನ ಆಲಯದೊಳಕ್ಕೆ ಪ್ರವೇಶಿಸಬೇಕೆಂದೆಣಿಸಿ ದ್ವಾರದ ಸಮೀಪಕ್ಕೆ ಬರಲು ಅಲ್ಲಿ ಜನಗಳ ಸಂದಣಿ ವಿಶೇಷವಾಗಿತ್ತು. ಒಳಕ್ಕೆ ಒಬ್ಬರನ್ನೂ ಬಿಡುತ್ತಿರಲಿಲ್ಲ. ಕಾರಣವೇನೆಂದು ವಿಚಾರಿಸಲು,-'ರೀವಾ

ಸಂಸ್ಥಾನದ ಮಹಾರಾಣಿಯವರು ದೇವತಾದರ್ಶನಕ್ಕೆ ಬಂದಿದ್ದಾರೆ. ಅವರು ಪೂಜೆಯನ್ನು ತೀರಿಸಿಕೊಂಡು ಹೊರಕ್ಕೆ ಬರುವವರೆಗೆ ಮತ್ತಾರನ್ನೂ ಒಳಕ್ಕೆ ಬಿಡಲಾಗುವುದಿಲ್ಲ' ಎಂಬದಾಗಿ ಬಾಗಿಲಲ್ಲಿದ್ದ ಸೇವಕನು ಹೇಳಿದನು. ಇದನ್ನು ಕೇಳಿದ ತರುಣ ಮುರ್ಷೀರಾಮನು ಮನಸ್ಸಿನಲ್ಲಿ -'ಏನು ಭಗವದಾಲಯದ್ವಾರವೂ ಭಕ್ತರ ಪ್ರವೇಶಕ್ಕೆ ಆಸ್ಪದವಿಲ್ಲದಂತೆ ಮುಚ್ಚಲ್ಪಡಬೇಕೇ! ಇಂತಹ ಸ್ಥಳದಲ್ಲಿಯೂ ವಿಧಿನಿಷೇಧಗಳುಂಟಾಗಬೇಕೇ! ಒಬ್ಬ ರಾಣಿಯು ವಿಶ್ವನಾಥಸ್ವಾಮಿಯ ದೃಷ್ಟಿಯಲ್ಲಿ ಮಿಕ್ಕ ಜನರಿಗಿಂತಲೂ ಹೆಚ್ಚು ಗೌರವಾದರಣೆಗಳಿಗೆ ಪಾತ್ರಳಾಗುವಳೆಂಬುದರ ಅರ್ಥವೇನು?' ಎಂಬ ವಿಚಾರವು ಉತ್ಪನ್ನವಾಯಿತು. ಒಡನೆ ಬಹು ಖಂಡಿತ ಪ್ರಕೃತಿಯ ಆ ಭಕ್ತವರ ಮುರ್ಷೀರಾಮನು ನಾಸ್ತಿಕವರ ಮುರ್ಷೀರಾಮನಾಗಿ ವಿಶ್ವನಾಥಸ್ವಾಮಿಯ ಆಲಯದ್ವಾರದಿಂದ ಹಿಂದಿರುಗಿಬಿಟ್ಟನು.

ಮುಂದೊಂದು ದಿನ ರೋಮನ್ ಕ್ಯಾಥೋಲಿಕ್ ಕ್ರೈಸ್ತ ಮಂದಿರದಿಂದ ಆಗುತ್ತಿದ್ದ ಗಂಟೆಯು ಆತನಿಗೆ ಬಹು ಮನೋಹರವಾಗಿದ್ದಂತೆ ಕೇಳಬಂತು. ಆತನು ನೇರವಾಗಿ ಚರ್ಚಿನೊಳಕ್ಕೆ ನಡೆದು ಅಲ್ಲಿ ನಡೆಯುತ್ತಿದ್ದ ಪ್ರಾರ್ಥನೆಯನ್ನು ಕೇಳಿದನು. ಒಬ್ಬ ಹಿಂದೂ ತೇಜಸ್ವಿ ಯುವಕನು ಆಕರ್ಷಿತನಾಗಿ ತಾನಾಗಿಯೇ ಚರ್ಚಿನೊಳಕ್ಕೆ ಬಂದುದು ಒಂದು ಉತ್ತಮ ಬೇಟೆಯು ಲಭಿಸಿದಂತಾಯಿತೆಂದು ಭಾವಿಸಿದ್ದ ಆ ಚರ್ಚಿನ ಪಾದರಿಯು ಆತನ ಸಮೀಪಕ್ಕೆ ಬಂದು ಒಳ್ಳೆಯ ಮಾತುಗಳಿಂದ ಉಪಚರಿಸಿ, ತನ್ನ ಬಲೆಯೊಳಕ್ಕೆ ಸಿಕ್ಕಿಸಿಕೊಳ್ಳಲು ಹವಣಿಸತೊಡಗಿದನು. ಆದರೆ, ಹಾಗೆ ಆತನ ಬಳಿಗೆ ಕೆಲವು ದಿನಗಳು ಹೋಗಿಬರುವುದರೊಳಗಾಗಿ, ಆತನ ಚರ್ಯೆಯು ಅಸಹ್ಯತೋರಿ ಮುಂದೆ ಮುರ್ಷೀರಾಮನು ಚರ್ಚಿನಕಡೆಗಾಗಲಿ, ಆ ಪಾದರಿಯ ಬಳಿಗಾಗಲಿ ಹೋಗಿಬರುವುದನ್ನು ನಿಲ್ಲಿಸಿಬಿಟ್ಟನು.

ಮುರ್ಷೀರಾಮನು ಬನಾರಸಿನಲ್ಲಿ ಕಾಲೇಜು ವಿದ್ಯಾಭ್ಯಾಸಮಾಡುತ್ತಿರುವಾಗ್ಗೆ ಕೆಲಕಾಲ - ಲಾಲಾ ನಾನಕಚಂದನು ಉದ್ಯೋಗ ನಿಮಿತ್ತ ಜಲಂಧರ್ ಮುಂತಾದ ಸ್ಥಳಗಳಲ್ಲಿರುತ್ತಿದ್ದುದರಿಂದ-ಭಾರತೇಂದು ಬಾಬೂ ಹರಿಶ್ಚಂದ್ರ ಎಂಬಾತನ ಸಹವಾಸದಲ್ಲಿ ಎದ್ದು ಕುಳಿತು ಮಾಡುತ್ತಿದ್ದನು.

ಇದರಿಂದ ಬಹು ಆಡಂಬರದ ವಸ್ತ್ರ ಭೂಷಣಾದಿಗಳನ್ನು ಧರಿಸಿಕೊಳ್ಳು ತ್ತಿದ್ದ ಬಾಬೂವಿನ ನಡೆತೆಯು ಆ ಯುವಕನ ಕಣ್ಮನಗಳನ್ನು ಸೆಳೆಯುವ ಕಾಶ ಉಂಟಾಯಿತು. ಆಗಾಗ ಅವರ ಸೆಳೆತಕ್ಕೆ ಒಳಪಟ್ಟು ತನ್ನ ದೇಹ ವನ್ನು ಬಗೆಬಗೆಯಲ್ಲಿ ಸಿಂಗರಿಸಿಕೊಂಡು ತನ್ನ ಮಿತ್ರಮಂಡಲಿಯ ಎದು ರಿಗೆ ಮೆರೆಯುವ ಇಚ್ಛೆಯೂ ಮನಸ್ಸಿನಲ್ಲಿ ಉತ್ಪನ್ನವಾಗುತ್ತಿತ್ತು. ಆದರೆ ಆಡಂಬರದ ಉದಾಹರಣೆಯಾಗಿ ಭಾರತೇಂದು ಬಾಬೂ ಇದ್ದಂತೆಯೇ, ಸೌಮ್ಯತೆ-ಸಾದಾ ಜೀವನಗಳ ಉದಾಹರಣೆಯಾಗಿ ಸ್ವಾಮಿ ಬಾಬೂ ರಾಮ ಕೃಷ್ಣವರ್ಮರೆಂಬುವರೂ ಇದ್ದರು. ಈ ಉದಾಹರಣೆಯಾದರೂ ಆಗಾಗ ಆತನ ಮನಸ್ಸಿನಮೇಲೆ ತನ್ನ ಪ್ರಭಾವವನ್ನು ಬೀರದಿರುತ್ತಿರಲಿಲ್ಲ. ಈಗ ಸುಪ್ರಸಿದ್ಧ ದೇಶಭಕ್ತರೆಂದು ವಿಖ್ಯಾತರಾಗಿರುವ ಪಂ. ಮೋತೀಲಾಲನೆ ಹ್ರೂಜೀಯುವರು ಆಗಿನ ಮುನ್ಷೀರಾಮನ ಸಹಾಧ್ಯಾಯಿಗಳಲ್ಲೊಬ್ಬರಾ ಗಿದ್ದರು. ಕಾಲೇಜು ವ್ಯಾಸಂಗವು ಮುಗಿದತರುವಾಯ ಒಬ್ಬರಿಗೊಬ್ಬ ರಿಗೆ ಬಹುಕಾಲ ದರ್ಶನವೇ ಇಲ್ಲದೆ- ಮೊನ್ನೆ ಪಂಜಾಬಿನ ಮಾರ್ಷಲ್ ಲಾ ಕಾಲದಲ್ಲಿ ಪರಸ್ಪರ ದರ್ಶನ ಸಂಭಾಷಣೆಗಳು ನಡೆದು ಇಬ್ಬರೂ ತಮ್ಮ ಆ ಹಿಂದಿನ ಅನುಭವ ಪರಿಚಯಗಳನ್ನು ತಿಳಿದು ಬಹು ಸಂತುಷ್ಟರಾದರು. ಆ ವೇಳಗೆ ಇಬ್ಬರೂ ವಿಖ್ಯಾತ ದೇಶಭಕ್ತರೆಂಬ ಕೀರ್ತಿ ಪ್ರತಿಷ್ಠೆಗಳನ್ನು ಗಳಿಸಿ ಮಹತ್ಕಾರ್ಯ ಸಾಧಕರಾಗಿದ್ದುದು, ಅವರಿಬ್ಬರ ಮನಸ್ಸಿನಲ್ಲೂ ಅಪೂರ್ವ ಆನಂದೋತ್ಸಾಹಗಳನ್ನುಂಟುಮಾಡಿತು.



## — ವಿವಾಹ - ವಿದ್ಯಾಭ್ಯಾಸ ಸಮಾಪ್ತಿ —

ಧೃಷ್ಟ ಪುಷ್ಟ ದೇಹದಿಂದಲೂ, ತೇಜಸ್ವಿ ಮುಖದಿಂದಲೂ, ಮುನ್ಷೀರಾಮನು ನೋಡಿದವರ ಕಣ್ಮನಗಳನ್ನು ಆಕರ್ಷಿಸುತ್ತಿದ್ದನು. ಆ ನವ ಯುವಕನ ಆಜಾನುಬಾಹು ದೇಹವು ಆತನ ತಂದೆ ಸೋದರರಿಗೆ ಮಾತ್ರ ವಲ್ಲ - ನೋಡಿದವರಿಗೆಲ್ಲ ಆನಂದವನ್ನುಂಟುಮಾಡುವಂತಿತ್ತು. ಯುಕ್ತ

ಬ್ರಹ್ಮಚರ್ಯ ರಕ್ಷಣೆಯಿಂದ ವಿದ್ಯಾಭ್ಯಾಸಮಾಡಿ ಪರೀಕ್ಷೆಯಲ್ಲೂ ಉತ್ತೀರ್ಣನಾಗಿದ್ದ ಆತನಿಗೆ ವಿವಾಹ ಮಾಡಬೇಕೆಂದು ಲಾಲಾ ನಾನಕಚಂದನು ಪ್ರಯತ್ನಿಸಿದನು. ತನ್ನ ಉದ್ಯೋಗ ಐಶ್ವರ್ಯಗಳಿಂದ ಪ್ರತಿಷ್ಠಿತನಾಗಿದ್ದ ಆತನ ಮಗನಿಗೆ ಕನ್ಯಾಪ್ರದಾನ ಮಾಡಲು ನಾನು ಮುಂದೆ ತಾನು ಮುಂದೆಂದು ಅನೇಕರು ಅಪೇಕ್ಷಿಸಿದುದು ಹಿರಿದಲ್ಲ! ಕೊನೆಗೆ ಜಲಂಧರ್ ಪಟ್ಟಣದ ವಾಸಸ್ಥನಾದ ಲಾಲಾ ಸಾಲಿಗ್ರಾಮ ಎಂಬಾತನ ಪುತ್ರಿ ಸೌ. ಶಿವದೇವಿಯೆಂಬ ಕನ್ಯಾಮಣಿಯೊಂದಿಗೆ ಮುನ್ಷೀರಾಮನ ವಿವಾಹವು ೧೮೭೭ ನೆಯ ಸಂ||ದಲ್ಲಿ ಬಹು ವಿಜೃಂಭಣೆಯಿಂದ ನಡೆಯಿತು.

ಕನ್ಯಾಗೃಹವಾದರೂ ಪಂಜಾಬಿನಲ್ಲಿ ಬಹು ಕೀರ್ತಿ ಪ್ರತಿಷ್ಠೆಗಳನ್ನು ಗಳಿಸಿ ಪ್ರಸಿದ್ಧವಾದುದು. ಕನ್ಯೆಯ ಅಣ್ಣಂದಿರು ಮೂವರೂ ಸುಪ್ರಸಿದ್ಧ ದೇಶಭಕ್ತರು. ಅವರಲ್ಲಿ ಹಿರಿಯನಾದ ಲಾ. ದೇವರಾಜಜೀಯು ಜಲಂಧರದ ಕನ್ಯಾ ಮಹಾವಿದ್ಯಾಲಯದ ಸಂಚಾಲಕನು. ಲಾ. ಭಗತ್‌ರಾಂ ಎಂಬಾತನು ಜಲಂಧರದಲ್ಲಿ ಬ್ಯಾರಿಸ್ಟರ್ ಆಗಿ ಪ್ರಸಿದ್ಧನಾದವನು. ಮತ್ತು ಲಾ. ಹಂಸರಾಜ ಎಂ. ಎಲ್. ಸಿ, ಎಂಬಾತನು ಪಂಜಾಬಿನಲ್ಲ ನಡೆದ ಅಖಿಲ ಭಾರತ ರಾಷ್ಟ್ರೀಯ ಮಹಾಸಭಾ ಕಾರ್ಯದರ್ಶಿಯಾಗಿ ದೇಶಸೇವೆ ಮಾಡಿದಾತನು. ಇವರಲ್ಲದೆ ಲಾ. ಬಾಲಕರಾಂಜೀ ಎಂಬಾತನೊಬ್ಬನೂ ಇದ್ದನು. ಮುನ್ಷೀರಾಮನು ತನ್ನ ಅಣ್ಣಂದಿರಿಗಿಂತಲೂ ಈ ಬಾಲಕರಾಂಜಿಯಲ್ಲಿ ಹೆಚ್ಚು ಪ್ರೀತಿ ವಿಶ್ವಾಸಗಳನ್ನಿಟ್ಟಿದ್ದನು.

ವಿವಾಹಮಹೋತ್ಸವವು ಮುಗಿದ ತರುವಾಯ ಮುನ್ಷೀರಾಮನು ಅಲಾಹಾಬಾದಿನಲ್ಲಿಯ ಕಾಲೇಜಿನಲ್ಲಿ ಎಫ್. ಎ. ತರಗತಿಗೆ ಸೇರಿ ವಿದ್ಯಾಭ್ಯಾಸವನ್ನು ಮುಂದರಿಸಿದನು. ಆಗಿನ ಆತನ ಜೀವನವು ಅತಿಶಯ ಉತ್ಸಾಹಪೂರ್ಣವಾದುದಾಗಿತ್ತು. ಯೌವನ ಧನಸಂಪತ್ತಿ ಪ್ರಭುತ್ವ ಅವಿವೇಕ ಇವುಗಳಲ್ಲಿ ಒಂದೊಂದೇ ಮನುಷ್ಯನನ್ನು ಹಾಳುಮಾಡಲು ಸಾಕಾದ ಸಾಧನವಾಗಿರುವಲ್ಲಿ ಈ ನಾಲ್ಕೂ ಒಟ್ಟಿಗಿದ್ದರೆ ಇನ್ನು ಕೇಳಬೇಕಾದುದೇನು! ನಮ್ಮ ನವಯುವಕ ಮುನ್ಷೀರಾಮನಿಗೆ ಅಪ್ರತಿಮ ಯೌವನವಿತ್ತು. ಮನೆಯಲ್ಲಿ ವಿಶೇಷ ಧನವಿತ್ತು. ತಂದೆಗೆ ಉನ್ನತೋದ್ಯೋಗವಿದ್ದು ತಕ್ಕಂತೆ

ಅಧಿಕಾರದ ದಂಭ ದರ್ಪಗಳೂ ಇದ್ದುವು. ಹೀಗಿರುವಲ್ಲಿ, ತಂದೆಯ ಬಳಿ ಯಿಂದ ಬೇರೆಯಿದ್ದು ಇಂಗ್ಲಿಷ್ ವಿದ್ಯಾಭ್ಯಾಸಮಾಡಬೇಕಾಗಿ ಬಂದುದ ರಿಂದ ವಿವಿಧ ವ್ಯಸನಗಳಸ್ನುಂಟಾಗಿದ್ದು ಕೆಲಮಂದಿ ಸಮವಯಸ್ಕರ ಸ್ನೇಹವೂ ಆಗಿ ತಕ್ಕಷ್ಟು ಪ್ರಮಾಣದಿಂದ ಅವಿವೇಕವೂ ತಲೆಯನ್ನು ಹೊಕ್ಕಿತು. ದುಷ್ಟ ಸಾಂಗತ್ಯದಿಂದ ಷರಾಬಿನ ಪಾನವು ಅಭ್ಯಾಸವಾಯಿತು. ನಾಸ್ತಿಕತೆಯು ಹೃದಯದಲ್ಲಿ ಮನೆಮಾಡಿಕೊಂಡಿತು. ನಾಟಕ ಮಂಡಲಿ ಗಳಲ್ಲಿ ಸುಳಿದಾಡುವ ಚಟವೂ ಉಂಟಾಗದಿರಲಿಲ್ಲ. ಪರಸ್ಥಳದಲ್ಲಿದ್ದ ತಂದೆಯು ಉನ್ನತ ವಿದ್ಯಾಭ್ಯಾಸಮಾಡುತ್ತಿದ್ದ ಮಗನಿಗೆ ಬೇಕಾದಷ್ಟು ಹಣವನ್ನು ಕಳುಹಿಸುವುದರಲ್ಲಿ ಹಿಂದು ಮುಂದು ನೋಡುತ್ತಿರಲಿಲ್ಲ. ಹೀಗೆ ಸ್ವಲ್ಪ ತಿರುಳುಳ್ಳವನೆಂದು ತಿಳಿದೊಡನೆಯೇ ಅನೇಕಮಂದಿ ಸ್ನೇಹಿ ತರು ಮುತ್ತಿಕೊಂಡರು. ಮದ್ಯಪಾನವು ತನ್ನ ಹದ್ದುಮೀರಿ ಗಂಟಲೊಳಕ್ಕೆ ಹರಿಯಲಾರಂಭಿಸಿತು. ಇದರಿಂದ ಆತನ ಭವ್ಯದೇಹ ಸ್ವಾಸ್ಥ್ಯವು ಪಲ್ಲಟ ವಾಗಿ ರೋಗವು ದೇಹವನ್ನಾಕ್ರಮಿಸಿತು. ಕೆಮ್ಮುಲೂ ಜ್ವರವೂ ದೇಹ ದಲ್ಲಿ ವ್ಯಾಪಿಸಿದುವು. ಕಣ್ಣುಗಳು ಗುಣಿಬಿದ್ದು ಮುಖದಲ್ಲಿ ತೇಜಸ್ಸು ಕುಂದಿತು. ಅನೇಕಮಂದಿ ಸುಪ್ರಸಿದ್ಧ ವೈದ್ಯರ ಪರಿಶ್ರಮದಿಂದ ಕೆಲವು ಕಾಲದಮೇಲೆ ಸ್ವಲ್ಪಮಟ್ಟಿಗೆ ಮೇಲುಂಟಾಯಿತಾದರೂ ಆ ವೇಳೆಗೆ ಪರೀ ಕ್ಷೆಯೂ ಪ್ರಾಪ್ತವಾಗಲಾಗಿ, ಆವರೆಗೆ ಉತ್ತಮ ರೀತಿಯಿಂದ ವಿದ್ಯಾ ಭ್ಯಾಸವು ನಡೆಯದಿದ್ದುದರಿಂದ ಮುರ್ಷೀರಾಮನು ರಸಾಯನಶಾಸ್ತ್ರ (ಕೆಮಿಸ್ಟ್ರಿ) ಪ್ರಶ್ನ ಪತ್ರಿಕೆಯಲ್ಲಿ ತಕ್ಕಷ್ಟು ಅಂಕಗಳನ್ನು ಪಡೆಯದೆ ಆ ವರ್ಷ, ಪರೀಕ್ಷೆಯು ನಷ್ಟವಾಯಿತು. ಅಂತೆಯೇ ಅಲ್ಲಿಗೆ ಆತನ ವಿದ್ಯಾ ಭ್ಯಾಸವೂ ಸಮಾಪ್ತವಾಯಿತು.

ಆಗ ಲಾಲಾ ನಾನಕಚಂದನು ಬರೇಲಿ ಎಂಬಲ್ಲಿ ಉದ್ಯೋಗದಲ್ಲಿ ದ್ದನು. ಮೇಲ್ಕಂಡಂತೆ ಕಾಲೇಜನ್ನು ಬಿಟ್ಟ ಮಗನು ಬಂದು ತಂದೆಯ ಸಮೀಪದಲ್ಲಿ ಇರತೊಡಗಿದನು. ಈ ಸ್ಥಳದಲ್ಲೇ ಆತನಿಗೆ ಪ್ರಪ್ರಥಮಕ್ಕೆ ಋಷಿದಯಾನಂದರ ಸಂದರ್ಶನವಾದುದು. ಆ ವೇಳೆಗೆ ಮುರ್ಷೀರಾಮನ ಹೃದಯವು ಸಂಪೂರ್ಣ ನಾಸ್ತಿಕಮಯವಾಗಿತ್ತು. ಪಾಶ್ಚಾತ್ಯ ನಾಸ್ತಿಕ ವಾದಿಗಳ ಗ್ರಂಥಗಳ ಪಠನೆಯಿಂದ ಆತನ ಮನಸ್ಸು ಆರ್ಷೇಯ ಭಾರತೀಯ

ವಿಚಾರಗಳನ್ನು ಕೇವಲ ತುಚ್ಛ-ಅಸಹ್ಯ ಭಾವನೆಯಿಂದ ನೋಡುವಂತಾಗಿತ್ತು. ಹೀಗಿದ್ದ ಸಂದರ್ಭದಲ್ಲಿ, ಪರಿಪೂರ್ಣ ಯೌವನದಲ್ಲಿ ಗೃಹತ್ಯಾಗ ಮಾಡಿ ಸನ್ಯಾಸ ಸ್ವೀಕಾರಮಾಡಿ ಗ್ರಾಮೈಕ ರಾತ್ರಿಯಾಗಿ ತಿರುಗಿ ಧರ್ಮ ಬೋಧೆ ಮಾಡುತ್ತಿದ್ದ ದಯಾನಂದ ಸ್ವಾಮಿಗಳ ದರ್ಶನವು ಆತನಲ್ಲಿ ಅತಿಶಯ ಕೌತುಕವನ್ನಲ್ಲದೆ ಮತ್ತಾವ ಉನ್ನತ ಭಾವನೆಯನ್ನೂ ಉಂಟುಮಾಡಲಿಲ್ಲ. ಆಗಲಾತನು ಅವರ ಬಳಿಗೆ ಬಂದು 'ಸ್ವಾಮಿ, ತಾವು ದೊಡ್ಡವರು, ದೇವರಿದ್ದಾನೆಯೇ, ಇದ್ದರೆ ಎಲ್ಲಿದ್ದಾನೆ ಹೇಗಿದ್ದಾನೆ ಎಂಬ ವಿಚಾರಗಳನ್ನು ಕುರಿತು, ನನಗೆ ಹೇಳುವಿರಾ!' ಎಂಬ ಮುಂತಾದ ಪ್ರಶ್ನೆಗಳನ್ನು ಕೇಳಿದನು. ವೇದ ವೇದಾಂಗ ಪಾರಂಗತರೂ, ಅದ್ವಿತೀಯ ತರ್ಕಶಾಸ್ತ್ರ ವಿಶಾರದರೂ ಆದ ಅವರಿಗೆ ಆತನ ಆ ಪ್ರಶ್ನೆಗಳಿಗೆ ಉತ್ತರ ಕೊಡುವುದು ಹಿರಿದೆನಿಸಲಿಲ್ಲ. ಸ್ವಾಮಿ ದಯಾನಂದರ ಸಮಂಜಸ ಪ್ರತ್ಯುತ್ತರಗಳು, ಮುರ್ಷೀರಾಮನ ಅನೇಕಬಗೆಯ ಸಂದೇಹಗಳನ್ನು ಹೋಗಲಾಡಿಸಿದುವು. ಮುಂದೆ ಆತನು ಏನು ಕೇಳಬೇಕೆಂಬುದೇ ತೋರದಂತಾಯಿತು. ಆಗ ಆತನು-'ಸ್ವಾಮಿಜೀ ತಾವು ನನ್ನ ಬಾಯಿಮುಚ್ಚಿಸಿ ನಿರುತ್ತರನನ್ನಾಗಿಸಿದಿರಿ. ಸರಿ, ಆದರೆ ದೇವರ ವಿಷಯವಾಗಿ ನನ್ನ ಹೃದಯದಲ್ಲಿ ವಿಶ್ವಾಸವೇ ಉಂಟಾಗಲಿಲ್ಲವಲ್ಲಾ' ಎಂದನು. ಅದನ್ನು ಕೇಳಿದ ಆ ಸಾಧುವರ್ಯರು-'ಅಪ್ಪಾ ನಾನು ನಿನ್ನಲ್ಲಿ ಈಶಭಕ್ತಿಯನ್ನು ಹುಟ್ಟಿಸುವೆನೆಂದು ವಾಗ್ದಾನ ಮಾಡಿರಲಿಲ್ಲವಷ್ಟೆ! ಕೇವಲ, ನೀನು ಕೇಳಿದ ಪ್ರಶ್ನೆಗಳಿಗೆ ನನಗೆ ತಿಳಿದಂತೆ ಪ್ರತ್ಯುತ್ತರಗಳನ್ನು ಕೊಟ್ಟಿದ್ದೇನೆ. ಪರಮೇಶ್ವರನ ಕೃಪೆಯು ನಿನ್ನಮೇಲೆ ಉಂಟಾದಾಗ್ಗೆ ನಿನಗೆ ಭಗವದ್ಭಕ್ತಿಯೂ ಉಂಟಾಗುವುದಪ್ಪಾ' ಎಂದು ನುಡಿದರು. ಮುಂದೆ ಕೆಲವರ್ಷಗಳ ತರುವಾಯ ಮುರ್ಷೀರಾಮನ ಜೀವಿತದಲ್ಲಿ ಒಂದು ದಿನ ಆತನಮೇಲೆ ಈಶಕೃಪೆಯುಂಟಾಯಿತು. ಆತನೂ ಅತ್ಯಂತ ಆಸ್ತಿಕ ಶಿರೋಮಣಿಯಾಗಿ ತನ್ನ ಭಗವದ್ವಿಶ್ವಾಸವೆಂಬ ನೌಕೆಯನ್ನು ವಿಶಾಲವೂ ಅಗಾಧವೂ ಆದ ಸಂಸಾರ ಸಮುದ್ರದಲ್ಲಿ ನಡೆಯಿಸ ಸಾಗಿದನು.



## — ಲೌಕಿಕೋದ್ಯೋಗ —

ಲಾಲಾ ಮುನ್ಷೀರಾಮನು ೧೮೮೦ರಲ್ಲಿ ಎಂದರೆ ತನ್ನ ಇಪ್ಪತ್ತನೆಯ ವಯಸ್ಸಿನಲ್ಲಿ ವಿದ್ಯಾಭ್ಯಾಸವನ್ನು ಮುಗಿಸಿ ಮನೆಯನ್ನು ಸೇರಿದನು. ಲಾಲಾ ನಾನಕಚಂದನು. ಆಗ ಬರೇಲಿಯ ಕಮಿಷನರಾಗಿದ್ದ ಮಿ|| ಎಡ್ವರ್ಡ್ಸ್ ಎಂಬಾತನ ಪ್ರೀತಿ ವಿಶ್ವಾಸಗಳಿಗೆ ಪಾತ್ರನಾಗಿದ್ದುದರಿಂದ, ಆತನ ಮಗನಿಗೆ ಸರಕಾರದಲ್ಲಿ ಉದ್ಯೋಗ ಸಿಕ್ಕಲು ಹೆಚ್ಚು ಪ್ರಯತ್ನವೇನು ಅವಶ್ಯಕವಿರಲಿಲ್ಲ. ಕೆಲವು ದಿನಗಳಲ್ಲೇ ಅಲ್ಲಿಯ ನಾಯಬ್ ತಹಶೀಲ್ದಾರನು ರಜಾ ಪಡೆದು ಹೋದುದರಿಂದ ಆ ಕೆಲಸವು ಲಾಲಾ ಮುನ್ಷೀರಾಮನಿಗೆ ಕೊಡಲ್ಪಟ್ಟಿತು. ಇತರರ ದೃಷ್ಟಿಯಲ್ಲಿ-ಇಪ್ಪತ್ತು ವರ್ಷದ ಯುವಕನಿಗೆ ನಾಯಬ ತಹಶೀಲ್ದಾರೀ ಪದವಿ ದೊರೆತುದು ಅಧಿಕಾಧಿಕ ಪುಣ್ಯೋದಯವೆಂಬ ಭಾವನೆಯಿರಬಹುದಾಗಿದ್ದರೂ-ಮುನ್ಷೀರಾಮನ ಸ್ವಾತಂತ್ರ್ಯ ಹೃದಯವು ನಿರ್ಬಂಧದ ಆ ಪದವಿಯನ್ನು ಮೆಚ್ಚಿಕೊಳ್ಳದಾಯಿತು. ಮುಂದೆ ಕೆಲದಿನಗಳಲ್ಲೇ ಆತನು ಆ ಉದ್ಯೋಗದಿಂದ ನಿವೃತ್ತನೂ ಆದನು. ಹಾಗೆ ನಿವೃತ್ತನಾಗುವದಕ್ಕೆ ಉಂಟಾದ ಕಾರಣವು ಆತನ ಸ್ವಾತಂತ್ರ್ಯ ಮನಸ್ಥಿತಿಯನ್ನೂ-ಸ್ವಾಭಿಮಾನವನ್ನೂ ವ್ಯಕ್ತಪಡಿಸುತ್ತದೆ. ಒಂದಾನೊಂದು ವೇಳೆ ಮುನ್ಷೀರಾಮನು ಕಮಿಷನರನ್ನು ಕಾಣಬೇಕೆಂದು ಕಚೇರಿಗೆ ಹೋಗಿ ತಾನು ಬಂದಿರುವುದಾಗಿ ಒಳಕ್ಕೆ ವರ್ತಮಾನ ಕಳುಹಿಸಿದನು. ಸ್ವಲ್ಪ ಹೊತ್ತು ಕಾದಿರಬೇಕೆಂದು ಒಳಗಿನಿಂದ ಆಜ್ಞೆ ಬಂತು. ವಿಧಿಯಿಲ್ಲದೆ, ಸ್ವಲ್ಪಹೊತ್ತು ಕಾದಿರಬೇಕಾಯಿತು. ಅಷ್ಟರಲ್ಲಿ, ಒಬ್ಬ ಇಂಗ್ಲೀಷ್ ಸೋಲ್ಜರನು ಬಂದು, ತಡೆಬಡೆಯೇ ಇಲ್ಲದೆ ತಕ್ಷಣ ಒಳಕ್ಕೆ ಹೊರಟುನಡೆದನು. ಅದನ್ನು ಕಂಡ ಮುನ್ಷೀರಾಮನು,-'ಛೆ ನಾಯಬ ತಹಶೀಲ್ದಾರನೆಂಬ ಉನ್ನತ ಉದ್ಯೋಗದಲ್ಲಿದ್ದರೂ, ನನ್ನ ಮತ್ತು ನನ್ನ ಅಧಿಕಾರದ ಯೋಗ್ಯತೆಯು ಒಬ್ಬ ಸೇವಕ-ಒಬ್ಬ ಸೋಲ್ಜರನ ಯೋಗ್ಯತೆಗಿಂತಲೂ ಕಡಮೆಯೆನಿಸಿರುವಾಗ ಈ ಉದ್ಯೋಗದಲ್ಲಿದ್ದು ಪ್ರಯೋಜನವೇನು!' ಎಂದು ಯೋಚಿಸಿ ಒಡನೆ ಆ ಉದ್ಯೋಗಕ್ಕೆ ರಾಜೀನಾಮೆಯನ್ನು ಕೊಟ್ಟು ಹಿಂದಿರುಗಿದನು. ಅದೇ ಆತನ ಪ್ರಾರಂಭದ ಮತ್ತು ಕೊನೆಯ ಸರ್ಕಾರಿಯ ನೌಕರಿಯಾಯಿತು!

ನೌಕರಿಯಿಂದ ನಿವೃತ್ತನಾದ ತರುವಾಯ ವಕಾಲತ್ ಮಾಡಬೇಕೆಂಬ ಅಪೇಕ್ಷೆಯುಂಟಾಗಿ, ಲಾಹೋರಿಗೆ ಹೋಗಿ ಅಲ್ಲಿ ನ್ಯಾಯವಾದಿ ಪರೀಕ್ಷೆಗೆ ಓದಲಾರಂಭಿಸಿದನು. ಮೊದಲನೆಯ ವರ್ಷ ಪರೀಕ್ಷೆಗೆ ಕುಳಿತು ಕೊಳ್ಳಲಿಲ್ಲ. ಎರಡನೆಯ ವರ್ಷ ಲಾಲಾ ನಾನಕಚಂದನು ಮೃತನಾದ್ದರಿಂದ ಆ ವರ್ಷವೂ ಆಗಲಿಲ್ಲ. ಮೂರನೆಯ ವರ್ಷ ಪರೀಕ್ಷೆಗೆ ಕಳುಹಿಸಿದನಾದರೂ, ಸಂವತ್ಸರದ ಬಹುಭಾಗವೆಲ್ಲಾ ಕುಡಿತ ಕುಣಿತಗಳು-ಸ್ನೇಹಿತರೊಂದಿಗೆ ಸಲ್ಲಾಪ ಆಮೋದ-ನಗೆನೋಟಗಳಲ್ಲೇ ಕಳೆದುಹೋಯಿತು. ಕೊನೆಗೆ ಇನ್ನು ಪರೀಕ್ಷೆಯು ಇಪ್ಪತ್ತೇಳು ದಿನಗಳು ಮಾತ್ರ ಉಳಿದಿದ್ದಾಗ ತಾನೂ ವಕೀಲಿ ಪರೀಕ್ಷೆಗೆಕಟ್ಟಿರುವೆನೆಂಬ ಜ್ಞಾಪಕವುಂಟಾಯಿತು. ಒಡನೆ ಇತರ ವಿಚಾರಗಳನ್ನೆಲ್ಲ ತ್ಯಜಿಸಿ ಮರೆತು, ಆತನು ರಾತ್ರಿಹಗಲುಗಳನ್ನೊಂದಾಗಿಸಿ, ಪಾಠಗಳನ್ನು ಓದಲಾರಂಭಿಸಿದನು. ಆ ಪ್ರಯತ್ನದ ಫಲವಾಗಿ ಆ ವರ್ಷ ಪರೀಕ್ಷೆಯಲ್ಲಿ ಉತ್ತೀರ್ಣನೂ ಆಗಿ, ಪ್ರಾರಂಭಕ್ಕೆ ಫಿಲೌರ್ ಎಂಬಲ್ಲಿ ವಕೀಲಿಯನ್ನು ಆರಂಭಿಸಿ, ತರುವಾಯ ಜಲಂಧರ್ ಪಟ್ಟಣಕ್ಕೆ ಬಂದು ನೆಲೆಸಿದನು.

ದುಷ್ಟ ಚಟಗಳು ಒಂದು ಸಾರಿ ಅಭ್ಯಾಸ ವಾಹುವೆಂದರೆ ಅವುಗಳನ್ನು ತ್ಯಜಿಸುವುದು ಅಲ್ಪ ಸ್ವಲ್ಪಕ್ಕೆ ಸಾಧ್ಯವಾಗುವುದಿಲ್ಲ. ವಿದ್ಯಾರ್ಥಿ ದೆಸೆಯಲ್ಲಿ ಕೆಲವು ಕಾಲವಿದ್ದು ತೊಲಗಿ ಹೋಗಿದ್ದ ಮದ್ಯದ ಚಟವು, ವಕೀಲಿಯನ್ನು ಪ್ರಾರಂಭಿಸಿ, ಮನೆಯಲ್ಲಿ ತಾನೇತಾನಾಗಿ ಸ್ವತಂತ್ರನಾದ ಒಡನೆಯೇ ಪುನಃ ಪ್ರಾಪ್ತವಾಯಿತು. ಒಂದಿಗೇ ಆ ಸಂಬಂಧ ಬಳಗವೆಲ್ಲವೂ ಮನೆಯೊಳಕ್ಕೆ ಪ್ರವೇಶಿಸಿತು. ಒಂದು ದಿನ ಮದ್ಯಪಾನಮಾಡಿ ಅದರ ಮತ್ತಿನಲ್ಲಿದ್ದ ತನ್ನ ಅಂತರಂಗ ಮಿತ್ರನೊಬ್ಬನು ತನ್ನ ಕಣ್ಣೆದುರಿಗೇ ಒಬ್ಬ ಪರಸ್ತ್ರೀಯ ಸತೀತ್ವವನ್ನುಭಂಗಪಡಿಸುವ ಚೇಷ್ಟೆಮಾಡುತ್ತಿದ್ದುದನ್ನು ಕಂಡು ಮುನ್ಷೀರಾಮನು, ತಾನು ಕುಡಿದು ಮತ್ತೇರಿದಾಗಲೂ ಇಂತಹ ನೀತಿ ದೂರಕಾರ್ಯವನ್ನೇ ಮಾಡಬಹುದಲ್ಲವೆ? ಎಂದು ಯೋಚಿಸಿ, ದುರ್ವೃತ್ತನಾದ ಆ ತನ್ನ ಮಿತ್ರನನ್ನು ಕಾಲಿನಿಂದ ಒದ್ದು ನೆಲಕ್ಕುರುಳಿಸಿ, ಅಂದಿನಿಂದ ತನ್ನ ಕುಡುಕತನವನ್ನು ಸಮಾಪ್ತಗೊಳಿಸಿದನು. ಅಲ್ಲದೆ ಮುಂದೆ ಯಾವ ಬಗೆಯ ಮದ್ಯವಸ್ತುವನ್ನೂ ಕೈಯಿಂದ ಸಹ ಮುಟ್ಟದಾದನು-ಆ ಕಡೆಗೆ ತಿರು

ಗಿಯೂ ನೋಡದಾದನು. ಆ ಒಂದು ದುಷ್ಟಟದ ಪರಿತ್ಯಾಗದೊಂದಿಗೆ ಮಾಂಸಾಹಾರ, ಹುಕ್ಕಾ ಸೇವನೆ ಮುಂತಾದ ಸಮಸ್ತ ದುರಭ್ಯಾಸಗಳೂ ನಿರ್ಮೂಲವಾಗಿ ಆತನಿಂದ ಹೊರಟು ಹೋದುವು.

ಅದೇ ಕಾಲದಲ್ಲೇ ಲಾಲಾ ಮುನ್ಷೀರಾಮನು, ಜಲಂಧರ್ ಪಟ್ಟಣವನ್ನು ಬಿಟ್ಟು ಲಾಹೋರ್ ನಗರಕ್ಕೆ ನಡೆದು ಅಲ್ಲಿ ವಕೀಲಿ ಉದ್ಯೋಗವನ್ನು ನಡೆಯಿಸಲಾರಂಭಿಸಿದನು. ಆ ಸ್ಥಳ ವ್ಯತ್ಯಾಸದೊಂದಿಗೆ ಆತನ ಮನಃಪರಿವರ್ತನೆಯೂ ಉಂಟಾಯಿತು. ಬಾಲ್ಯದೆಸೆಯ ಧ್ಯಾನಯುಕ್ತ ಮನಸ್ಥಿತಿಯು ಪುನಃ ಪ್ರಾಪ್ತವಾಯಿತು. ಆ ಕಾಲಕ್ಕೆ ಲಾಹೋರಿನಲ್ಲಿ ಸ್ಥಾಪಿತವಾಗಿದ್ದ ಆರ್ಯಸಮಾಜದ ಸಂಬಂಧವಾಗಿ, ಅದರ ಸಂಚಾಲಕನಾಗಿದ್ದ ಲಾಲಾ ಸಾಯಿಂದಾಸಜೀಯ ಪರಿಚಯವಾಯಿತು. ಆತನ ಪ್ರೇಮಪೂರ್ಣ ಸಂಭಾಷಣೆಯು, ಮುನ್ಷೀರಾಮನಲ್ಲಿ ದಯೆ ಮಮತೆ ಪಾಪಭೀತಿ ಪಶ್ಚಾತ್ತಾಪಾದಿಗಳನ್ನು ಹುಟ್ಟಿಸಿತು. ಅಲ್ಲದೆ ಪಂಡಿತ ಗುರುದತ್ತ ವಿದ್ಯಾರ್ಥಿ ಎಂಬ ಆಸ್ತಿಕ ಶಿರೋಮಣಿಯ ದರ್ಶನ ಸ್ನೇಹಗಳೂ ಒದಗಿ ಅತಿಶಯ ನಾಸ್ತಿಕನಾಗಿದ್ದ ಮುನ್ಷೀರಾಮನು ಪರಮಾಸ್ತಿಕನಾಗಿ ಮಾರ್ಪಟ್ಟನು. ಅಷ್ಟುಮಾತ್ರವಲ್ಲ, ಆತನ ಆಹಾರ ವಿಹಾರಗಳಲ್ಲೂ ಅತಿಶಯ ಪರಿವರ್ತನೆಯುಂಟಾಯಿತು. ಮದ್ಯ ಮಾಂಸ ಮುಂತಾದ ದುಷ್ಟಾಹಾರ ಪಾನೀಯಗಳು ದೂರವಾದುದು ಮಾತ್ರವಲ್ಲ, ಆತನು ಕ್ರಮ ಕ್ರಮವಾಗಿ ಕಾರ ಉಪ್ಪು ಹುಳಿಗಳನ್ನು ಸಹ ತ್ಯಜಿಸಿ ಕೇವಲ ರೊಟ್ಟಿ, ಹಾಲು, ಅಲ್ಪಸ್ವಲ್ಪ ಕಾಯಿ ಪಲ್ಯೆ ಮುಂತಾದ ಸಾತ್ವಿಕಾಹಾರಗಳನ್ನೇ ತೆಗೆದುಕೊಳ್ಳುವವರೆಗೆ ತನ್ನ ಅಭ್ಯಾಸಗಳನ್ನು ಸುಧಾರಿಸಿಕೊಂಡನು.



## — ಸಮಾಜ ಸೇವಾ ಪ್ರಾರಂಭ —

'ಗುಣಾಃ ಪೂಜಾಸ್ಥಾನಂ.'–'ಗುಣವೇ ಭೂಷಣವಲ್ಲದೆ ಸರ್ವಕ್ಕೂ ಮಣಿ ಹೇಮಾದಿ ಭೂಷಣವಲ್ಲವು' ಎಂಬಿವೇ ಮೊದಲಾದ ಪೂರ್ವ ಕವಿವಾಕ್ಯಗಳು ಯಾವಾಗಲೂ, ವ್ಯಕ್ತಿಗಳಲ್ಲಿ ಪ್ರಕಟವಾಗುವ ಗುಣಗಳನ್ನು

ಮಾತ್ರವೇ ಗೌರವಿಸಿರುತ್ತವಲ್ಲದೆ, ಬೇರಲ್ಲ. ದುರ್ಗುಣಗಳಲ್ಲಾಸಕ್ತ ನಿದ್ದು ಧರ್ಮದೂರನಾಗಿರುವವರೆಗೆ ಬಹು ತುಚ್ಛನಂತೆ ಪರಿಗಣಿಸಲ್ಪಡು ತ್ತಿದ್ದ ಒಬ್ಬ ಮನುಷ್ಯನು, ಅವುಗಳನ್ನೆಲ್ಲ ತ್ಯಜಿಸಿ ಸನ್ಮಾರ್ಗಪ್ರವರ್ತಕನಾ ದೊಡನೆಯೇ ಸಮಾಜದ ಗೌರವಾದರಗಳಿಗೆ ಪಾತ್ರನಾಗುವನು. ಅಷ್ಟೇ ಅಲ್ಲ! ಒಂದು ಕಾಲದಲ್ಲಿ ದುರ್ಮಾರ್ಗವನ್ನನುಸರಿಸಿದ್ದವನಾದರೂ, ತಾನೇ ತಿಳಿವಿಕೆಯನ್ನು ಹೊಂದಿ ಸನ್ಮಾರ್ಗ ಪ್ರವರ್ತಕನಾಗಿ ದೇವತೆಯಂತೆ ಪೂಜಿ ಸಲ್ಪಟ್ಟ ಉದಾಹರಣೆಗಳೂ ಲೋಕದಲ್ಲಿ ದೊರೆವುವು. ನಮ್ಮ ಕಥಾನಾ ಯಕರೂ ಈವರೆಗೆ ತಮ್ಮ ನಡತೆಯಿಂದ ಯಾವ ಬಗೆಯಲ್ಲೂ ಸಾಮಾನ್ಯ ರಿಗಿಂತ ಉತ್ತಮ ಸ್ಥಿತಿಗೇರದಿದ್ದು-ಈಗ ತಮ್ಮ ದೈವಭಕ್ತಿ ನಿಸ್ವಾರ್ಥತೆ ಆಸ್ತಿ ಕತೆ ಮುಂತಾದ ದೈವಿಕ ಗುಣಗಳನ್ನು ಪ್ರಕಟಿಸತೊಡಗಿದುದರಿಂದ ಅವ ರನ್ನು ಇನ್ನುಮುಂದೆ ಬಹುವಚನದಿಂದಲೇ ಸಂಬೋಧಿಸಿ ಗೌರವಿಸುವುದು ನಮ್ಮ ಕರ್ತವ್ಯವೆಂದೆಣಿಸುತ್ತೇವೆ.

ಜಲಂಧರ್ ಪಟ್ಟಣದಿಂದ ಬಂದು ಲಾಹೋರನ್ನು ಸೇರಿ ವಕೀಲಿ ಯನ್ನು ಪ್ರಾರಂಭಿಸಿದುದು ಲಾಲಾ ಮುನ್ಷೀರಾಮಜೀಯವರ ಜೀವಿತದ ಲ್ಲೊಂದು ಅಗಾಧ ಪರಿವರ್ತನೆಯನ್ನುಂಟುಮಾಡಿತು. ಆವರೆಗೆ ಆರ್ಯ ಸಮಾಜವೆಂದರೆ ಪರಿಹಾಸಮಾಡುತ್ತಿದ್ದ ಅವರು, ೧೮೮೫ರಲ್ಲಿ ಆ ಸಮಾಜ ಕ್ಕೆ ಸೇರಿ ಮುಂದೆ ಅದರ ಅವಿಚ್ಛಿನ್ನ ಭಕ್ತರಾದರು. ಅವರ ಮನಸ್ಸು ಯಾವು ದಾದರೊಂದು ಕೆಲಸವನ್ನು ಮಾಡಬೇಕೆಂದು ಇಚ್ಛಿಸಿತೆಂದರೆ, ಅದನ್ನು ಸಂಪೂರ್ಣ ನಿಷ್ಠೆಯಿಂದ ಮಾಡುವುದು ಅವರಿಗೆ ಸ್ವಭಾವವಾಗಿತ್ತು. ಋಷಿ ದಯಾನಂದರು, -'ಅಪ್ಪಾ, ಪರಮೇಶ್ವರನ ದಯೆಯು ನಿನ್ನ ಮೇಲೆ ಉಂಟಾದಾಗ ನಿನಗೂ ಆತನಲ್ಲಿ ಭಕ್ತಿಯುಂಟಾಗುವುದು' ಎಂದು ಹೇಳಿದ್ದ ರಲ್ಲವೆ! ಈಗ ಭಗವಾನನ ದಯೆಯುಂಟಾಗಿ ಲಾಲಾ ಮುನ್ಷೀರಾಮಜೀ ಯವರು ಪರಮಾಸ್ತಿಕರಾಗಿ ಸಮಾಜ ಸೇವಾನಿರತರಾದರು.

೧೮೮೫ನೆಯ ಸಂ|| ದಿಂದ ೧೯೨೬ರವರೆಗೆ ನಾಲ್ವತ್ತೊಂದು ವರ್ಷ ಕಾಲ ಲಾಲಾ ಮುನ್ಷೀರಾಮಜೀಯವರ ಆಯುಸ್ಸು ಧರ್ಮಸೇವಾಕಾರ್ಯಕ್ಕೆ ಮೀಸಲಾಗಿಟ್ಟಿದ್ದಂತೆ ವಿನಿಯೋಗವಾಯಿತು. ಆ ನಾಲ್ವತ್ತೊಂದು ವರ್ಷ ಕಾಲದಲ್ಲಿ ನಡೆದ ಅನೇಕಾನೇಕ ಕಾರ್ಯಗಳ ವಿಚಾರದ ಮುಖ್ಯಾಂಶಗಳನ್ನು

ವಿವರಿಸಬೇಕೆಂದರೂ ಒಂದು ಅಗಾಧ ಗ್ರಂಥವನ್ನೇ ಬರೆಯಬೇಕಾಗುತ್ತದೆ. ಪ್ರಕೃತ ಆ ಮಹನೀಯರು ದೇಶಸೇವಾ ವಿಚಾರದಲ್ಲಿ ನಡೆಯಿಸಿದ ಮುಖ್ಯ ಕಾರ್ಯಗಳನ್ನು ಸಂಕ್ಷೇಪ ರೀತಿಯಿಂದ ಇಲ್ಲಿ ಉದಹರಿಸುತ್ತೇವೆ.

ಲಾಹೋರ್ ಮಹಾನಗರದಲ್ಲಿ ಒಬ್ಬ ಅನಾಮಧೇಯ ವಕೀಲನಂತೆ ಕೆಲಸಮಾಡುವುದು ಅವರಿಗೆ ಅಸಹ್ಯ ತೋರಿತು. ಒಡನೆ, ನ್ಯಾಯ ಶಾಸ್ತ್ರ ಗ್ರಂಥಗಳನ್ನು ಪಠಿಸತೊಡಗಿ ಆ ಉದ್ಯೋಗದಲ್ಲೇ ವಿಶೇಷ ಅನುಭವ ಪಡೆದು ಲಾಹೋರು ಚೀಫ್‌ಕೋರ್ಟಿನಲ್ಲಿ ವಕಾಲತ್ತು ನಡೆಸುವ ಯೋಗ್ಯತೆಯನ್ನು ಹೊಂದಿದರು. ಉದ್ಯೋಗವು ಉತ್ತಮ ರೀತಿಯಿಂದ ನಡೆದು ವಿಶೇಷ ದ್ರವ್ಯ ಸಂಪಾದನೆಯಾಯಿತು. ಆ ನಗರದಲ್ಲಿ ಭವ್ಯವಾದ ಒಂದು ಮನೆಯನ್ನು ಕಟ್ಟಿಸಿದರು. ಉತ್ತಮ ಗೃಹಿಣಿಯಾದ ಸೌ|| ಶಿವದೇವಿಯ ಸಾನ್ನಿಧ್ಯ ದಿಂದ ಆ ಮನೆಯು ಸಮಸ್ತ ವಸ್ತುಗಳಿಂದ ಸಂಪೂರ್ಣತೆಯನ್ನು ಹೊಂದಿ, ಮುನ್ಷೀರಾಮರ ಗೃಹಸ್ಥ ಜೀವನವು ಅತಿಶಯ ಸೌಖ್ಯಪ್ರದವಾದು ದೆನಿಸಿತು. ಆ ದಂಪತಿಗಳಿಗೆ ಇಬ್ಬರು ಪುತ್ರರೂ ಇಬ್ಬರು ಪುತ್ರಿಯರೂ ಜನಿಸಿದರು. ತಾಯಿತಂದೆಗಳು ತಮ್ಮ ಆ ಮಕ್ಕಳ ಲಾಲನೆಪಾಲನೆಗಳಲ್ಲಿ ಅತಿಶಯ ಆನಂದದಿಂದ ಕೆಲಕಾಲ ಅತಿಥಿ ಅಭ್ಯಾಗತರಿಗೆ ಆಧಾರಕರಾಗಿ ಸಂಸಾರ ಯಾತ್ರೆಯನ್ನು ನಡೆಯಿಸಿದರು.

ಆದರೆ ಸಂಸಾರದಲ್ಲಿ ಸುಖವು ಯಾರಿಗೂ ಶಾಶ್ವತವಾಗಿ ಪ್ರಾಪ್ತವಾಗ ತಕ್ಕುದಲ್ಲವಷ್ಟೆ! ಅವರ ಕೊನೆಯ ಬಾಲಕನು ಕೇವಲ ಎರಡು ವರ್ಷ ವಯಸ್ಕನಾಗುವ ವೇಳೆಗೆ ಅವರ ಧರ್ಮಪತ್ನಿಗೆ ಮೃತ್ಯುವೇಳೆಯೊದಗಿತು. ಲಾಲಾಜೀಯವರು ಬಹು ದ್ರವ್ಯ ವ್ಯಯಮಾಡಿ ಚಿಕಿತ್ಸೆ ಉಪಚಾರಗಳನ್ನು ನಡೆಯಿಸಿದ್ದರಾದರೂ ತಮ್ಮಾ ಪ್ರಿಯಪತ್ನಿಯನ್ನು ಕಾಲಮೃತ್ಯುವಿನಿಂದ ತಪ್ಪಿ ಸಲು ಶಕ್ತರಾಗಲಿಲ್ಲ. ಆ ಸಾಧ್ವಿಯು ಇಹಜೀವಿತದ ನಶ್ವರಸ್ಥಿತಿಯನ್ನು ಪ್ರದರ್ಶಿಸುತ್ತಾ, ತನ್ನ ಪತಿಪುತ್ರರನ್ನೂ ಮಹತ್ಸೌಭಾಗ್ಯವನ್ನೂ ಇಲ್ಲೇ ಬಿಟ್ಟು ಸುಮಂಗಲಿಯಾಗಿ ಪ್ರಯಾಣ ಮಾಡಿಬಿಟ್ಟಳು.

ಪ್ರಿಯಪತ್ನೀ ವಿಯೋಗವಾದಮೇಲೆ ಮನೆಯಲ್ಲಿನ ಚಿಕ್ಕಚಿಕ್ಕ ಮಕ್ಕಳ ಪೋಷಣಾಭಾರವು ಅನಿವಾರ್ಯವಾಗಿ ನಮ್ಮ ಕಥಾನಾಯಕರ ಮೇಲೆ ಬಿತ್ತು. ಆ ಪರದೇಶಿ ಮಕ್ಕಳ ಸ್ಥಿತಿಯನ್ನು ನೋಡಿ ಅವರ ದಯಾರ್ದ್ರ

ಹೃದಯವು ಮರುಗದಿರಲಿಲ್ಲ. ಬಂಧುಗಳಲ್ಲಿ ಅನೇಕರು ಮಕ್ಕಳ ಪೋಷಣೆಗಾಗಿ ದ್ವಿತೀಯ ವಿವಾಹ ಮಾಡಿಕೊಳ್ಳಿರೆಂದು ಅವರಿಗೆ ಸಲಹೆ ಕೊಟ್ಟರು. ಅವರಿಗೆ ಕನ್ಯಾದಾನ ಮಾಡಲೂ ಅನೇಕ ಕನ್ಯಾಪಿತೃಗಳು ಮುಂದೆ ಬಂದರು. ಆದರೆ ಪುತ್ರವಂತರಾದ ತಮಗೆ ಮುಂದೆ ವಿವಾಹವೇತಕ್ಕೆಂದು ಆ ಜಿತೇಂದ್ರಿಯರು ಪುನಃ ವಿವಾಹದ ಯೋಚನೆಯನ್ನು ಮಾಡಲಿಲ್ಲ. ಆ ವೇಳೆಗೆ ಸರಿಯಾಗಿ ಅವರ ಹಿರಿಯಣ್ಣನಾದ ಲಾಲಾ ಆತ್ಮಾರಾಮನೆಂಬಾತನೂ ಜಲಂಧರಿನಿಂದ ಲಾಹೋರಿಗೆ ಬಂದನು. ಇಬ್ಬರೂ ಒಂದೇ ಮನೆಯಲ್ಲಿ ವಾಸಿಸತೊಡಗಿದರು. ಅಣ್ಣನ ಹೆಂಡತಿಯು ಮಕ್ಕಳ ಪೋಷಣೆಯ ಭಾರವನ್ನು ವಹಿಸಿದುದರಿಂದ ಲಾಲಾಜೀಯವರು ಒಂದು ಭಾಗದಿಂದ ನಿಶ್ಚಿಂತರಾದರು.

ಆ ವೇಳೆಗೆ ಲಾಹೋರಿನಲ್ಲಿ 'ಆರ್ಯ ಪ್ರತಿನಿಧಿ ಸಭಾ' ಎಂಬ ಹೆಸರಿನಿಂದ ಆರ್ಯಸಮಾಜದ ಶಾಖೆಯೊಂದು ಸ್ಥಾಪಿತವಾಗಿದ್ದಿತು. ಅದರ ಪ್ರಧಾನ ಕಾರ್ಯಭಾರವು ನಮ್ಮ ಕಥಾನಾಯಕರ ಮೇಲೆ ಬಿದ್ದು-ಅವರು ಅದನ್ನು ಉತ್ತಮ ರೀತಿಯಿಂದ ನಿರ್ವಹಿಸಿಕೊಂಡರು. ಪಂಜಾಬ ಪ್ರಾಂತಕ್ಕೆ ಸಂಬಂಧಪಟ್ಟ ಸಮಾಜದ ಕಾರ್ಯಗಳನ್ನೆಲ್ಲ ಆ ಸಭೆಯ ಮೂಲಕ ನಿರ್ವಹಿಸಬೇಕಾಗಿದ್ದುದರಿಂದ, ಲಾಲಾಜೀಯವರು ತಮ್ಮ ದಿನದ ಅಧಿಕ ವೇಳೆಯನ್ನು ಸಭಾಕಾರ್ಯಕ್ಕಾಗಿ ವಿನಿಯೋಗಿಸಬೇಕಾಗಿದ್ದಿತು. ಇತ್ತ ಬಹು ಮೇಲಾಟದಿಂದ ಸಾಗುತ್ತಾ ಅಧಿಕ ಲಾಭದಾಯಕವಾಗಿದ್ದ ವಕೀಲಿಯ ಉದ್ಯೋಗ-ಅತ್ತ ಅವರ ಮನಸ್ಸಿಗೆ ಅತ್ಯಂತ ಪ್ರಿಯಕರವಾಗಿದ್ದ ಆರ್ಯಸಮಾಜದ ಧರ್ಮಸೇವಾ ! ಈ ಧರ್ಮ ಮತ್ತು ಅರ್ಥ ಈ ಎರಡರಲ್ಲಿ ಯಾವುದನ್ನಿಟ್ಟುಕೊಳ್ಳುವುದು-ಯಾವುದನ್ನು ತ್ಯಜಿಸುವುದು ಎಂಬ ವಿಷಯದಲ್ಲಿ ಅವರ ಮನಸ್ಸಿನಲ್ಲಿ ಕೆಲಕಾಲ ಘೋರಸಂಗ್ರಾಮ ನಡೆಯಿತು. ಹೀಗೆ ಎರಡು ದೋಣಿಗಳಲ್ಲೂ ಕಾಲಿಟ್ಟುಕೊಂಡು ಪ್ರಯಾಣಮಾಡುತ್ತಾ ಏಳೆಂಟು ವರ್ಷಕಾಲ ಕಳೆಯಿತು. ಬರುಬರುತ್ತಾ ಸಮಾಜಸೇವಾಕಾರ್ಯವು ಬಹುಮಟ್ಟಿಗೆ ವಿಸ್ತರಿಸಿದ್ದರಿಂದ ಮುಂದೆ ಎರಡು ಕೆಲಸಗಳನ್ನೂ ತೃಪ್ತಿಕರವಾಗಿ ನಡಿಸುವುದು ಅಸಾಧ್ಯವೆನಿಸಿತು. ಸಭಾಕಾರ್ಯಗಳನ್ನು ಮಾನಸಿಕಮಾಡಿ ಬಹು ಲಾಭದಾಯಕವಾಗಿದ್ದ ವಕೀಲಿಯ ಉದ್ಯೋಗದಲ್ಲಿ ಅವರ ಮನಸ್ಸು

ಹೆಚ್ಚು ಆಸಕ್ತನಾಗುವಂತೆ ಮಾಡಬೇಕೆಂದು ಯೋಚಿಸಿದ ಅವರ ಬಂಧುಗಳ ಪ್ರಯತ್ನವೆಲ್ಲ ವ್ಯರ್ಥವಾಯಿತು. ಪತ್ನೀ ವಿಯೋಗವಾಗಿ ಎಂಟು ವರ್ಷಗಳಾದುವೆಂಬ ವೇಳೆಗೆ ಅವರು, ಸಂಪೂರ್ಣವಾಗಿ ತಮ್ಮ ವಕೀಲಿ ಉದ್ಯೋಗದಿಂದ ಬಿಡುಗಡೆಹೊಂದಿ ತಮ್ಮ ಸಮಸ್ತ ಸಾಮರ್ಥ್ಯವನ್ನೂ ಸಮಾಜ ಸೇವೆಗಾಗಿ ವಿನಿಯೋಗಿಸಲು ಸಿದ್ಧರಾದರು.

ಲಾಲಾ ಮುನ್‌ಷೀರಾಮಜೀಯವರು ಆರ್ಯಸಮಾಜಕ್ಕೆ ಸೇರಿದ ಕೆಲವುದಿನಗಳೊಳಗಾಗಿಯೇ ಜಲಂಧರದ ಆರ್ಯಸಮಾಜಕ್ಕೆ ಮೇಲೆ ಹೇಳಿದ ಆರ್ಯ ಪ್ರತಿನಿಧಿಸಭಾ ಪರವಾಗಿ ಸದಸ್ಯರಾಗಿ ಚುನಾಯಿಸಲ್ಪಟ್ಟರು. ಆ ವೇಳೆಗೆ ಲಾಹೋರ್ ನಗರದಲ್ಲಿ ಡಿ. ಎ. ವಿ. ಕಾಲೇಜ್ ಎಂಬ ಕಲಾಶಾಲೆಯೊಂದು ಸ್ಥಾಪನೆಯಾಗಿ ಅದರಲ್ಲಿ ಪಂಡಿತ ಗುರುದತ್ತ ವಿದ್ಯಾರ್ಥಿಯೆಂಬ ಮಹಾವಿದ್ವಾಂಸನ ಪ್ರಭಾವವು ವಿದ್ಯಾರ್ಥಿಗಳನ್ನು ವಿಶೇಷ ರೀತಿಯಿಂದ ಆಕರ್ಷಿಸುವಂತಿತ್ತು. ಲಾಲಾ ಮುನ್‌ಷೀರಾಮಜೀಯವರು ಆ ವಿದ್ವಾಂಸರನ್ನು ಆಶ್ರಯಿಸಿ ಅಷ್ಟಾಧ್ಯಾಯಿೀ ಮತ್ತು ಇತರ ಅನೇಕ ಸಂಸ್ಕೃತ ಗ್ರಂಥಗಳನ್ನು ಪಾಠಮಾಡಿದರು. ಮುಂದೆ ಕೆಲದಿನಗಳೊಳಗಾಗಿಯೇ ಡಿ. ಎ. ವಿ. ಕಾಲೇಜಿನ ನೇತೃಗಳಾಗಿದ್ದ ಆರ್ಯಸಮಾಜ ಸಂಚಾಲಕರಲ್ಲಿ ಮತಭೇದವುಂಟಾಯಿತು. ಡಿ. ಎ. ವಿ. (ದಯಾನಂದ ಆಂಗ್ಲೋ ವೇದಿಕ್)ಕಾಲೇಜೆಂಬುದು ಋಷಿದಯಾನಂದರ ಪವಿತ್ರನಾಮದ ಮತ್ತು ಅವರ ದಿವ್ಯ ತತ್ವಗಳ ಸ್ಮಾರಕವಾಗಿ ಸ್ಥಾಪಿತವಾದುದಾದ್ದರಿಂದ ಅದರಲ್ಲಿ ವೇದವೇದಾಂಗಗಳ ಅಭ್ಯಾಸಕ್ಕೆ ಪ್ರಾಧಾನ್ಯ ಕೊಡಬೇಕೆಂದು ವಾದಿಸುತ್ತಿದ್ದುದು ಒಂದು ಮತ. ಈ ಪಕ್ಷವನ್ನು ಅಷ್ಟಾಧ್ಯಾಯಿೀ ಮತ್ತು ನಿರುಕ್ತಗಳ ಅಪ್ರತಿಮ ಭಕ್ತನಾಗಿದ್ದ ಪಂ. ಗುರುದತ್ತ ವಿದ್ಯಾರ್ಥಿಯು ಸಮರ್ಥಿಸುತ್ತಿದ್ದನು. ಲಾಲಾ ಮುನ್‌ಷೀರಾಮರು ಈ ಪಕ್ಷವನ್ನೇ ಒಪ್ಪಿದ್ದರು. ಮತ್ತೊಂದು ಪಕ್ಷದವರು 'ಅದು ಕೂಡದು-ಇತರ ಸರ್ಕಾರಿಯ ವಿದ್ಯಾಲಯಗಳಲ್ಲಿ ಪದ್ಧತಿಯಿರುವಂತೆಯೇ ಪಾಠ ನಡೆಯಬೇಕೆಂದು ವಾದಿಸುತ್ತಿದ್ದರು. ಈ ಮತಭೇದವು ದಿನದಿನಕ್ಕೆ ವೃದ್ಧಿಯಾಗತೊಡಗಿತು. ಪಂಡಿತ ಗುರುದತ್ತ ಪಕ್ಷದವರು, ಯಾವ ಋಷಿ ದಯಾನಂದರ ಸ್ಮಾರಕವಾಗಿ ಕಾಲೇಜು ಪ್ರಾರಂಭವಾಯಿತೋ ಅವರ ಮೂಲ ಸಿದ್ಧಾಂತಗಳಿಗೇ ಲೋಪವಿರುವುದಾದರೆ ಆ ಸ್ಮಾರಕದಿಂದ ತಾನೇ

ಪ್ರಯೋಜನವೇನೆಂದು ಅಭಿಪ್ರಾಯಪಟ್ಟು-ಮುಂದೆ ಅದರ ಕಾರ್ಯಗಳಲ್ಲಿ ನಿರುತ್ಸಾಹಿತರಾದರು. ಈ ಬೇಗೆಯು ಉಭಯ ಪಕ್ಷದವರ ಮನಸ್ಸಿನಲ್ಲೂ ದಿನದಿನಕ್ಕೆ ವಿಶೇಷರೀತಿಯಿಂದ ಅಭಿವೃದ್ಧಿಯಾಗತೊಡಗಿತು.

ಈ ಮಧ್ಯೆ ೧೮೯೦ ನೆಯ ಸಂ॥ದಲ್ಲಿ ಪಂ. ಗುರುದತ್ತ ವಿದ್ಯಾರ್ಥಿಯು ಅಕಾಲಮೃತ್ಯುವಿಗೆ ಗ್ರಾಸವಾಗಲಾಗಿ, ಆತನ ಪಕ್ಷದವರ ನೇತೃತ್ವವು ನಮ್ಮ ಕಥಾನಾಯಕರ ಪಾಲಿಗೆ ಬಂತು. ಡಿ. ಎ. ವಿ. ಕಾಲೇಜಿನ ಪಾಠ ಕ್ರಮದಲ್ಲಿ ಸಂಸ್ಕೃತದ ಅಭ್ಯಾಸವನ್ನು ಹೆಚ್ಚು ಮಾಡಬೇಕೆಂಬುದು ಅವರ ಅಭಿಲಾಷೆಯಿತ್ತು. ಆ ವರ್ಷ ಲಾಹೋರ್ ನಗರದಲ್ಲಿ ಸೇರಿದ ಆರ್ಯ ಸಮಾಜದ ಮಹಾಸಭೆಯಲ್ಲಿ-ವೇದಧರ್ಮಾನುಯಾಯಿಗಳಾದ ತಮಗೆ ಮಾಂಸಾಹಾರಕ್ಕೆ ಅವಕಾಶವುಂಟೇ ಇಲ್ಲವೆ ಎಂಬ ಪಕ್ಷದವರೊಬ್ಬರು ಎದ್ದರು. ಆರ್ಯಸಮಾಜದಲ್ಲಿ ಮೇಲೆ ಕಂಡ ಗುರುದತ್ತ ಪಕ್ಷವೊಂದು-ಕಾಲೇಜು ಪಕ್ಷವೊಂದು ಇದ್ದು ಅವುಗಳೊಂದಿಗೆ ಈಗ ಮಾಂಸಹಾರ ಸಮರ್ಥನೆ ಮಾಡುವವರ ಪಕ್ಷವೊಂದು ಉಂಟಾಯಿತು. ಹೀಗೆ ವಿವಿಧ ಪಕ್ಷಗಳಾಗಿ ಒಡೆದ ಆರ್ಯಸಮಾಜದ ಅಂತರಂಗ ಚರಿತ್ರೆಯ ದುಃಖಕರ ವಿಚಾರವನ್ನು ಕುರಿತು ಇಲ್ಲಿ ಹೆಚ್ಚು ವರ್ಣಿಸಬೇಕಾದುದು ಅಪ್ರಕೃತವು. ಪ್ರತಿದ್ವಂದ್ವಿಗಳ ಪಕ್ಷದಿಂದ ಹೆಚ್ಚು ಹೆಚ್ಚು ವಿರೋಧಾಭಿಪ್ರಾಯಗಳು ಬರತೊಡಗಿದಂತೆಲ್ಲಾ ಲಾಲಾ ಮುನ್ಷೀರಾಂಜೀಯವರೂ ತಮ್ಮ ಪಕ್ಷವನ್ನು ಸರ್ವತೋಮುಖವಾಗಿ ಬಲಪಡಿಸುತ್ತಾ, ಅದರ ಗೌರವವನ್ನು ಕಾಯ್ದುಕೊಳ್ಳುವುದರಲ್ಲಿ ಆಸಕ್ತರಾದರು. ೧೮೯೦ ನೆಯ ಸಂ॥ ದಲ್ಲಿ ಆರ್ಯಸಮಾಜದ ಸೇವಾಕಾರ್ಯವನ್ನು ಒಂದು ಸ್ಥಿರರೂಪದಿಂದ ನಡಿಸಬೇಕೆಂದು ಸಂಕಲ್ಪಿಸಿ, ಅವರು **ಸದ್ಧರ್ಮಪ್ರಚಾರಕ** ಎಂಬೊಂದು ಪತ್ರವನ್ನು ಹೊರಡಿಸಿದರು. ಸಮಾಜಸೇವಾ ರೂಪವಾದ ಈ ಕಾರ್ಯಗಳಿಂದ ಅವರ ವಿಷಯದಲ್ಲಿ ಸಮಾಜದ ಸದಸ್ಯರಿಗೂ ಮತ್ತು ಇತರರಿಗೂ ವಿಶೇಷ ಗೌರವವೂ ಆದರಭಾವವೂ ಉಂಟಾಗಿ ಅವರನ್ನು 'ಮಹಾತ್ಮಾ ಮುನ್ಷೀರಾಂಜೀ' ಎಂದು ಸಂಬೋಧಿಸತೊಡಗಿದರು. ಮೇಲ್ಕಂಡ ಗುರುದತ್ತ ಪಕ್ಷಕ್ಕೆ ಅಗ ನೇತೃಗಳಾಗಿದ್ದುದರಿಂದ ಅದನ್ನು ಮಹಾತ್ಮಾ ಪಾರ್ಟಿ ಎಂಬ ಹೆಸರಿನಿಂದ ಕರೆಯುತ್ತಿದ್ದರು. ಕಾಲೇಜು ಪಾರ್ಟಿಯಲ್ಲಿ, ರಾಯಮೂಲರಾಜ

ಎಂ. ಎ., ಮಹಾತ್ಮಾ ಹಂಸರಾಜ, ಲಾ. ಲಜಪತ್‌ರಾಯ್ ಮತ್ತು ಲಾ, ಲಾಲಚಂದ್ರ ಮುಂತಾದ ಸುಪ್ರಸಿದ್ಧ ಧುರೀಣರಿದ್ದು ಅದು ಕಲ್ಚರ್ಡ್ ಪಾರ್ಟಿ ಎಂದು ಕರೆಯಲ್ಪಡುತ್ತಿತ್ತು.-ಆರ್ಯ ಪ್ರತಿನಿಧಿ ಸಭಾಧ್ಯಕ್ಷ ಪದವಿಯು ಮಹಾತ್ಮಾ ಮುನ್ಷೀರಾಂಜೀಯವರ ಕಡೆಗಿದ್ದುದರಿಂದ ಅವರು 'ವೇದ ಧರ್ಮ ಪ್ರಚಾರ' ಎಂಬ ಹೆಸರಿನಿಂದ ಆರ್ಯಸಮಾಜ ಸಿದ್ಧಾಂತಗಳನ್ನು ಪ್ರಚಾರಗೊಳಿಸುವ ಕಾರ್ಯಕ್ಕೆ ತೊಡಗಿದರು. ೧೮೯೫ ನೆಯ ಸಂ|| ದಲ್ಲಿ ಸಮಾಜವು ಸರ್ಕಾರದಲ್ಲಿ ರಜಿಸ್ಟರು ಮಾಡಲ್ಪಟ್ಟಿತು. ಪ್ರತಿದ್ವಂದ್ವಿ ಪಕ್ಷದೊಂದಿಗೆ ಸ್ಪರ್ಧಿಸಿ ಅತ್ಯುತ್ಸಾಹದಿಂದ ಕೆಲಸಮಾಡತೊಡಗಿದ ಮುನ್ಷೀರಾಂಜೀಯವರ ದಿನದ ಇಪ್ಪತ್ನಾಲ್ಕು ಗಂಟೆಗಳಕಾಲವೂ ಧರ್ಮಪ್ರಚಾರ ಸದ್ಧರ್ಮಪ್ರಚಾರಕ ಪತ್ರಿಕಾ ಸಂಪಾದನೆ ಮುಂತಾದ ಕಾರ್ಯಗಳಲ್ಲೇ ವಿನಿಯೋಗವಾಗುತ್ತಿದ್ದುದರಿಂದ ಅವರು ಮನೆಯ ಕೆಲಸಕಾರ್ಯಗಳ ಕಡೆಗೆ ತಿರುಗಿನೋಡಲೂ ಅವಕಾಶವಿರಲಿಲ್ಲ. ಆ ಸಮಯದಲ್ಲಿ ಲಾ ಪಂ. ಲೇಖರಾಮಜೀ ಎಂಬೊಬ್ಬ ಧೀರ ಪುರುಷರು ಇವರೊಂದಿಗಿದ್ದು ಅವಿಶ್ರಾಂತ ಶ್ರಮಪಟ್ಟು ಕೆಲಸಮಾಡತೊಡಗಿದರು.



## — ಗುರುಕುಲ ಸ್ಥಾಪನೆ —

ಶ್ರೀ ದಯಾನಂದ ಸರಸ್ವತಿಯವರ ಸ್ಮಾರಕವಾಗಿ ಸ್ಥಾಪನೆಯಾದ 'ದಯಾನಂದ ಆಂಗ್ಲೋ ವೇದಿಕ್' ಕಾಲೇಜಿನ ಕಾರ್ಯಕ್ರಮಗಳ ಮೂಲಕ, ಶ್ರೀಯವರು ಭಾರತೀಯರ ವಿದ್ಯಾಭ್ಯಾಸ ವಿಷಯದಲ್ಲಿ ಕಂಡಿದ್ದ ಸ್ವಪ್ನದ ಫಲವು ವ್ಯರ್ಥವಾಯಿತೆಂದು ತೋರಿದ ನಂತರ, ಮಹಾತ್ಮಾ ಮುನ್ಷೀರಾಂಜೀಯವರು ಆ ಪ್ರಶ್ನೆಯನ್ನು ಹೇಗೆ ಬಿಡಿಸಬಹುದೆಂದು ಸದಾ ಯೋಚಿಸತೊಡಗಿದರು. ಕೊನೆಗೆ ಭಾರತ ವಿದ್ಯಾರ್ಥಿ ವರ್ಗದ ಬ್ರಹ್ಮಚರ್ಯರಕ್ಷಣೆಗಾಗಿ ಗುರುಕುಲವೊಂದನ್ನು ಸ್ಥಾಪಿಸಿದವಿನಹ ಋಷಿ ದಯಾನಂದರ ಉದ್ದೇಶವೂ ನೆರವೇರುವುದಿಲ್ಲ-ಮತ್ತು ನಮ್ಮ ಬಾಲಕರ ವಿದ್ಯಾಭ್ಯಾಸ ವಿಚಾ

ರವೂ ಉತ್ತಮಗೊಳ್ಳುವುದಿಲ್ಲ ಎಂಬುದನ್ನು ಖಚಿತವಾಗಿ ಕಂಡುಕೊಂಡರು. 'ಗುರುಕುಲ'ದ ದಿವ್ಯ ಭಾವನೆಯು ಅವರ ಮನಸ್ಸಿಗೆ ಯಾವ ಅಮೃತ ಘಳಿಗೆಯಲ್ಲಿ ಸ್ಫುರಿಸಿತೋ! ಮುಂದೆ ಕ್ಷಣಮಾತ್ರವೂ ಅವರ ದೃಷ್ಟಿಯಿಂದ ಅದು ಮರೆಯಾಗದೆ, ಯೋಚಿಸಿದಷ್ಟೂ ಆ ವಿಷಯದಲ್ಲಿ ಮೇಲೆ ಮೇಲೆ ಗಂಭೀರ ಅಭಿಪ್ರಾಯಗಳು ತೋರಿಬರುತ್ತಾ, ಅದನ್ನು ಸಾಧಿಸುವ ಮಾರ್ಗವು ಹೇಗೆಂಬ ಚಿಂತಾಲತೆಯನ್ನು ಅವರ ಮನಸ್ಸಿನಲ್ಲಿ ಕ್ಷಣಕ್ಷಣಕ್ಕೂ ಬೆಳೆಯಿಸತೊಡಗಿತು.

ಮುಂದೆ ಕೆಲವು ದಿನಗಳೊಳಗಾಗಿಯೇ ಮಹಾತ್ಮಾ ಮುನ್ಷೀರಾಂಜೀಯವರು ಗುರುಕುಲ ಸ್ಥಾಪನ, ಮುಖ್ಯ ಉದ್ದೇಶ್ಯ, ಕಾರ್ಯಕ್ರಮ ಮುಂತಾದುವುಗಳನ್ನು ಸೂಚಿಸುವ ತಮ್ಮ ಅಭಿಪ್ರಾಯಗಳನ್ನೆಲ್ಲ ಏಕತ್ರ ಸಂಗ್ರಹಿಸಿ ಒಂದು ಲೇಖನವನ್ನು ಬರೆದು ಪಂಜಾಬಿನ ಆರ್ಯಸಮಾಜದ ಪ್ರತಿನಿಧಿಸಭಾ ಸಮಕ್ಷಮದಲ್ಲಿಟ್ಟರು. ೧೮೯೭ ನೆಯ ನವಂಬರ್ ೨೬ ನೆಯ ದಿನ ನೆರೆದ ಆ ಸಭೆಯಲ್ಲಿ ಅದರ ವಿಚಾರವು ಚರ್ಚೆಯಾಗಿ ವಿಷಯವು ಸ್ವೀಕೃತವಾಯಿತು. ಮತ್ತು ಪ್ರಾರಂಭದ ಖರ್ಚುವೆಚ್ಚಗಳಿಗೆಂದು ೫೦೦೦ ರೂಪಾಯಿಗಳನ್ನು ಸಭಾ ಮೂಲಧನದಿಂದ ತೆಗೆದಿಟ್ಟುದೂ ಆಯಿತು. ಕೆಲ ದಿನಗಳು ಆ ಸಂಬಂಧ ನಿಯಮ ನಿಬಂಧನೆಗಳನ್ನು ಏರ್ಪಡಿಸುವುದರಲ್ಲಿ ವ್ಯಯವಾದುವು. ೧೮೯೮ ನೆಯ ಸಂ|| ದ ಸಭೆಯೂ ನೆರೆಯಿತು. ಆ ವರೆಗೆ ಆ ಸಂಬಂಧ ಯಾವ ಕೆಲಸವೂ ನಡೆಯದೆ ಸಾವಕಾಶವಾಗುತ್ತಿದ್ದುದು ಮುನ್ಷೀರಾಮರ ಮನಸ್ಸಿಗೆ ಅತಿಶಯ ಖೇದವೆನಿಸಿತು. ಒಡನೆ ಸದ್ಧರ್ಮ ಪ್ರಚಾರ ಪತ್ರದಲ್ಲಿ:—'ಗುರುಕುಲ ಸ್ಥಾಪನಾದಿ ಕಾರ್ಯಗಳಿಗಾಗಿ ಮೂವತ್ತು ಸಹಸ್ರ ರೂಪಾಯಿಗಳನ್ನು ಏಕತ್ರ ಸಂಗ್ರಹಿಸುವವರೆಗೆ ನಾನು ಪುನಃ ಮನೆಯ ಹೊಸ್ತಿಲನ್ನು ಮೆಟ್ಟುವುದಿಲ್ಲ'ವೆಂದು ವೀರಪ್ರತಿಜ್ಞೆಯನ್ನು ಉದ್ಘೋಷಿಸುವ ಲೇಖನವನ್ನು ಪ್ರಕಟಿಸಿ ಮನೆಯಿಂದ ಹೊರಹೊರಟರು. ಇತ್ತ ಮುದ್ರಣಾಲಯದ ಕೆಲಸಕಾರ್ಯಗಳು ಅಸ್ತವ್ಯಸ್ತವಾದುವು. ಅತ್ತ ಮನೆಯ ವಿಚಾರವಂತೂ ಅವರ ಬಳಿಗೇ ಬರುವಂತಿರಲಿಲ್ಲ—ಇನ್ನು ಮಕ್ಕಳ ವಿಚಾರವನ್ನೂ ಆ ಧೀರರು ಮನಸ್ಸಿಗೆ ತಂದುಕೊಳ್ಳಲಿಲ್ಲ. ಹೊರಟವರು, ಪಂಜಾಬಿನ ಮತ್ತು ಉತ್ತರ ಭಾರತದ ಅನೇಕ ಭಾಗಗಳಲ್ಲಿ ಸಂಚ

ರಿಸಿ ಗುರುಕುಲಕ್ಕಾಗಿ ದ್ರವ್ಯವನ್ನು ಯಾಚಿಸಲಾರಂಭಿಸಿದರು. ಆವರೆಗೆ ಗುರುಕುಲವೆಂಬ ಹೆಸರನ್ನೇ ಯಾರೂ ಕೇಳಿರಲಿಲ್ಲ. ಆಮೂಲಕ ನಡೆಯುಬಹುದಾದ ವಿದ್ಯಾಭ್ಯಾಸದ ಉಚ್ಚಾದರ್ಶವು ಯಾರ ಮನಸ್ಸಿಗೂ ಬೋಧೆಯಾಗಿರಲಿಲ್ಲ. ಅಲ್ಲದೆ ಎಲ್ಲೆಲ್ಲೂ ದಾರಿದ್ರ್ಯವು ವ್ಯಾಪಿಸಿ, ಜನಗಳ ಜೀವನ ನಡೆವುದೇ ಎಷ್ಟೋ ಕಷ್ಟವಾಗಿದ್ದಿತು. ಅಂತಹ ಸಂದರ್ಭದಲ್ಲಿ ಮೂವತ್ತು ಸಹಸ್ರ ರೂಪಾಯಿಗಳನ್ನು ಸಂಗ್ರಹಿಸುವುದು ಸುಲಭಸಾಧ್ಯವಾದ ಕಾರ್ಯವಲ್ಲ! ಆದರೂ ಜಿತಮನಸ್ಕತೆಯಿಂದ ಹೊರಟ ಆ ಧೀರರು ಯಾವ ಅಡಚಣೆಗೂ ಅಂಜದೆ, ಏಳು ತಿಂಗಳ ಕಾಲ ಸಂಚರಿಸಿ ತಮ್ಮ ಪ್ರತಿಜ್ಞೆಯಂತೆಯೇ ಮೂವತ್ತುಸಹಸ್ರ ದ್ರವ್ಯವನ್ನು ಸಂಗ್ರಹಿಸಿಕೊಂಡು ಲಾಹೋರನ್ನು ಸೇರಿದರು. ಹಾಗೆ ಕೃತ್ಯಕೃತ್ಯರಾಗಿ ಹಿಂದಿರುಗಿದ ಆ ಮಹನೀಯರ ವಿಷಯದಲ್ಲಿ ಸಮಾಜದವರಿಗೆ ಉಂಟಾದ ಗೌರವಾದರಗಳಿಗೆ ಮೇರೆಯಿಲ್ಲವಾಯಿತು. ಆವರೆಗೆ ಔಪಚಾರಿಕವಾಗಿ ಉಪಯೋಗಿಸುತ್ತಿದ್ದ 'ಮಹಾತ್ಮಾ' ಪದದ ಸಂಬೋಧನೆಯು ಅಂದು ಲಾಲಾ ಮುನ್ಷೀರಾಂಜೀಯವರ ವಿಷಯದಲ್ಲಿ ಅನ್ವರ್ಥವಾಯಿತೆಂದುಕೊಂಡರು.

ಹರಿದ್ವಾರ ಕ್ಷೇತ್ರದ ಬಳಿಯಲ್ಲಿನ ಕಾಂಗರೀ ಎಂಬೊಂದು ಸ್ಥಳವು ಗುರುಕುಲ ಸ್ಥಾಪನೆಗಾಗಿ ಚುನಾಯಿಸಲ್ಪಟ್ಟಿತು. ಅಷ್ಟು ಮಾತ್ರವಲ್ಲ- ಆ ಸ್ಥಳವು ಒಬ್ಬಾನೊಬ್ಬ ಮಹಾನುಭಾವನಿಂದ ಉಚಿತವಾಗಿ-ದಾನರೂಪದಿಂದಲೇ ದೊರೆಯಿತು. ೧೯೦೨ ನೆಯ ಸಂವತ್ಸರದ ಮಾರ್ಚಿ ೨ ನೆಯ ತಾರೀಖಿನಲ್ಲಿ, ಆ ವಿಶಾಲ ಅರಣ್ಯ ಪ್ರದೇಶದಲ್ಲಿ ಕೆಲವು ಜೋಪಡಿಗಳನ್ನು ನಿರ್ಮಿಸಿಕೊಂಡು ಮಹಾತ್ಮಾ ಮುನ್ಷೀರಾಮರು ೩೦ ಮಂದಿ ಬ್ರಹ್ಮಚಾರಿಗಳೊಂದಿಗೆ ಅಲ್ಲಿಗೆ ವಾಸಿಸಲು ನಡೆದರು. ಗುರುಕುಲದ ಪ್ರಥಮ ವಿದ್ಯಾರ್ಥಿಗಳು ಅವರ ಇಬ್ಬರು ಮಕ್ಕಳೇ ಎಂದು ಪ್ರಕಟವಾಗಿದೆ. ಗುರು ಕುಲಕ್ಕೆ ಪ್ರಾರಂಭದ ಮುಖ್ಯಾಧಿಷ್ಠಾತೃವಾಗಿ ನಿಲ್ಲಲು, ಅದಕ್ಕಾಗಿ ಅಹರ್ನಿಶಿ ಶ್ರಮಿಸಿದ ಅವರಲ್ಲದೆ, ಮತ್ತಾರು ಯೋಗ್ಯರು! ಲೌಕಿಕ ಉದ್ಯೋಗವು ಎಂದೋ ಬಿಟ್ಟುಹೋಗಿದ್ದಿತಲ್ಲವೆ! ಅದರೊಂದಿಗೇ ಈಗ ಲೌಕಿಕ ಸಂಬಂಧವಾದ ಸಮಸ್ತ ವಿಚಾರವೂ ಬಿಟ್ಟುಹೋಗಿ ಗುರುಕುಲ- ಗುರುಕುಲವೊಂದೇ ಅವರ ಸರ್ವಸ್ವವಾಗಿ ನಿಂತಿತು. ಸದ್ಧರ್ಮ ಪ್ರಚಾರ ಪತ್ರವು

ಛಾಪೆಯಾಗುತ್ತಿದ್ದ ಮುದ್ರಣಾಲಯವು ಬೇರೆಯವರ ವಶಕ್ಕೆ ವಹಿಸಲ್ಪಟ್ಟಿತು. ಕೆಲವು ಸಂವತ್ಸರಗಳ ತರುವಾಯ ತಮ್ಮ ಸ್ವಂತ ಆಸ್ತಿಯಾದ ಆ ಮುದ್ರಣಾಲಯವನ್ನೂ ಅವರು ಗುರುಕುಲಕ್ಕೆ ದಾನ ಮಾಡಿಬಿಟ್ಟರು. ಜಲಂಧರ್ ಪಟ್ಟಣದಲ್ಲಿ ಅವರು ಕಟ್ಟಿಸಿದ ಹತ್ತೆಂಟು ಸಹಸ್ರ ರೂಪಾಯಿಗಳ ಬೆಲೆ ಬಾಳುವ ಭವ್ಯಗೃಹವೊಂದಿದ್ದಿತಲ್ಲವೆ! ಅದನ್ನೂ ಗುರುಕುಲಕ್ಕೇ ದಾನಮಾಡಿ ವಹಿಸಿಕೊಟ್ಟು ತಮ್ಮ ಸರ್ವಮೇಧ ಯಜ್ಞವನ್ನು ಪೂರ್ಣ ಮಾಡಿದರು. ಅಂದಿನಿಂದ ೧೯೧೭ನೆಯ ಸಂವತ್ಸರದವರೆಗೆ ಆ ಗುರುಕುಲದ ಅಭಿವೃದ್ಧಿಯಲ್ಲೇ ಸರ್ವದಾ ಮಗ್ನರಾಗಿದ್ದು-ಮಹಾತ್ಮಾ ಮುನ್ಷೀರಾಂಜೀಯವರು ಅದನ್ನು ಸರ್ವಾಂಗ ಸಂಪೂರ್ಣತೆಯಿಂದ ಶೋಭಿಸುವಂತೆ ಮಾಡಿದರು. ಅವರ ಅಷ್ಟು ದಿನಗಳ ಪರಿಶ್ರಮದಿಂದ ರೂಪುಗೊಂಡ ಆ ಮಹಾ ವಿದ್ಯಾಲಯವು, ಇಂದು ದೇಶವಿದೇಶಗಳವರ ದೃಷ್ಟಿಯನ್ನೂ ಮನಸ್ಸನ್ನೂ ಆಕರ್ಷಿಸುತ್ತಿದೆ. ಖಂಡಾಂತರಗಳ ಸುಪ್ರಸಿದ್ಧ ವಿದ್ಯಾನಿಧಿಗಳೂ ರಾಜಕರಣ ಪಟುಗಳೂ ಅದರಲ್ಲಿ ನಡೆವ ಕಾರ್ಯಕ್ರಮಗಳನ್ನು ನೋಡಿ ಆಶ್ಚರ್ಯಚಕಿತರಾಗುತ್ತಿದ್ದಾರೆ. ಅಲ್ಲಿಯ ವಿದ್ಯಾರ್ಥಿಗಳಾದರೂ ನಿಶ್ಚಲ ಬ್ರಹ್ಮಚರ್ಯ ಸತ್ಯನಿಷ್ಠೆ ದೇಶಾಭಿಮಾನ ಧರ್ಮಾಭಿಮಾನಗಳಿಂದ ಭಾರತೀಯ ಇತರ ರಾಜಕೀಯ ವಿದ್ಯಾಲಯಗಳಿಂದ ಹೊರಬೀಳುವ ವಿದ್ಯಾರ್ಥಿ ವೃಂದವನ್ನು ನಾಚಿಸುವಂತೆ ದಿವ್ಯ ತೇಜಃಪುಂಜರಾಗಿ, ದೇಶಸೇವೆಗೆ ನಡುವನ್ನು ಕಟ್ಟಿ ವರ್ಷವರ್ಷವೂ ಹೊರಹೊರಡುತ್ತಿದ್ದಾರ. ಕೇವಲ ಬರಿಗೈಯಿಂದ ಇಂತಹ ಮಹತ್ವದ ರಾಷ್ಟ್ರೀಯ ವಿಶ್ವವಿದ್ಯಾಲಯವನ್ನು ನಿರ್ಮಿಸಿದ ನಮ್ಮ ಕಥಾನಾಯಕರು ಮಹಾ ಪುರುಷರಲ್ಲವೆ!



## — ಆಶ್ರಮಸ್ವೀಕಾರ - ಶ್ರದ್ಧಾನಂದ ಸನ್ಯಾಸಿಯವರು —

ಮಹಾತ್ಮಾ ಮುನ್ಷೀರಾಂಜೀಯವರು ವೈದಿಕ ಧರ್ಮದಲ್ಲಿ ಅತ್ಯಧಿಕ ನಿಷ್ಠೆಯುಳ್ಳವರು. ಆರ್ಯಸಮಾಜಕ್ಕೆ ಸೇರುವುದಕ್ಕೆ ಪೂರ್ವ ಅವರು ಬ್ರಹ್ಮಚರ್ಯವನ್ನು ಮುಗಿಸಿ ಗೃಹಸ್ಥ ಧರ್ಮವನ್ನು ಸ್ವೀಕರಿಸಿದ್ದರಷ್ಟೆ! ಆದರೆ ಆ ಕಾಲದಲ್ಲಿ, ತಾವು ಇದ್ದ ಬ್ರಹ್ಮಚರ್ಯ ಅಥವ ಗೃಹಸ್ಥ

ಆಶ್ರಮದ ವಿಚಾರವು ಅವರ ಲಕ್ಷ್ಯದಲ್ಲಿರಲಿಲ್ಲ. ಆರ್ಯಸಮಾಜಕ್ಕೆ ಸೇರಿದನಂತರ-ಅದರಲ್ಲೂ ಗುರುಕುಲ ಸ್ಥಾಪನೆಯಾದನಂತರ ವೈದಿಕ ಧರ್ಮ ದಿಂದ ವಿಧಿಸಲ್ಪಟ್ಟಿದ್ದ ಈ ಆಶ್ರಮಾದಿಗಳ ವಿಷಯದಲ್ಲಿನ ಶ್ರದ್ಧೆಯು ದೃಢ ವಾಯಿತು. ಅಂತೆಯೇ ಅವರು, ಗುರುಕುಲ ಸ್ಥಾಪನೆಗೆಂದು ಧನಸಂಗ್ರಹಣ ಕ್ಕಾಗಿ ಪ್ರತಿಜ್ಞೆಮಾಡಿ ಹೊರಟಾಗಲೇ ಗೃಹಸ್ಥಾಶ್ರಮದ ಮುಖ್ಯ ಆಧಾರ ಗಳಾದ ಕಾಮಿನೀ ಕಾಂಚನಗಳ ಸಂಗ್ರಹಣೋದ್ದೇಶವನ್ನು ದೂರಮಾಡಿ ವಾನಪ್ರಸ್ಥಾಶ್ರಮವನ್ನು ಸ್ವೀಕಾರ ಮಾಡಿದ್ದರು. ಈ ಆಶ್ರಮದಲ್ಲಿ ಗುರುಕುಲ ಕ್ಷೇತ್ರದಲ್ಲಿದ್ದು ೧೯೦೪ ನೆಯ ಸಂವತ್ಸರದಿಂದ ೧೯೧೭ ರವರೆಗೆ ಲೋಕಸೇವೆಯನ್ನು ಸಲ್ಲಿಸಿದ್ದಾಯಿತು. ಮುಂದೆ ಸನ್ಯಾಸ ಸ್ವೀಕಾರಮಾಡಿ, ವೈದಿಕಧರ್ಮದಿಂದ ಉಕ್ತವಾದ ಸರ್ವಾಂಗಪರಿಪೂರ್ಣವಾದ ಆಶ್ರಮ ಧರ್ಮಪಾಲನೆಯಿಂದ ಯೋಗ್ಯತಾಸಿದ್ಧಿಯನ್ನು ಹೊಂದಿ ಧಾರ್ಮಿಕ ಸೇವೆಯಿಂದ ತಮ್ಮ ಕರ್ತವ್ಯವನ್ನು ನೆರವೇರಿಸಬೇಕೆಂದು ಸಂಕಲ್ಪಮಾಡಿ ದರು. ಒಡನೆ ಆ ವೃತ್ತಾಂತವು ಪ್ರಕಟವಾಯಿತು. ೧೯೧೭ ನೆಯ ಸಂ|| ದಲ್ಲಿ ಅಶೇಷ ಆರ್ಯ ಜನಾಂಗವೂ ಶ್ರೀಯುವರು ಸರ್ವಸಂಗ ಪರಿತ್ಯಾಗ ಮಾಡುವ ಆ ದಿವ್ಯ ದೃಶ್ಯವನ್ನು ನೋಡಲು ಸಹಸ್ರ ಸಹಸ್ರ ಸಂಖ್ಯೆಯಿಂದ ನೆರೆಯಿತು. ಮಹಾತ್ಮಾ ಮುನ್ಷೀರಾಂಜೀಯವರು ತಾವು ಆವರೆಗೆ ಪುತ್ರವತ್ ಪಾಲನೆ ಮಾಡಿಕೊಂಡು ಬಂದ ಗುರುಕುಲ ಬ್ರಹ್ಮಚರ್ಯಾ ಶ್ರಮವನ್ನು ತಮ್ಮ ಅನುಯಾಯಿಗಳಲ್ಲೊಬ್ಬರ ವಶಕ್ಕೊಪ್ಪಿಸಿ, ಲೌಕಿಕ ವಾದ ಸಮಸ್ತ ಸಂಬಂಧ ಬಾಂಧವ್ಯಗಳನ್ನೂ ವಿಸರ್ಜಿಸಿ, ಶಿರೋಮುಂಡನ ಕಾಷಾಯ ವಸ್ತ್ರಧಾರಣಾದಿ ಪರಂಪರಾಗತವಾದ ಬಾಹ್ಯಾಚರಣೆಗಳಿಂದಲೂ, ವಿಧ್ಯುಕ್ತವಾಗಿ ನಡೆಯಬೇಕಾದ ಹವನ ಹೋಮಾದಿ ವೈದಿಕಾಚಾರಗಳಿಂ ದಲೂ ಸನ್ಯಾಸ ಧರ್ಮವನ್ನು ಸ್ವೀಕಾರ ಮಾಡಿದರು. ಪ್ರಾರಂಭದಿಂದ ಯಾವುದೊಂದು ಕೆಲಸವನ್ನೂ ಶ್ರದ್ಧೆಯನ್ನೇ ಮೂಲಮಂತ್ರವನ್ನಾಗಿಟ್ಟು ಕೊಂಡು ಮಾಡುತ್ತಾ ಬಂದ ಅವರು 'ಸ್ವಾಮಿ ಶ್ರದ್ಧಾನಂದ' ರೆಂಬ ನಾಮವನ್ನೇ ಧಾರಣೆ ಮಾಡಿದುದು ಯುಕ್ತಿಯುಕ್ತವಾಗಿಯೂ ಅನ್ವರ್ಥ ವಾಗಿಯೂ ಇದ್ದಿತು.



## — ರಾಷ್ಟ್ರೀಯ ಸಂಗ್ರಾಮದಲ್ಲಿ —

ಸನ್ಯಾಸಾಶ್ರಮಸ್ವೀಕಾರದಿಂದ ನಮ್ಮ ಕಥಾನಾಯಕರ ಕಾರ್ಯಕ್ಷೇತ್ರವು, 'ಗುರುಕುಲ' ವೆಂಬಷ್ಟು ಸಂಕುಚಿತ ಪ್ರದೇಶ ಮಾತ್ರವಲ್ಲದೆ, ದೇಶದಲ್ಲೆಲ್ಲಾ ವ್ಯಾಪಿಸಲು ಅವಕಾಶವೊದಗಿತು. ಆವರೆಗೇ ಅವರು ಆರ್ಯಸಮಾಜದ ಪ್ರಧಾನನಾಯಕರಾಗಿದ್ದರಲ್ಲವೆ! ಪ್ರಾರಂಭದಿಂದಲೂ ಅದರ ಅಭಿವೃದ್ಧಿಯೇ ಅವರ ಮುಖ್ಯಧ್ಯೇಯವಾಗಿದ್ದಿತು. ಈಗ ಇತರ ಕಾರ್ಯಕಲಾಪಗಳ ಗೊಂದಲವು ಪರಿಹಾರವಾದುದರಿಂದ ತಮ್ಮ ಸಂಪೂರ್ಣ ಶಕ್ತಿಯನ್ನೂ ಧ್ಯಾನವನ್ನೂ ಯೋಗವನ್ನೂ ಅದಕ್ಕಾಗಿ ವ್ಯಯಮಾಡಲು ಅವಕಾಶ ದೊರೆಯಿತು. ಆರ್ಯಸಮಾಜ ತತ್ವವನ್ನು ದೇಶದಲ್ಲಿ ಪ್ರಕಟ ಮಾಡಲು ಅವರು ಪೂರ್ವದಿಂದ ಆಚರಣೆಯಲ್ಲಿ ಬಂದ ಮೂಢಾಚಾರ ವಿಚಾರಗಳೊಂದುಕಡೆ, ಪಾಶ್ಚಾತ್ಯ ವಿದ್ಯಾಭ್ಯಾಸ - ಸಂಸ್ಕೃತಿಗಳ ಪ್ರಸಾರದಿಂದ ಈಚೆಗೆ ನಮ್ಮವರಲ್ಲಿ ಬಂದು ನೆಲೆಸಿದ ಆಧುನಿಕ 'ಫ್ಯಾಷನ್' ಒಂದುಕಡೆ ಹೀಗೆ ಎರಡು ಬಗೆಯ ಶತ್ರುಗಳೊಂದಿಗೆ ಧರ್ಮ ಯುದ್ಧ ನಡೆಯಿಸ ಬೇಕಾಯಿತು. ಆದ್ಯಂತ ದೇಶದ ಕಾರ್ಯವನ್ನು ಕುರಿತು ಯೋಚಿಸುವಲ್ಲಿ ಏಕಾಂಗಿಯಾಗಿ ಪ್ರಯತ್ನಿಸುವುದಕ್ಕಿಂತ ಅದನ್ನು ಒಂದು ಸಾರ್ವದೇಶಿಕ ಸಂಸ್ಥೆಯೊಂದಿಗೆ ಸೇರಿ ಮಾಡುವುದು ಅನುಕೂಲವೂ ಸುಲಭ ಸಾಧ್ಯವೂ ಎಂದು ತೋರಿತು. ಆರ್ಯಸಮಾಜದ ವಾರ್ಷಿಕ ಸಮ್ಮೇಳನಗಳ ಮೂಲಕ, ತಮ್ಮ ಈ ಉದ್ದೇಶವನ್ನೂ, ಧರ್ಮ ಪ್ರಚಾರದ ಆವಶ್ಯಕತೆಯನ್ನೂ ವೈದಿಕ ಧರ್ಮಾನುಯಾಯಿಗಳಲ್ಲಿ ಪ್ರಚಾರಪಡಿಸಿ, ವಿಶೇಷ ಧನವನ್ನು ಯಾಚಿಸಿ ಸಂಗ್ರಹಿಸಿದರು. ಅದರ ಸಹಾಯದಿಂದ ಗುರುಕುಲದಲ್ಲಿ ಸಿದ್ಧರಾದ ನೂರಾರುಮಂದಿ ತರುಣರನ್ನು ದೇಶದ ವಿವಿಧ ಭಾಗಗಳಿಗೆ ವೈದಿಕ ಧರ್ಮಪ್ರಚಾರಕ್ಕಾಗಿ ಜ್ಞಾನ ಜ್ಯೋತಿಯನ್ನು ಹಿಡಿದು ಹೊರಡುವಂತೆ ಸಂದೇಶವಿತ್ತು ಕಳುಹಿಸಿದರು.

ಆಸೇತುಹಿಮಾಚಲವಾಗಿ ವಿಸ್ತರಿಸಿರುವ ವಿಶಾಲ ಭಾರತ ಭೂಮಿಯಲ್ಲಿ ಪೂರ್ವದ ವೈದಿಕಾಚಾರ ಪದ್ಧತಿಯಿಂದ ವಿದ್ಯಾಭ್ಯಾಸ ನಡೆವ ಒಂದೇ ಒಂದು ಗುರುಕುಲವಿದ್ದು ಕಾರ್ಯ ನಡೆವುದು ಎಷ್ಟು ಮಾತ್ರ ಫಲದಾಯಕ

ಸಾಧ್ಯವಾದೀತು! ಅಥವ ಅದೊಂದು ಗುರುಕುಲದಂತೆಯೇ ದೇಶದಲ್ಲಿ ಇನ್ನೆಷ್ಟು ಗುರುಕುಲಗಳನ್ನು ಸ್ಥಾಪಿಸಿ ನಡೆಯಿಸಲು ಅನುಕೂಲವೂ ಅವಕಾಶವೂ ದೊರೆತಾವು! ಈ ವಿಚಾರವನ್ನು ದೀರ್ಘವಾಗಿ ಯೋಚಿಸಿದ ಶ್ರೀ ಸ್ವಾಮಿ ಶ್ರದ್ಧಾನಂದಜೀಯವರು, ಈಗ ದೇಶದಲ್ಲಿ ಸ್ಥಾಪಿತವಾಗಿರುವ ಲಕ್ಷಾಂತರ ಪಾಠಶಾಲೆಗಳ ಮೂಲಕವೇ ಈ ಕೆಲಸವು ಎಂದರೆ ತಮಗೆ ಅತ್ಯಂತ ಪ್ರಿಯಕರಗಳಾದ ಸತ್ಯ ಮತ್ತು ಬ್ರಹ್ಮಚರ್ಯಗಳ ಪ್ರಚಾರವು ನಡೆವಂತೆ ಪ್ರಯತ್ನ ಮಾಡಬೇಕೆಂದು ಯೋಚಿಸಿದರು. ಆದರೆ ಆ ಪಾಠಶಾಲೆಗಳೆಲ್ಲವೂ ವಿದೇಶೀ ಸರ್ಕಾರದ ಸ್ವಾಧೀನವಾಗಿದ್ದುದರಿಂದಲೂ, ಆ ವೇಳೆಗೇ ರಾಜಕೀಯ ಚಳುವಳಿಯು ಮಹಾತ್ಮಾ ಗಾಂಧಿಜೀಯವರ ನೇತೃತ್ವದಲ್ಲಿ ಬಹುದೂರದವರೆಗೆ ನಡೆದುಬಂದು ಸತ್ಯಾಗ್ರಹದ ಮೂಲಕ ಬ್ರಿಟಿಷ್ ಸರ್ಕಾರದ ವಿರುದ್ಧ ಯುದ್ಧವು ಪ್ರಾರಂಭಿಸಲ್ಪಟ್ಟಿದ್ದುದರಿಂದಲೂ, ತಾವೂ ಅದರಲ್ಲಿ ಭಾಗವನ್ನು ಹೊಂದಿ, ಕೇವಲ ಧರ್ಮದಂಡದ ಮೂಲಕವೇ ನಡೆಯಲಾರದ ಕೆಲಸವನ್ನು ರಾಜದಂಡದ ಸಹಾಯದಿಂದಲಾದರೂ ನಡೆಯಿಸಬಹುದೇನೋ ಎಂದು ಯೋಚಿಸಿದರು. ಇದಕ್ಕಾಗಿ ೧೯೧೯ ನೆಯ ಸಂ||ದಲ್ಲಿ ಕಾಂಗ್ರೆಸ್ ಎಂದರೆ ರಾಷ್ಟ್ರೀಯಮಹಾಸಭೆಯ ಆಶ್ರಯದಿಂದ ತಮ್ಮ ಕಾರ್ಯಕ್ಕೆ ರಾಷ್ಟ್ರದ ಬೆಂಬಲವನ್ನು ಪಡೆಯಬಹುದೆಂದು ತೋರಿ ಸತ್ಯಾಗ್ರಹ ಚಳುವಳಿಯಲ್ಲಿ ಪ್ರವೇಶಿಸಿದರು. ಈ ಧರ್ಮಯುದ್ಧಸಂಬಂಧ ಚಳುವಳಿಯು ಡಿಲ್ಲಿ ಪಟ್ಟಣದಲ್ಲಿ ಘನ ಘೋರ ರೂಪವನ್ನು ಹೊಂದಿತು. ಬ್ರಿಟಿಷ್ ಸರ್ಕಾರದವರು ತಮ್ಮ ಸೈನ್ಯಸಹಾಯದಿಂದ ಅದನ್ನು ಅಡಗಿಸಿ-ಶಾಂತಗೊಳಿಸಬೇಕಾದ ಸ್ಥಿತಿಯು ಪ್ರಾಪ್ತಿಸಿತು. ಬ್ರಿಟಿಷ್ ಸೈನ್ಯವು ಶಾಂತಿಸ್ಥಾಪನೆಗೆಂದು ನಿರಾಯುಧರಾದ ಜನಸಮೂಹದ ಮೇಲೇರಿ ಬಂದಾಗ ಅದನ್ನು ಎದುರಿಸಿ-ಜನತೆಯನ್ನು ಬೆನ್ನಹಿಂದಿಟ್ಟುಕೊಂಡು ರಕ್ಷಿಸಬೇಕಾದ ಮಹತ್ಕಾರ್ಯವೂ ಶ್ರೀ ಸ್ವಾಮಿ ಶ್ರದ್ಧಾನಂದಜೀಯವರ ಪಾಲಿಗೇ ಬಂದಿತು. ಆ ಸಂದರ್ಭದಲ್ಲಿ ಶ್ರೀಯವರು, ತಮ್ಮೆದುರಿಗೆ ಗುರಿಯಿಟ್ಟು ನಿಂತ ಘೂರ್ಕಾಸಿಪಾಯಿಗಳ ಕೋವಿಗಳಿಗೆ ವಸ್ತ್ರ ವಿರಹಿತವಾದ ತಮ್ಮ ಎದೆಯನ್ನು ಮುಂದುಮಾಡಿ — ' ಎಲೋ, ಆ ನರಕುರಿಗಳನ್ನೇಕೆ ಕೊಲ್ಲಲೆಳಸುತ್ತೀರಿ! ನಿಮ್ಮಲ್ಲಿ ಶಕ್ತಿಯಿದ್ದರೆ,-ನಿಮ್ಮ ಶಸ್ತ್ರದಲ್ಲಿ ಸತ್ವವಿದ್ದರೆ ಅದನ್ನು ನನ್ನೀ ಎದೆಗೆ ಪ್ರಯೋಗಿಸಿ

ನಿಮ್ಮ ವೀರ್ಯವನ್ನು ಸಾರ್ಥಕಗೊಳಿಸಿಕೊಳ್ಳಿ!' ಎಂದು ನುಡಿದು ಅಡ್ಡನಿಂತರು. ಆ ಭೀಕರ ಮೂರ್ತಿಯು ನಿಷ್ಕರುಣೆಗಳೂ, ಧೂರ್ತರೂ ಆದ ಆ ಸೈನಿಕರನ್ನು ಬೆರಗುಮಾಡಿತು. ವಜ್ರಪಂಜರ ಸಮಾನವಾದ ಸ್ವಾಮಿಯವರ ಆ ಎದೆಗಾರಿಕೆಯನ್ನು ನೋಡಿ ಆಂಗ್ಲೇಯ ಸೈನಿಕರ ಶೌರ್ಯವೂ ಹಿಂಜರಿಯಿತು!

'ಇದಂ ಕ್ಷಾತ್ರಮಿದಂ ಬ್ರಾಹ್ಮ್ಯಂ ಶಾಪಾದಪಿ ಶರಾದಪಿ' ಎಂಬಂತೆ ಶಾಂತವೇಳೆಯಲ್ಲಿ ಬ್ರಹ್ಮಜ್ಞಾನವನ್ನು ಬೋಧಿಸುತ್ತಲೂ, ಶತ್ರುಬಾಧೆ ಯೊದಗಿದ ವೇಳೆಯಲ್ಲಿ ಜನತೆಯನ್ನು ಹಿಂದಿಟ್ಟುಕೊಂಡು, ಗುಂಡಿನ ಬಾಯಿಗೆ ತಮ್ಮೆದೆಯನ್ನು ಮುಂದುಮಾಡಿ ರಕ್ಷಿಸಲು ಹಿಂದೆಗೆಯದೆ ಕ್ಷಾತ್ರಪ್ರದರ್ಶನಮಾಡುತ್ತಲೂ ಇದ್ದ ಧರ್ಮರಕ್ಷಕರಾದ ಶ್ರೀಯವರ ಆ ಚರಣೆಯು ಭಾರತ ದೇಶೀಯ ಜನಮನವನ್ನು ಆಕರ್ಷಿಸಿತು. ಹಿಂದೂ ಮಹಮ್ಮದೀಯರೆಂಬ ಭೇದವಿಲ್ಲದೆ, ಅವರನ್ನು ಏಕರೀತಿಯಿಂದ ಗೌರವಿಸಿದರು. ಮಹಮ್ಮದೀಯರು ಕೇವಲ ತಮ್ಮ ಮತಗುರುವು ಮಾತ್ರ ಕುಳ್ಳಿರುವ ಡೆಲ್ಲಿಯಲ್ಲಿನ ಜುಮ್ಮಾಮಸೀದಿಯ ವ್ಯಾಖ್ಯಾನ ವೇದಿಕೆಯಲ್ಲಿ ಶ್ರೀಯವರನ್ನು ಕುಳ್ಳಿರಿಸಿ, ತಾವು ಸಹಸ್ರಸಂಖ್ಯೆಯಿಂದ ಕೈಕಟ್ಟಿ ಕೆಳಗೆ ನಿಂತು, ಅವರ ದಿವ್ಯ ಧರ್ಮಬೋಧೆಯನ್ನು ಕೇಳಿದರು. ಆಹಾ ಇದೇನಾಶ್ಚರ್ಯವು! ಇದೇನು ದೈವಲೀಲೆಯು! ಪೂರ್ವ ಪಶ್ಚಿಮಗಳೋ-ಉತ್ತರ ದಕ್ಷಿಣಧ್ರುವಗಳೋ ಎಂಬಂತೆ ಭಿನ್ನತೆಯಿರುವಂತೆ ತೋರುವ ಹಿಂದೂ ಮಹಮ್ಮದೀಯ ಧರ್ಮಪೀಠಗಳು ಏಕತ್ರ ಸಮ್ಮಿಳಿತವಾಗುವುದೆಂದರೆ, ಅದು ದೈವಿಕಲೀಲೆಯಲ್ಲವೆ! ರಾಷ್ಟ್ರ ಜೀವನದಲ್ಲಿ ಅದು ಅತ್ಯಂತ ಮಹತ್ವದ ಉನ್ನತಿಯಲ್ಲವೆ! ಅಂತಹ ಚಿರಸ್ಮರಣೀಯ ಶುಭದಿನವೊಂದು, ಅಂದು ಭಾರತಭೂಮಿಗೆ ಪ್ರಾಪ್ತವಾಯಿತು.

ಕೇವಲ ಅಲ್ಪ ಸಂಖ್ಯಾಕವಾದ ಒಂದು ಜನಾಂಗವು ಜನಬಾಹುಳ್ಯದಿಂದ ನಿಬಿಡವಾದ ಮತ್ತೊಂದು ಜನಾಂಗವನ್ನು ಸ್ವಾಧೀನಗೊಂಡು ರಕ್ಷಿಸಬೇಕೆಂದರೆ, ಸಾಮದಾನಭೇದ ದಂಡಗಳೆಂಬ ಚತುರೋಪಾಯಗಳನ್ನು ಉಪಯೋಗಿಸದಿದ್ದರೆ ತೀರದು. ಈ ರಾಜತಂತ್ರಪ್ರಯೋಗದಲ್ಲಿ ಅಸ್ವಿತೀಯರಾದ ಬ್ರಿಟಿಷ್ ರಾಜ್ಯಾಂಗದವರು, ತಮ್ಮ ಪಾಲನೆಗೆ ಸಂಬಂಧ

ಪಟ್ಟ ದೇಶಗಳಲ್ಲೆಲ್ಲ-ಅಲ್ಲಲ್ಲಿಯ ಮೂಲ ನಿವಾಸಿಗಳಲ್ಲಿ ಐಕಮತ್ಯವುಂಟಾಗದಂತೆ ಜಾಗರೂಕತೆಯಿಂದ ನೋಡಿಕೊಳ್ಳುತ್ತಾ, ಹಾಗೊಂದು ವೇಳೆ ಉಂಟಾಗುವ ಸಂಭವವಿದ್ದರೆ, ಸರ್ವಪ್ರಯತ್ನದಿಂದಲೂ ಅದನ್ನು ಮುರಿದು ಅವರಲ್ಲೇ ಪರಸ್ಪರ ಕಲಹವನ್ನೆಬ್ಬಿಸಿ ಆ ಯಾದವೀಕಲಹದಿಂದ ಇವರಿಬ್ಬರೂ ಬಡಿದಾಡುವಾಗ್ಗೆ ಮಧ್ಯೆ ತಮ್ಮ ಸ್ಥಿತಿಯನ್ನು ಸುರಕ್ಷಿತಪಡಿಸಿಕೊಂಡು ರಾಜ್ಯಭಾರಮಾಡುತ್ತಿರುವುದು, ಅವರ ರಾಜತಂತ್ರ ದೃಷ್ಟಿಯಿಂದ ನ್ಯಾಯುವಾಗಿದೆ. ಹೀಗಿರುವಲ್ಲಿ ಭಾರತಮಾತೆಯ ಪುತ್ರರಾದ ಹಿಂದೂ ಮುಹಮ್ಮದೀಯರೆಂಬ ಎರಡು ಜನಾಂಗಗಳಲ್ಲಿ ನಿರಂತರ ಕಲಹವಲ್ಲದೆ, ಐಕಮತ್ಯವು ಏರ್ಪಡುವುದೆಂದರೆ ಅದು ಅವರ ರಾಜನೀತಿಗೆ ವಿರುದ್ಧಾಚರಣೆಯಾದಂತಾಯಿತಲ್ಲವೆ! ಈ ಸಂಬಂಧದಲ್ಲೇ ಭಾರತದೇಶದ ಬ್ರಿಟಿಷ್ ರಾಜ್ಯಾಂಗಕ್ಕೂ ಪ್ರಜೆಗಳಿಗೂ ಭಿನ್ನತೆಯು ಬೆಳೆದುಬಂದು ದಿನದಿನಕ್ಕೆ ಅದು ಅತಿಶಯ ಪ್ರಕೋಪಸ್ಥಿತಿಗೇರಿತು. ಜನಮನವು ಅತ್ಯಂತ ಕ್ಷುಬ್ಧವಾಯಿತು. ಈ ಮಧ್ಯೆ ಹುಣ್ಣಿನಮೇಲೆ ಬೊಕ್ಕೆಎದ್ದಂತೆ, ಅಮೃತಸರಪಟ್ಟಣದ ಸಮೀಪದ 'ಜಲಿಯನ್‌ವಾಲಾ ಬಾಗ್' ಎಂಬೊಂದು ಮೈದಾನದಲ್ಲಿ ಧರ್ಮಸಂಬಂಧವಾಗಿ ನೆರೆದ ಹತ್ತೆಂಟುಸಹಸ್ರ ಪ್ರಜೆಗಳಮೇಲೆ ಬ್ರಿಟಿಷ್ ಸೈನಿಕರು, ಅದು ರಾಜದ್ರೋಹಿಗಳ ಸಭೆಯೆಂದು ಬಗೆದು ಗುಂಡು ಹಾರಿಸಿ ನೂರಾರು ಜನಗಳನ್ನು ಕೊಂದರು. ಸಹಸ್ರಾರುಮಂದಿ ಗಾಯಪಡೆದರು. ನರರಾಕ್ಷಸರೋ ಎಂಬಂತೆ ನಿಷ್ಠುರಿಗಳಾದ ಅವರ ಶಸ್ತ್ರಸಹಿತವಾದ ಕೈಗೆ ಸಿಕ್ಕಿ ನರಳಿದ ನಿರಾಪರಾಧಿಗಳಾದ ಹೆಂಗಸರು ಹುಡುಗರು ಮುದುಕರು, ವಯಸ್ಕರೂ ಗೌರವಸ್ಥರೂ ಆದ ಸ್ತ್ರೀ ಪುರುಷರು ಇವರಿಗೆ ಒದಗಿದ ಚಿತ್ರಹಿಂಸೆಯು ಅವರ್ಣನೀಯವಾದುದು-ಮಹಾ, ಸಂತಾಪಜನಕವಾದುದು. ಇದನ್ನು ಯೋಗ್ಯರೀತಿಯಿಂದ ಖಂಡಿಸುವುದಕ್ಕಾಗಿಯೂ, ಬಹುಮಟ್ಟಿಗೆ ಬೆದರಿ ಜೀಗುಪ್ಸೆಗೊಂಡಿದ್ದ ಪಂಜಾಬುದೇಶೀಯರ ಹೃದಯ ವೇದನೆಯನ್ನು ಶಾಂತಗೊಳಿಸುವುದಕ್ಕಾಗಿಯೂ, ಶ್ರೀ ಸ್ವಾಮೀ ಶ್ರದ್ಧಾನಂದಜೀಯವರು ಆ ದೇಶದ ವಿವಿಧ ಭಾಗಗಳಲ್ಲಿ ಸಂಚರಿಸಿ ಭಾಷಣಾದಿಗಳನ್ನಿತ್ತು ಲೇಖನಗಳನ್ನು ಪ್ರಕಟಿಸಿ, ಜನಗಳಿಗೆ ಸಮಾಧಾನವನ್ನು ಹೇಳುತ್ತಿದ್ದರು. ಆ ವರ್ಷದ ಅಖಿಲ ಭಾರತ ರಾಷ್ಟ್ರೀಯ

ಮಹಾಸಭೆಯು ಆ ಅಮೃತಸರನಗರದಲ್ಲಿಯೇ ನೆರೆಯಬೇಕೆಂದು ಗೊತ್ತಾ ಯಿತು. ಆಗ ಆ ಪ್ರಾಂತವಿದ್ದ ಸ್ಥಿತಿಯಲ್ಲಿ ರಾಷ್ಟ್ರೀಯ ಮಹಾಸಭೆಯ ಅಗಾಧ ಕಾರ್ಯಪ್ರಯತ್ನಗಳು ಅಲ್ಲಿ ನಡೆದಾವೇ! ಸಭೆಯು ಸುರಕ್ಷಿತರೀತಿ ಯಿಂದ ಸಾಗೀತೇ! ಎಂದು ಎಲ್ಲರೂ ಬೆದರಿದ್ದರು. ಆದರೆ, ಅಂತಹ ಇಕ್ಕಟ್ಟಿನ ಸಂದರ್ಭದಲ್ಲಿ ರಾಷ್ಟ್ರಸಭಾ ಕಾರ್ಯವನ್ನು ನಿರಪಾಯವಾಗಿ ನೆರ ವೇರಿಸಬೇಕಾದ ಸ್ವಾಗತ ಸಮಿತಿಯ ಅಧ್ಯಕ್ಷಪದವಿಯು ನಮ್ಮ ಕಥಾನಾ ಯಕರ ಪಾಲಿಗೇ ಬಂದುದರಿಂದ, ಆ ಕಾರ್ಯವು ಅತ್ಯಂತ ಸಮರ್ಪಕರೀತಿ ಯಲ್ಲಿ ನಡೆದು, ಪ್ರಕ್ಷುಬ್ಧವಾಗಿದ್ದ ಪಂಜಾಬು ದೇಶದಲ್ಲಿ ಮತ್ತಾವ ಬಗೆಯ ದುರಂತಕೃತ್ಯಕ್ಕೂ ಆಸ್ಪದವುಂಟಾಗದಂತೆ ಆಯಿತು.

ಅಮೃತಸರ ನಗರದಲ್ಲಿನ ರಾಷ್ಟ್ರಮಹಾಸಭಾ ಕಾರ್ಯಭಾರವನ್ನು ಸರ್ವಸಮರ್ಪಕರೀತಿಯಿಂದ ನಿರ್ವಹಿಸಿದ ತರುವಾಯ, ಶ್ರೀಯುವರು ಒಂದೆ ರಡು ವರ್ಷಕಾಲ ಗುರುಕುಲಾಶ್ರಮದಲ್ಲಿದ್ದು ಅಲ್ಲಿಯ ಕಾರ್ಯಕಲಾಪದಲ್ಲಿ ಭಾಗಿಗಳಾಗಿದ್ದರು. ಅಷ್ಟರಲ್ಲಿ ಎಂದರೆ ೧೯೨೦ನೆಯ ಸಂ||ದಲ್ಲಿ ಮಹಾತ್ಮಾ ಗಾಂಧಿಜೀಯವರು ಅಮೃತಸರದಲ್ಲಿ ನಡೆದ ನರಹತ್ಯೆ-ರೌಲೆಟ್ ಆಕ್ಟೆಂಬ ಘೀಕರರಾಜಶಾಸನ ಈ ಮುಂತಾದ ರಾಜನೀತಿಯ ದುಷ್ಪರಿಣಾಮಗಳನ್ನು ಪ್ರತಿಭಟಿಸುವುದಕ್ಕಾಗಿ ಅಸಹಯೋಗ (Non-Co-Operation) ವೆಂಬ ಹೆಸರಿನಿಂದ ಒಂದು ಮಹತ್ವದ ಚಳುವಳಿಯನ್ನು ಪ್ರಾರಂಭಿಸಿ ದರು. ಅದ್ಯಂತ ದೇಶವೂ ಈ ಚಳುವಳಿಯಲ್ಲಿ ಭಾಗ ತೆಗೆದುಕೊಂಡಿತ. ದೇಶಸೇವಾಕಾರ್ಯದಲ್ಲಿ ಭಾಗವನ್ನು ಹೊಂದಿ, ಆ ಯಜ್ಞದಲ್ಲಿ ಆಹುತಿಯಾ ಗಲು ನಾನು ಮುಂದೆ ತಾನು ಮುಂದೆಂದು ದೇಶೀಯ ತರುಣ ಜನಾಂಗವು ನುಗ್ಗಿ ಬರತೊಡಗಿತು. ಮಹಾತ್ಮಾಜೀಯವರ ರಣಾಹ್ವಾನವನ್ನು ಕೇಳಿ, ಬಹುಕಾಲ ದಾಸ್ಯದಲ್ಲಿ ಬಿದ್ದು ಮೃತಸ್ವರೂಪವಾಗಿದ್ದ ದೇಶೀಯರ ಚೇತ ನಗಳೂ ಮರಿದುಂಬಿದುವು. ರಣಭೇರಿಯು ಗಂಭೀರಸ್ವರದಿಂದ ಬಾರಿಸು ತ್ತಿದ್ದ ಆ ಸಂದರ್ಭದಲ್ಲಿ, ಲೇಶಮಾತ್ರವಾದರೂ ದೇಶಾಭಿಮಾನದ ಸೋಂ ಕಿದ್ದ ಭಾರತೀಯನೊಬ್ಬನಾದರೂ ನಿಲ್ಲದೆ, ಮುಂದೇನಾಗುವುದೆಂದು ವಿಚಾ ರಿಸಲು ತಡೆಯದೆ, ಹತ್ತಿಪ್ಪತ್ತು ಸಹಸ್ರಮಂದಿ ಆ ಮಹತ್ವದ ಯಜ್ಞಕುಂಡ ದಲ್ಲಿ ಧುಮುಕಿದರು. ಅದರ ಫಲವಾಗಿ ಸಹಸ್ರ ಸಹಸ್ರ ಸಂಖ್ಯೆಯಿಂದ

ಕಾರಾಗಾರಗಳಿಗೆ ನುಗ್ಗಿದರು. ಹೆಂಡಿರು ಮಕ್ಕಳು, ಐಶ್ವರ್ಯಭೋಗ ಮುಂತಾದುವುಗಳ ಆಶಾ ಮೋಹಗಳು ಹಾರಿಹೋಗಿ ಸರ್ವತ್ರ-ತ್ಯಾಗ-ತ್ಯಾಗ ವೆಂಬ ಮಾತೇ ಕೇಳಿಸುತ್ತಿದ್ದಿತು. ಎಲ್ಲಿ ನೋಡಿದರೂ, ದೇಶಾಭಿಮಾನ, ಸ್ವಜನಾಭಿಮಾನಗಳು ಕಣ್ಣಿಗೆ ಕಟ್ಟಿದ್ದುವು. ಆ ವರ್ಷದಲ್ಲೇ ಮಹಾತ್ಮಾ ಜೀಯುವರ ನೇತೃತ್ವದಲ್ಲಿ ಅಹಮ್ಮದಾಬಾದಿನಲ್ಲಿ ಖಾದೀಮಯವಾಗಿ ನಡೆದ ರಾಷ್ಟ್ರೀಯ ಮಹಾಸಭೆಯು ಸ್ವರಾಜ್ಯ ಜೀವಿತದ ಸ್ವಪ್ನವನ್ನು, ಅಲ್ಲಲ್ಲ-ಲೇಶಮಾತ್ರ ಅನುಭವವನ್ನು, ಅಲ್ಲಿದ್ದ ನಾಲ್ಕಾರುದಿನಗಳಮಟ್ಟಿಗಾದರೂ ಎಲ್ಲರ ಮನಸ್ಸಿಗೂ ತಂದುಕೊಟ್ಟಿತು. ಏಕವೇಷ, ಏಕಭಾವ, ಏಕ ಧ್ಯೇಯದಿಂದ, ನೆರೆದ ಎರಡುಲಕ್ಷ ಪ್ರಜೆಗಳೂ, ಸ್ವಾರಾಜ್ಯ ಸುಖಾಮೃತದ ಸವಿಯನ್ನು ಅನುಭವಮಾಡಿ, ಲೌಕಿಕ ದುಃಖಗಳನ್ನು ಮರೆತರು-ಆ ವೇಳೆಯಲ್ಲಿ ಶ್ರೀ ಸ್ವಾಮಿಜೀಯುವರೂ ಮಹಾತ್ಮಾಜೀಯುವರ ಸನ್ನಿಧಿಯಲ್ಲಿದ್ದು ಅವರ ದೇಶಸೇವಾಕಾರ್ಯದಲ್ಲಿ ಯುಕ್ತಭಾಗವನ್ನು ವಹಿಸುತ್ತೇನೆಂದು ವಾಗ್ದಾನಕೊಟ್ಟರು.

ಮುಂದೆ ಕೆಲದಿನಗಳವರೆಗೆ ಅಸಹಕಾರ ಚಳುವಳಿಯು ಅತಿಶಯ ತೇಜಸ್ವಿಯಾಗಿ ನಡೆಯಿತು. ಹತ್ತೆಂಟು ಸಹಸ್ರಮಂದಿ ದೇಶಭಕ್ತರು ಕಾರಾಗೃಹಗಳನ್ನು ಸೇರಿದರು. ಮಹಾತ್ಮಾಜಿಯುವರು, ಆದರೂ ಅಹಿಂಸಾ ತತ್ವವನ್ನೇ ಬೋಧಿಸುತ್ತಾ, ಯಾವಬಗೆಯಲ್ಲೂ, ಶಸ್ತ್ರಮುಖದಿಂದ ಯಾರೂ ಪ್ರತಿಭಟಿಸಕೂಡದೆಂಬ ಸಿದ್ಧಾಂತವನ್ನು ಪ್ರತಿವಾದಿಸುತ್ತಾ ತಮ್ಮ ಧ್ಯೇಯದಲ್ಲಿ ಮುಂದರಿಸಿ ಸಾಗುತ್ತಿದ್ದರು. ಈ ವಿಷಯದಲ್ಲಿ ಮಾತ್ರ ಮಹಾತ್ಮಾಜಿಯುವರಿಗೂ ಸ್ವಾಮಿ ಶ್ರದ್ಧಾನಂದಜೀಯುವರಿಗೂ ಮತ ಭೇದ ವಿದ್ದಿತು. ಮಹಾತ್ಮಾ ಗಾಂಧಿಯುವರು, ದೇಶದಲ್ಲಿ ಸರ್ವತ್ರ ಅಹಿಂಸಾ ವ್ರತದ ಆಚರಣೆ ಇರಬೇಕೆಂದು ಹೇಳಿದರು. ಶ್ರೀಯುವರು 'ಹಾಗಲ್ಲ-ಲೋಕದಲ್ಲಿ ಅದು ಎಂದಿಗೂ ಸಾಧ್ಯವಾಗತಕ್ಕುದಲ್ಲ-ಯಾರು ಸತ್ಯಾಗ್ರಹ ವ್ರತವನ್ನು ಕೈಕೊಳ್ಳುವರೋ ಅವರು ಮಾತ್ರ ಅಹಿಂಸಾ ವ್ರತವನ್ನು ಮನೋವಾಕ್ಕರ್ಮಗಳಿಂದ ಆಚರಿಸಬೇಕು' ಎಂದು ಅಭಿಪ್ರಾಯಪಟ್ಟಿದ್ದರು. ಏನಾದರೂ ರಾಜ್ಯಾಂಗವು ಸಗ್ಗಲಿಲ್ಲ. ಕೊನೆಗೆ ಅಸಹಕಾರಿಕೆಯ ಕೊನೆಯಮೆಟ್ಟಿಲಾದ ಕರನಿರಾಕರಣ ಎಂದರೆ ಸರ್ಕಾರಕ್ಕೆ ಕಂದಾಯ ಕೊಡದೆ ನಿರಾಕರಿಸುವುದು-ಆದರಿಂದ ಆದ ಶಿಕ್ಷೆಯನ್ನು ಅನುಭವಿಸುವುದು, ಈ

ಸ್ಥಿತಿಯು ಬಂತು. ಗುಜರಾತಿನ ಬಾರಡೋಲಿ ಎಂಬಲ್ಲಿ ಮಹಾತ್ಮರು ತಮ್ಮ ಆ ಕಾರ್ಯಪ್ರಯತ್ನವನ್ನು ನಡೆಯಿಸಿದರು. ಆದರೆ, ಇನ್ನೇನು ಅದನ್ನು ಪ್ರಾರಂಭಿಸಬೇಕು ಎಂಬಷ್ಟರಲ್ಲಿ, ಚೌರೀಚೌರಾ ಎಂಬಲ್ಲಿ ಒಂದು ಅತಿಶಯ ಭೀಕರ ದಂಗೆ ನಡೆಯಿತು. ಈ ಹಿಂಸಾಕಾರ್ಯವು ಮಹಾತ್ಮಾಜಿಯವರ ಮನಸ್ಸಿಗೆ ಅತಿಶಯ ಬೇಸರವನ್ನುಂಟುಮಾಡಲು, ಅವರು ಬಾರಡೋಲಿಯ ಕಾರ್ಯಕ್ರಮವನ್ನು ಅಲ್ಲಿಗೇ ನಿಲ್ಲಿಸಿಬಿಟ್ಟರು. ಆ ಅಲ್ಪಕಾರ್ಯವಾದ ದೊಂಬಿಯಿಂದ ಕ್ಷುಬ್ಧರಾಗಿ ಮಹಾತ್ಮಾಜೀಯವರು ಬಾರಡೋಲಿಯ ಕಾರ್ಯಕ್ರಮವನ್ನು ನಿಲ್ಲಿಸಿಬಿಟ್ಟುದು ಸ್ವಾಮಿಜಿಯರ ಮನಸ್ಸಿಗೆ ಸರಿದೋರಲಿಲ್ಲ. ಒಡನೆ, ಅವರು ರಾಜಕಾರಣದ ಈ ಅಪೂರ್ಣತೆ-ಕ್ಷಣಭಂಗುರತೆಯ ಕಾರ್ಯಕ್ರಮಗಳನ್ನು ಮೆಚ್ಚದೆ, ಆ ಮಾರ್ಗವನ್ನು ಬಿಟ್ಟು ಲೋಕಸೇವೆಯ ಬೇರೇ ಮಾರ್ಗವೇನೆಂದು ನೋಡಸಾಗಿದರು.

ಅಸಹಯೋಗವನ್ನು ಪ್ರಾರಂಭಿಸಿದ ಮಹಾತ್ಮಾ ಗಾಂಧಿಯವರ ದೇಶಸೇವಾ ಕಾರ್ಯಕ್ರಮದಲ್ಲಿ ಪಂಚಮೋದ್ಧರಣ ವಿಚಾರವೂ ಸೇರಿದ್ದಿತು. ಆದರೆ ನಮ್ಮ ಕಥಾನಾಯಕರು, ಅಸಹಯೋಗವು ಪ್ರಾರಂಭಿಸುವುದಕ್ಕೆ ಬಹುದಿನಗಳ ಪೂರ್ವದಲ್ಲೇ ಈ ವಿಚಾರವನ್ನು ಕುರಿತು ಬಹು ದೀರ್ಘವಾಗಿ ಯೋಚಿಸಿ, ಜಲಂಧರ್ ಪಟ್ಟಣದ ಸಮೀಪದಲ್ಲಿ ಪಂಚಮವರ್ಗದವರನೇಕರನ್ನು ಶುದ್ಧಿಕ್ರಮದಿಂದ ಆರ್ಯರನ್ನಾಗಿಸಿ ಗುರುಕುಲಕ್ಕೆ ಸೇರಿಸಿ, ಈರೀತಿ ಪಂಚಮೋದ್ಧಾರಣ ಕಾರ್ಯದ ಅಸ್ತಿಭಾರವನ್ನು ಹಾಕಿದ್ದರು. ಅಸಹಯೋಗವು ಅಖಿಲ ಭಾರತಕ್ಕೂ ವ್ಯಾಪಿಸಿದುದರಿಂದ, ಮೇಲ್ಕಂಡಂತೆ ತಮ್ಮ ಸಮಾಜದ ಮಟ್ಟಿಗೆ ಮಾತ್ರ ಪ್ರಾರಂಭವಾದ ಆ ಕಾರ್ಯವನ್ನೇ ಅಖಿಲಭಾರತ ಪ್ರಶ್ನೆಯನ್ನಾಗಿ ಕೈಕೊಂಡು ನಡೆಯಿಸಿದರೆ ಹೆಚ್ಚು ಪ್ರಯೋಜನವಾದೀತೆಂದು ತೋರಿತು. ಒಡನೆ ರಾಷ್ಟ್ರೀಯ ಮಹಾಸಭಾಮೂಲಕವಾಗಿ ಕಾರ್ಯಪ್ರಯತ್ನ ನಡೆಯಿಸಿದರು. ಆದರೆ, ಅಸಹಕಾರ ಕಾರ್ಯಕ್ರಮವನ್ನೇ ಮುಖ್ಯಕರ್ತವ್ಯವನ್ನಾಗಿ ಅಂಗೀಕರಿಸಿದ್ದ ರಾಷ್ಟ್ರೀಯ ಸಭಾಮೂಲಕವೂ ಅವರ ಆ ಉದ್ದೇಶವು ಸಾರ್ಥಕರೀತಿಯಿಂದ ನೆರವೇರಲಿಲ್ಲ. ಅಲ್ಲಿದ್ದ ಅನೇಕಮಂದಿ ಹಿಂದೂ ಸಭಿಕರು, ತಾವು ಆ ಕೆಲಸದಲ್ಲಿ ಹೆಚ್ಚು ಶ್ರದ್ಧೆವಹಿಸಿ ಕೆಲಸಮಾಡತೊಡಗಿದರೆ, ಜೊತೆಗಿರುವ ಮಹಮ್ಮದೀಯ

ಸಭಿಕರ ಮನಸ್ಸಿಗೆ ವಿರೋಧವುಂಟಾಗುವುದೇನೋ ಎಂದು ಬೆದರಿದರು.- ಅಲ್ಲಲ್ಲ-ಸಂದೇಹಿಸಿದರು. ಇದನ್ನು ಕಂಡುಕೊಂಡ ಶ್ರೀ ಶ್ರದ್ಧಾನಂದರು, ಕೈ ಕೊಂಡ ಕಾರ್ಯಕ್ರಮವನ್ನು ಧೈರ್ಯವಾಗಿ ನಡೆಯಿಸಲಾರದವರೊಂದಿಗಿದ್ದರೆ ಯಾವ ಪ್ರಯೋಜನವೂ ಉಂಟಾಗಲಾರದೆಂದು ತಿಳಿದು, ಒಡನೆ ತಮ್ಮ ರಾಷ್ಟ್ರೀಯ ಮಹಾಸಭಾ ಸಭ್ಯಪೀಠಕ್ಕೆ ರಾಜೀನಾಮೆ ಕೊಟ್ಟುಬಿಟ್ಟರು.

೧೯೨೨ ರಲ್ಲಿ ಅಮೃತಸರ ಪಟ್ಟಣದ 'ಗುರೂಕೇಬಾಗ್' ಸಂಬಂಧದಲ್ಲಿ ಸರಕಾರದವರು ನಡೆಯಿಸಿದ ಪಾಶವೀ ವ್ಯವಹಾರದಿಂದ ಕ್ಷುಬ್ಧರಾದ ಸಿಕ್ ಜನಾಂಗದವರು ರಾಜ್ಯಾಂಗವನ್ನು ಎದುರಿಸಿ ಸತ್ಯಾಗ್ರಹವನ್ನು ಕೈಕೊಂಡರು. ಹಾಗೆ ಎದುರಿಸಿದ ವೀರಕ್ಷತ್ರಿಯರೂ ಯುದ್ಧಜೀವಿಗಳೂ ಆದ ಅವರಿಗೆ ಪ್ರಾಪ್ತವಾದ ದೇಹದಂಡನೆಗಳು ಚಿತ್ರವಿಚಿತ್ರವಾದುವು. ಅವುಗಳ ಪರಿತಾಪಕರ ಚರಿತ್ರೆಯು, ದೇಶದ ಒಂದು ಮೂಲೆಯಿಂದ ಮತ್ತೊಂದು ಮೂಲೆಯವರೆಗೆ ವ್ಯಾಪಿಸಿ ಎಲ್ಲೆಲ್ಲೂ ಹಾಹಾಕಾರವನ್ನೆಬ್ಬಿಸಿತು. ಆಗ ದೆಹಲೀನಗರದಲ್ಲಿದ್ದು ಆ ವಾರ್ತೆಯನ್ನು ಕೇಳಿದ ಸ್ವಾಮಿಜೀಯವರಿಗಾದರೂ ಆ ವಿಚಾರದಲ್ಲಿ ಸಂತಾಪವಾಗದಿರಲಿಲ್ಲ. ಪರರ ದುಃಖವನ್ನು ಪರಿಹರಿಸುವ ವಿಷಯದಲ್ಲಿ ಸರ್ವದಾ ಸಿದ್ಧರಾಗಿರುತ್ತಿದ್ದ ಅವರು,—'ನಿಮ್ಮವರಿಗೆ ಪ್ರಾಪ್ತವಾಗಿರುವ ಈ ಧರ್ಮಸಂಗ್ರಾಮದಲ್ಲಿ ಹಿಂದೂ ಜನಗಳ ಬೆಂಬಲವುಂಟು' ಎಂಬ ಸಂದೇಶವನ್ನು, ಸಿಕ್ ನಾಯಕರಿಗೆ ಕಳುಹಿಸಿ ತಾವೂ ಅಮೃತಸರ, ನಗರಕ್ಕೆ ಪ್ರಯಾಣಮಾಡಿದರು. ಹೋದವರು ಸುಮ್ಮನೆ ಕೂಡುವುದೆಂತು ? ಕಾರ್ಯರಂಗಕ್ಕೂ ಇಳಿದರು. ಅದನ್ನು ಕಂಡು ಕೃದ್ಧರಾದ ಸರ್ಕಾರದವರು ೧೯೨೨ ನೆಯ ಸೆಪ್ಟಂಬರು ೧೦ ನೆಯ ದಿನ ಅವರಮೇಲೆ ಕಟ್ಲೆನಡೆಸಿ ೧೮ ತಿಂಗಳ ಸಾದಾ ಶಿಕ್ಷೆಯನ್ನು ವಿಧಿಸಿದರು. ಆದರೆ ಮುಂದೆ, ಕೆಲವುದಿನಗಳಲ್ಲೇ ಶಿಕ್‌ಜನರೊಂದಿಗೆ ವಿರೋಧ ಕಟ್ಟಿಕೊಳ್ಳುವುದರಿಂದುಂಟಾಗಬಹುದಾದ ಅಪಾಯವನ್ನು ಕುರಿತು ಯೋಚಿಸಿದ ರಾಜತಂತ್ರಕುಶಲರಾದ ರಾಜ್ಯಾಧಿಕಾರಿಗಳು ಸಿಕ್ ಕೈದಿಗಳನ್ನು ಬಿಡುಗಡೆಮಾಡಿದರು. ಆ ಸಂದರ್ಭದಲ್ಲಿ ಎಂದರೆ ಡಿಸಂಬರು ೨೬ ನೆಯ ದಿನ ಸ್ವಾಮಿಯವರಿಗೂ ಬಂದೀವಾಸದಿಂದ ಬಿಡುಗಡೆ ದೊರೆಯಿತು.



## — ಶುದ್ಧಿ ಸಭಾ ಸ್ಥಾಪನೆ —

ಬಂದೀವಾಸದಿಂದ ಹೊರಕ್ಕೆ ಬಂದ ತರುವಾಯ ಕೆಲದಿನಗಳು ಕಾಂಗರಿ ಗುರುಕುಲದಲ್ಲಿ ವಾಸವಾಗಿದ್ದರೆಂಬ ವೇಳೆಗೆ ಮತ್ತೊಂದು ಮಹತ್ವದ ಕಾರ್ಯವು ಅವರ ಸಹಾಯವನ್ನು ಅಪೇಕ್ಷಿಸಿತು. ೧೯೨೩ ನೆಯ ಫೆಬ್ರುವರಿ ೧೨ ರಲ್ಲಿ ಡೆಲ್ಲಿ ಪಟ್ಟಣದಲ್ಲಿ ಸರ್ ಹರಿಸಿಂಗ್‌ಗೌರ್ ಎಂಬ ದೊಡ್ಡ ಮನುಷ್ಯರ ವಿವಾಹವು ಸುಧಾರಕ ವಿಧಿಯನ್ನವಲಂಬಿಸಿ ನಡೆಯಬೇಕಾಗಿದ್ದು ಆ ಸಂಬಂಧದಲ್ಲಿ ಸೇರಿದ ಸಭೆಗೆ ಶ್ರೀ ಸ್ವಾಮಿಯವರನ್ನು ಅಧ್ಯಕ್ಷರನ್ನಾಗಿ ಕೋರಿದರು. ಅಲ್ಲಿಯ ಕಾರ್ಯವು ಸುಮುಖವಾಗಿ ನೆರವೇರಿದ ತರುವಾಯ ಶ್ರೀಯವರು ಆಗ್ರಾಕ್ಕೆ ದಯಮಾಡಿಸಿದರು. ಅಲ್ಲಿ ಮುಸಲ್ಮಾನಪ್ರಭುಗಳ ನಿರಂಕುಶಾಧಿಕಾರ ಕಾಲದಲ್ಲಿ ಮಹಮ್ಮದೀಯರಾಗಿ ಮಾಡಲ್ಪಟ್ಟಿದ್ದ ಜಾಟರು ಮತ್ತು ಘೂರ್ಜರರೆಂಬ ಜಾತಿಯ ರಾಜಪುತ್ರರನ್ನು ಪುನಃ ಹಿಂದೂಧರ್ಮಕ್ಕೆ ತೆಗೆದುಕೊಳ್ಳುವ ವಿಷಯದಲ್ಲಿ ವಿಶೇಷ ಮಾತುಕಥೆಗಳು ನಡೆದುವು. ಅವರನ್ನು ಮಲಖಾನಾ ರಾಜಪುತ್ರರೆಂದು ಕರೆಯುವುದೂ ಉಂಟು. ಆ ಜನಗಳು ನಾಮಮಾತ್ರ ಮುಸಲ್ಮಾನರಲ್ಲದೆ, ಮಿಕ್ಕ ವೇಷ ಭಾಷೆ ಆಚಾರ ವ್ಯವಹಾರಗಳಲ್ಲೆಲ್ಲ ಹಿಂದುಗಳೇ ಆಗಿದ್ದರು. ಅವರ ಹೆಸರುಗಳಾದರೂ ಈವರೆಗೆ ಹಿಂದೂಗಳಂತೆಯೇ ಇವೆ. ಮಲಖಾನಾ ರಾಜಪುತ್ರ ಮಹಾಜನಗಳ ಸಮ್ಮೇಳನವು ಒಡನೆ ಸೇರಿಸಲ್ಪಟ್ಟಿತು. ಆ ಸಮ್ಮೇಳನಕ್ಕೂ ಅಧ್ಯಕ್ಷರಾದ ಶ್ರೀ ಸ್ವಾಮಿಯವರು ನೆರೆದ ಬಹುಜನ ಸಮ್ಮತಿಯಿಂದ, ಆ ಪ್ರಶ್ನೆಯನ್ನು ಸರ್ವತೋಮುಖವಾಗಿ ವಿಚಾರಿಸಿ ಕೊನೆಗೆ 'ಹಿಂದೂ ಶುದ್ಧಿಸಭಾ' ಎಂಬೊಂದು ಸಂಸ್ಥೆಯನ್ನು ಸ್ಥಾಪಿಸಿದರು.

ಮುಸಲ್ಮಾನರನ್ನು ಹಿಂದೂಗಳನ್ನಾಗಿ ಶುದ್ಧಿಮಾಡುವ ಉದ್ದೇಶದಿಂದ ಸ್ವಾಮಿಯವರೊಂದು ಸಂಸ್ಥೆಯನ್ನು ಏರ್ಪಡಿಸಿರುವರೆಂದು ವೃತ್ತಾಂತವು ಒಡನೆ ದೇಶದಲ್ಲೆಲ್ಲ ಹಬ್ಬಿತು. ಹಿಂದುಗಳನ್ನು ನೂರಾರು ಸಂಖ್ಯೆಯಿಂದ ಮುಸಲ್ಮಾನರನ್ನಾಗಿಸುತ್ತಿರುವ ವರ್ತಮಾನವು ದಿನದಿನವೂ ಕೇಳಿಬರುತ್ತಿರುವುದಲ್ಲವೆ! ಆ ವಿಷಯದಲ್ಲಿ ಏನೂ ಗೊಂದಲವಿಲ್ಲ – ಆದರೆ

ಮುಸಲ್ಮಾನರನ್ನು ಹಿಂದೂಗಳನ್ನಾಗಿ ಮಾಡುತ್ತಾರೆಂಬ ವಾರ್ತೆಯು ಹುಟ್ಟಿದೊಡನೆಯೇ ಮಹಮ್ಮದೀಯ ಜನಾಂಗದಲ್ಲಿ ದೊಡ್ಡ ಕಳವಳವೂ ಗಲಭೆಯೂ ಉಂಟಾದುವು. ಮತವಿಷಯದಲ್ಲಿ ದುರಭಿಮಾನವುಳ್ಳ ಪ್ರತಿಯೊಬ್ಬ ಮಹಮ್ಮದೀಯನ ದೃಷ್ಟಿಯೂ ಸ್ವಾಮಿಯವರ ಕಡೆಗೆ ತಿರುಗಿತು. ಒಬ್ಬೊಬ್ಬನೂ ಅವರನ್ನು ಕೆರಳಿದ ಕಣ್ಣುಗಳಿಂದ ನೋಡತೊಡಗಿದನು. ಹಿಂದೆ ಜುಮ್ಮಾ ಮಸೀದಿಯಲ್ಲಿ ಅವರಿಂದ ಧರ್ಮೋಪದೇಶವನ್ನು ಕೇಳಿ ಸಂತುಷ್ಟರಾಗಿದ್ದ ಮಹಮ್ಮದೀಯರೇ ಈಗ ಅವರನ್ನು ಆಗರ್ಭ ಶತ್ರುವೆಂಬಂತೆ ಕಾಣತೊಡಗಿದರು.

ಆದರೆ ಮಹಮ್ಮದೀಯರು ಶತ್ರುಗಳಾದರೆಂಬ ಭಯದಿಂದ ಧೀರರಾದ ಸ್ವಾಮಿಜೀಯವರು ಈ ಕಾರ್ಯಕ್ಕಾಗಿ ಮುಂದಿಟ್ಟಿದ್ದ ತಮ್ಮ ಪಾದವನ್ನು ಹಿಂದಕ್ಕೆಳೆಯಲಿಲ್ಲ. ಅಂದಿನಿಂದ ಮುಂದೆ ಮರಣಪರ್ಯಂತವೂ ಒಂದೊಂದುವೇಳೆ ಪ್ರಧಾನ, ಉಪಪ್ರಧಾನ, ಕಾರ್ಯದರ್ಶಿ-ಮುಂತಾದ ಸ್ಥಾನಗಳಲ್ಲಿದ್ದು ಸ್ವಾಮಿಯವರು ಶುದ್ಧಿ ಕೆಲಸವನ್ನು ಅತ್ಯಂತ ದಕ್ಷತೆಯಿಂದ ಸಾಗಿಸಿದರು. ಮುಸಲ್ಮಾನರಾಗಿದ್ದ ಹತ್ತಾರು ಸಹಸ್ರಮಂದಿ ಮಲಖಾನಾ ರಾಜಪುತ್ರರು ಪುನಃ ಶುದ್ಧರಾಗಿ ಆರ್ಯರಾದರು. ಹಿಂದೂಮತಕ್ಕೆ ಒಂದು ಬಗೆಯ ಶಕ್ತಿಯು ಬಂದಂತಾಯಿತು. ಹಿಂದೂ ಜಾತಿಯಲ್ಲಿ ನಿರ್ಜೀವ-ಶೀತಲ ಸ್ಥಿತಿಯನ್ನು ಹೊಂದಿದ್ದ ಪ್ರೇತವೊಂದು ಪುನಃ ಜೀವಿಸಿ ಎದ್ದಂತೆ ತೋರಿತು. ಹೇಗೆ ಹೇಗೆ ಹಿಂದೂಗಳಲ್ಲಿ ಜಾಗೃತಿಯು ಹೆಚ್ಚುತ್ತಾ ಹೋಯಿತೋ, ಹಾಗೆಹಾಗೆ ಮಹಮ್ಮದೀಯರಿಗೂ ಸ್ವಾಮಿಗಳ ವಿಷಯದಲ್ಲಿನ ದ್ವೇಷವು ಹೆಚ್ಚುತ್ತಾ ಹೋಯಿತು.



## — "ಹಿಂದೂ ಸಂಘಟನ ಚಳುವಳಿ" —

ಪಂಚಮೋದ್ಧರಣ ಮತ್ತು ಶುದ್ಧಿ ಕಾರ್ಯರಂಗದಲ್ಲಿ ಪ್ರವೇಶಿಸಿ ಕೆಲ ಕಾಲ ಕೆಲಸಮಾಡಿದಮೇಲೆ ಸ್ವಾಮಿಯವರಿಗೆ ಹಿಂದೂ ಜನಾಂಗವು ಎಷ್ಟು ದುರ್ಬಲವಾದುದು, ಧೈರ್ಯ ಹೀನವಾದುದು ಎಂಬುದರ ಅನುಭವವಾಯಿತು. ಹಿಂದೂಗಳೂ ಇತರರಂತೆಯೇ ದೀರ್ಘದೇಹಿಗಳೂ ಪುಷ್ಟಪುಟ್ಟರೂ ಆಗಿದ್ದರೂ ಅವರಲ್ಲಿ ಆತ್ಮಾಭಿಮಾನ ಆತ್ಮವಿಶ್ವಾಸ ಮತ್ತು

ಆತ್ಮಶಕ್ತಿಗಳು ಸುತರಾಂ ಇಲ್ಲದಿರುವುದರಿಂದ ಅವರು ಕಾರ್ಯಕ್ಷೇತ್ರದಲ್ಲಿ ಬೆಂಡಿನ ಬೊಂಬೆಗಳಂತಿರುವರೆಂಬುದನ್ನು ಶ್ರೀಯುವರು ಕಂಡುಕೊಂಡರು. ಇತರರಂತೆ ಹಿಂದೂಗಳಲ್ಲೂ ಧನವುಳ್ಳವರೂ ವಿದ್ಯಾಬುದ್ಧಿಗಳನ್ನು ಗಳಿಸಿದವರೂ ದೇಹದಲ್ಲಿ ಶಕ್ತಿಯುಳ್ಳವರೂ ಇದ್ದರೂ, ಅವರಲ್ಲಿ ಐಕಮತ್ಯವಿಲ್ಲದಿರುವುದರಿಂದ, ದೇಹದ ಒಂದೊಂದು ಅಂಗವೂ ಪ್ರತ್ಯೇಕ ಪ್ರತ್ಯೇಕವಾಗಿರುವಂತೆ ಅಷ್ಟಿದ್ದೂ ಉಪಯೋಗವಿಲ್ಲದೆ ಹೋಗಿದೆಯೆಂಬುದಾದರೂ ಅವರ ತಿಳಿವಳಿಕೆಗೆ ಬಂದಿತು. ಆ ವಿಷಯದಲ್ಲಿ ಯೋಗ್ಯಪರಿಶ್ರಮವಮಾಡಿ, ಹಿಂದೂ ಜನಾಂಗದಲ್ಲಿ ಸಂಘಟನವನ್ನುಂಟುಮಾಡಬೇಕೆಂದು ಯೋಚಿಸಿ ಕಾರ್ಯಕ್ರಮವನ್ನು ನಿರ್ಧರಿಸಿದರು. ಒಡನೆ ೧೯೨೩ ನೆಯ ಸಂ|| ಆಗಸ್ಟ್ ತಿಂಗಳಿನ ಅಂತ್ಯದಲ್ಲಿ ಬನಾರಸಿನಲ್ಲಿ ಸೇರಿದ ಹಿಂದೂ ಮಹಾ ಸಭಾ ಸಮ್ಮೇಳನಕ್ಕೆ ಆಗಮಿಸಿ, ಅದರಲ್ಲಿ ಭಾಗ ತೆಗೆದುಕೊಂಡರು. ಅದಕ್ಕೆ ಮೊದಲು ಸಂಯುಕ್ತ ಪ್ರಾಂತ ಮತ್ತು ಬಿಹಾರುಗಳಲ್ಲಿ ಸಂಚಾರ ಮಾಡಿ, ಒಂದು ತಿಂಗಳ ಕಾಲದಲ್ಲಿ ನೂರು ವ್ಯಾಖ್ಯಾನಗಳನ್ನು ಕೊಟ್ಟು, ಮೂವತ್ತು ಸ್ಥಳಗಳಲ್ಲಿ ಮಾನಪತ್ರಗಳನ್ನು ಸ್ವೀಕರಿಸಿ ಜನಜಾಗೃತಿಯನ್ನುಂಟುಮಾಡಿದ್ದರು. ಮಹಾಸಭೆಯು ಅವರನ್ನು ಉಪಸಭಾಪತಿಯನ್ನಾಗಿ ಚುನಾಯಿಸಿಕೊಂಡಿತು. ಸ್ವಾಮಿಯವರು ಸಂಘಟನಕಾರ್ಯವನ್ನು ಬಹು ಜೋರಿನಿಂದ ನಡೆಯಿಸತೊಡಗಿ ಆ ಉದ್ದೇಶದಿಂದಲೇ ಪುನಃ ಸಂಯುಕ್ತಪ್ರಾಂತ ಪಂಜಾಬ್ ಬಿಹಾರ್ ಮಲಬಾರ್ ಮುಂತಾದ ಭಾಗಗಳಲ್ಲಿ ಸಂಚರಿಸಿ, ದಲಿತೋದ್ಧಾರ ಮತ್ತು ಸಂಘಟನ ಕಾರ್ಯಗಳನ್ನು, ತಾವು ಹೋದ ಸ್ಥಳಗಳಲ್ಲೆಲ್ಲ ವಿಶೇಷರೀತಿಯಿಂದ ಪ್ರಚಾರಪಡಿಸತೊಡಗಿದರು. ವಿಧವೆಯರಿಗೆ ಪುನರ್ವಿವಾಹ ಮತ್ತು ಶುದ್ಧಿಯಿಂದ ಆರ್ಯರಾದ ಪಂಚಮರಿಗೆ ಗಾಯತ್ರೀ ಉಪದೇಶ ಈ ಎರಡು ವಿಷಯಗಳಲ್ಲಿ ಹಿಂದೂ ಮಹಾಸಭೆಯವರಿಗೂ ಸ್ವಾಮಿಗಳಿಗೂ ಮತಭೇದವಿದ್ದಿತು. ಹಿಂದೂ ಸಭೆಯವರು, ಶ್ರೀಯುವರು ಸಮರ್ಥಿಸಿದ ಈ ಎರಡು ಕೆಲಸಗಳನ್ನೂ ಒಪ್ಪಿಕೊಳ್ಳದೆ ಹೋದರು. ಒಡನೆ, ಶ್ರೀ ಸ್ವಾಮಿಯವರು ಮಹಾಸಭೆಯ ಉಪಾಧ್ಯಕ್ಷಪದವಿಗೂ ತ್ಯಾಗಪತ್ರವನ್ನು ಕಳುಹಿಸಿ ಮೇಲ್ಕಂಡ ಕಾರ್ಯಗಳನ್ನು ಸ್ವತಃ ತಾವೇ ನಡೆಯಿಸತೊಡಗಿದರು.



## — ಇತರ ಕೆಲವು ಮಹತ್ವದ ಕಾರ್ಯಗಳು —

**ಕನ್ಯಾಗುರುಕುಲ:**—ಭಾರತ ಜಾತೀಯ ಬಾಲಕರ ವಿದ್ಯಾಭ್ಯಾಸಕ್ಕೆಂದು ಕಾಂಗರೀ ಗುರುಕುಲವನ್ನು ಸ್ಥಾಪಿಸಿದ ಕೆಲವು ದಿನಗಳಲ್ಲೇ ಅವರಿಗೆ ಕನ್ಯೆಯರಿಗಾಗಿ ಒಂದು ಗುರುಕುಲವನ್ನು ಸ್ಥಾಪಿಸಬೇಕೆಂಬ ಅಪೇಕ್ಷೆಯೂ ಉಂಟಾಯಿತು. ಶ್ರೀಯವರ ಈ ಉದ್ದೇಶವು ಪ್ರಕಟವಾದೊಡನೆಯೇ ಡೆಲ್ಲೀ ನಗರವಾಸಿ ದಾನವೀರ ಶೇಟ್ ರಘೂಮಲ್‌ಜಿ ಎಂಬಾತನು ಒಂದು ಲಕ್ಷ ರೂಪಾಯಿಗಳನ್ನು ಆ ಬಗ್ಗೆ ದಾನವಾಗಿ ಕೊಟ್ಟನು. ಸಾರ್ವದೇಶಿಕ ಆರ್ಯ ಪ್ರತಿನಿಧಿ ಸಭೆಯೂ ಆ ಕಾರ್ಯವನ್ನು ಅಂಗೀಕಾರ ಮಾಡಿತು. ಮುಂದೆ ೧೯೨೩ ನೆಯ ನವಂಬರು ೯ ನೆಯ ದಿನದಲ್ಲಿ ಡೆಲ್ಲೀ ನಗರದ ದರ್ಯಾಗಂಜ್ ಕೋಠೀಯಲ್ಲಿ ಕನ್ಯಾ ಗುರುಕುಲವು ಸ್ಥಾಪನೆಯಾಯಿತು. ಈಗ ಆ ಗುರುಕುಲದಲ್ಲಿ ನೂರಾರು ಮಂದಿ ಭಾರತ ಕನ್ಯೆಯರು ಭಾರತ ಸ್ತ್ರೀ ಧ್ಯೇಯಕ್ಕೆ ಅನುಸಾರವಾದ ವಿದ್ಯಾಭ್ಯಾಸವನ್ನು ಹೊಂದುತ್ತಾ ಇದ್ದಾರೆ.

**ಶ್ರೀ ದಯಾನಂದ ಜನ್ಮ ಶತಾಬ್ದೀ:**—೧೯೨೫ನೆಯ ಸಂವತ್ಸರದ ಫೆಬ್ರುವರಿ ಮಾಸಕ್ಕೆ ಆರ್ಯ ಸಮಾಜ ಸ್ಥಾಪಕರಾದ ಶ್ರೀ ದಯಾನಂದ ಸರಸ್ವತಿಯವರ ಜನ್ಮವಾಗಿ ಒಂದು ಶತಮಾನವಾಗುವುದೆಂದೂ, ಆ ಕಾಲಕ್ಕೆ ಶತಾಬ್ದಿ ಮಹೋತ್ಸವವನ್ನು ಅತ್ಯುತ್ಕೃಷ್ಟ ರೀತಿಯಿಂದ ನೆರವೇರಿಸಬೇಕೆಂದು ಆರ್ಯಸಮಾಜ ಬಂಧುಗಳು ಯೋಚಿಸಿದರು. ಅದಕ್ಕಾಗಿ ಬಹು ದಿನಗಳ ಹಿಂದೆಯೇ ಒಂದು ಕಾರ್ಯಕಾರಿ ಮಂಡಲವು ಏರ್ಪಟ್ಟಿದ್ದು ಅದಕ್ಕೆ ಶ್ರೀ ಶ್ರದ್ಧಾನಂದರೇ ಪ್ರಮುಖರಾಗಿರಬೇಕೆಂದು ಪ್ರಾರ್ಥಿತರಾದರು. ಸ್ವಾಮಿಯವರು ಶುದ್ಧಿ ಸಂಘಟನಾದಿ ಕಾರ್ಯಗಳಿಗಾಗಿ ದೇಶದ ವಿವಿಧ ಭಾಗಗಳಲ್ಲಿ ಸಂಚಾರ ಮಾಡುತ್ತಿದ್ದಾಗ ಶ್ರೀ ನಾರಾಯಣ ಸ್ವಾಮಿಯವರು ಅಲ್ಲಿದ್ದು ಆ ಸಂಬಂಧ ಕಾರ್ಯಗಳನ್ನು ನೋಡಿಕೊಳ್ಳುತ್ತಿದ್ದರು. ಮುಂದೆ ಸಮ್ಮೇಳನವು ಇನ್ನು ಕೆಲವು ದಿನಗಳಿವೆಯೆಂಬ ವೇಳೆಗೆ ಶ್ರದ್ಧಾನಂದರು, ಮಥುರಾ ಪಟ್ಟಣದಲ್ಲಿ ಹೋಗಿ ಕುಳಿತು ಸಮ್ಮೇಳನದ ವಿವಿಧ ಕಾರ್ಯಗಳಲ್ಲಿ ಭಾಗ ತೆಗೆದುಕೊಂಡರು. ಶ್ರೀಯವರ ನೇತೃತ್ವ ಮತ್ತು ಶ್ರೀ ನಾರಾಯಣಸ್ವಾಮಿಯವರ ಪರಿಶ್ರಮಗಳಿಂದ ಶತಾಬ್ದೀ ಸಮ್ಮೇಳನವು

ಅತ್ಯಪೂರ್ವ ರೀತಿಯಿಂದ ನಡೆಯಿತು. ಕೇವಲ ಆರ್ಯ ಸಾಮಾಜಿಕರು ಮಾತ್ರವಲ್ಲ - ಹಿಂದೂದೇಶದ ವಿವಿಧ ಭಾಗಗಳಿಂದಲೂ ಸಕಲ ವರ್ಣಸ್ಥ ಜನಗಳೂ ಸುಮಾರು ಎರಡು ಲಕ್ಷ ಸಂಖ್ಯೆಯವರೆಗೆ ಆ ಮಹಾ ಸಮ್ಮೇಳನವನ್ನು ಸಂದರ್ಶಿಸಿ, ಮಹೋತ್ಸವದಲ್ಲಿ ಭಾಗಿಗಳಾದರು. ಅದನ್ನು ಕಣ್ಣಾರೆ ಕಂಡವರು, ಅಂತಹ ಮಹಾ ಸಮ್ಮೇಳನವೊಂದು 'ನಭೂತೋನಭವಿಷ್ಯತಿ' ನಡೆದಿರಲಾರದು, ನಡೆಯಲಾರದು ಎಂದುಕೊಂಡು ಅದರ ದೃಶ್ಯವನ್ನು ತಮ್ಮ ಜನ್ಮದಲ್ಲಿ ಎಂದಿಗೂ ಮರೆಯಲಾರದಂತಹ ಅನುಭವ ಹೊಂದಿದರು.

**ಐಕ್ಯ ಸಮ್ಮೇಲನ:**—೧೯೨೧ ರಲ್ಲಿ ಪ್ರಾರಂಭವಾದ ಅಸಹಯೋಗದಿಂದ ದೇಶಾಭಿವೃದ್ಧಿ ವಿಷಯದಲ್ಲಾದ ಪ್ರಯೋಜನಗಳು ಎಷ್ಟೋ ಉಂಟಲ್ಲವೆ! ಅಂತೆಯೇ ಅದರಿಂದ ದೇಶಕ್ಕುಂಟಾದ ಕ್ಷೋಭೆಗಳೂ ಒಂದೆರಡುಂಟು. ನೇರವಾಗಿ ಅಸಹಕಾರಿತೆಗೇ ಸಂಬಂಧಿಸದಿದ್ದರೂ ಮುಲತಾನ್ ಶಹರಣ್‌ಪೂರ್ ಅಜಮೀರ್ ಗುಲ್ಬರ್ಗಾ ಕೋಹಾಟ್ ಮುಂತಾದ ಕೆಲವೆಡೆಗಳಲ್ಲಿ ಜಾತಿ ಸಂಬಂಧವಾದ ಜಗಳ ಬಡಿದಾಟಗಳಿಗೂ ಮಲಬಾರಿನಲ್ಲಿ ನಡೆದ ಮಾಪಿಳೆಯವರ ದಂಗೆಗೂ ಮಹಾತ್ಮಾಜಿಯವರು ಪ್ರಾರಂಭಿಸಿದ ಈ ಅಸಹಯೋಗವೇ ಕಾರಣವೆಂದು ಅನೇಕರು ಪ್ರತಿಪಾದಿಸುವುದುಂಟು. ಮಹಾತ್ಮಾ ಗಾಂಧಿಯವರು ಬಾರ್ದೋಲಿ ಪ್ರಕರಣದ ತರುವಾಯ ೬ ವರ್ಷಕಾಲ ಕಾರಾಗಾರ ಶಿಕ್ಷೆಯನ್ನು ಹೊಂದಿ ಬಂದೀವಾಸದಲ್ಲಿದ್ದು ಆದರೆ ಮುಂದೆ ಎರಡು ವರ್ಷಗಳೊಳಗೇ ಅತಿಶಯ ರೋಗಗ್ರಸ್ತರಾಗಿ ಹೊರಕ್ಕೆ ಬಂದ ತರುವಾಯ ದೇಶದ ನಾನಾ ಭಾಗಗಳಲ್ಲೂ ಹಿಂದೂ ಮಹಮ್ಮದೀಯರಲ್ಲಿ ನಡೆಯುತ್ತಿದ್ದ ಬಡಿದಾಟಗಳನ್ನು ಕಂಡು ಮನಮರುಗಿ ಖಿನ್ನರಾಗಿ, ಅಷ್ಟು ಕಾರ್ಯಕ್ಕೂ ಅಪಕ್ವವಾದ ತಮ್ಮ ಬೋಧನೆಯೇ ಮೂಲವೆಂದು ತಿಳಿದು ಪಶ್ಚಾತ್ತಾಪಗೊಂಡು, ಪ್ರಾಯಶ್ಚಿತ್ತ ರೂಪವಾಗಿ ಇಪ್ಪತ್ತೊಂದು ದಿನಗಳ ಉಪವಾಸವನ್ನು ಪ್ರಾರಂಭಿಸಿದರಷ್ಟೆ! ಅದರ ಪರಿಣಾಮವು ಜನಾಂಗದ ಮೇಲೆ ಉತ್ತಮ ರೀತಿಯಿಂದಲೇ ನಾಟಿತು. ಉಪವಾಸ ವ್ರತವು ಸಾಂಗವಾಗಿ ನೆರವೇರಿದ ತರುವಾಯ ಅನೇಕ ಪ್ರಮುಖರು ಡೆಲ್ಲೀ ಪಟ್ಟಣಕ್ಕೆ ಬಂದು ಮಹಾತ್ಮಾಜೀಯವರನ್ನು ಕಂಡರು. ಉಭಯ ಮತೀಯರ ಐಕ್ಯಕ್ಕಾಗಿ ಒಂದು ಸಮ್ಮೇಳನವು ನಡೆಯಬೇಕೆಂದು ಗೊತ್ತಾಯಿತು. ತ

ಕಾಲಕ್ಕೆ ನಮ್ಮ ಕಥಾನಾಯಕರೂ ಅಲ್ಲಿ ಹಾಜರಿದ್ದು ಧಾರ್ಮಿಕ ಉಪದೇಶ ದಿಂದ, ಶುದ್ಧಿ ಮತ್ತು ಸಂಘಟನ ಸಂಸ್ಥೆಗಳನ್ನು ಸ್ಥಾಪಿಸಿದ್ದರ ಉದ್ದೇಶ ವೇನೆಂಬುದನ್ನೂ, ಪರಮತೀಯರ, ಎಂದರೆ ಮುಸಲ್ಮಾನ್ ಮತ್ತು ಕ್ರೈಸ್ತ ಜನಾಂಗದವರ ವಿಷಯದಲ್ಲಿ ತಾವು ಎಷ್ಟು ಉದಾರರಾಗಿದ್ದರೆಂಬುದನ್ನೂ ಸ್ಪಷ್ಟೋಕ್ತಿಗಳಿಂದ ಸಭಿಕರಿಗೆ ಮನಗಾಣಿಸಿದರು. ಸಭೆಯು ಸಫಲಿತ ವಾಗಲು, ಶ್ರೀಯವರ ಸಂಬಂಧವು ವಿಶೇಷ ರೀತಿಯಿಂದ ಸಹಾಯಕಾರಿ ಯಾಯಿತು.



## —"ಶಾಂತಿದೇವಿ"ಯ ಶುದ್ಧಿ ಕ್ರಿಯೆ, ಅದರ ಪರಿಣಾಮ.—

೧೯೨೬ ನೆಯ ಮಾರ್ಚಿ ೨೪ ನೆಯ ದಿನ ಅಸಗರಿಬೀಗಂ ಎಂಬ ಮಹ ಮ್ಮದೀಯ ಸ್ತ್ರೀಯೊಬ್ಬಳು ತನ್ನ ಇಬ್ಬರು ಮಕ್ಕಳು ಮತ್ತು ತನ್ನ ಸಹಾ ಯಕನಾಗಿ ಜೊತೆಗಿದ್ದ ತನ್ನ ಅಣ್ಣನ ಮಗನೊಬ್ಬ ಇವರೊಂದಿಗೆ ಡಿಲ್ಲೀ ಪಟ್ಟಣದಲ್ಲಿ ಉಗಿಬಂಡಿಯನ್ನಿಳಿದು ಬಂದು ಆರ್ಯಸಮಾಜ ಮಂದಿರವನ್ನು ಹೊಕ್ಕು, ಶುದ್ಧಿ ಕ್ರಿಯೆಯಿಂದ ಆರ್ಯಳಾಗಬೇಕೆಂದಿದ್ದ ತನ್ನ ಇಚ್ಛೆಯನ್ನು ಪ್ರಕಟ ಮಾಡಿದಳು. ಆಕೆಯ ಮಾತನ್ನು ಕೇಳಿದ ಅಲ್ಲಿದ್ದ ಕಾರ್ಯಕಾರಿಗಳು ತಕ್ಕಂತೆ ವಿಚಾರ ನಡಿಸಿ ಶ್ರೀ ಸ್ವಾಮಿಜೀಯವರ ಅನುಮತಿಯಿಂದ ಆ ನಾ ಲ್ವರನ್ನೂ ಶುದ್ಧಿಗೊಳಿಸಿ, ಆಕೆಗೆ ಶ್ರೀಮತಿ ಶಾಂತಿದೇವಿಯೆಂದೂ ನಾಲ್ಕು ವರ್ಷದವನಿದ್ದ ಆಕೆಯ ಹಿರಿಯ ಮಗನಿಗೆ ಧರ್ಮಪಾಲನೆಂದೂ, ಒಂದೂ ವರೆವರ್ಷದವನಿದ್ದು ಇನ್ನೂ ಸ್ತನ್ಯಪಾನಮಾಡುತ್ತಿದ್ದ ಆಕೆಯ ಎರಡನೆಯ ಮಗನಿಗೆ ಅರ್ಜುನನೆಂದೂ, ಆಕೆಯ ಅಣ್ಣನ ಮಗನಿಗೆ ಅಮರಸಿಂಹ ನೆಂದೂ ನಾಮಕರಣಮಾಡಿದರು. ಶ್ರೀಮತೀ ಶಾಂತಿದೇವಿಯು ವನಿತಾ ಆಶ್ರಮಕ್ಕೆ ಕಳುಹಿಸಲ್ಪಟ್ಟಳು. ಡಾ. ಶುಕದೇವ ಎಂಬಾತನು ಆ ಆಶ್ರ ಮದ ಮಂತ್ರಿಯಾಗಿದ್ದನು. ಆತನು, ಶ್ರೀ ಶ್ರದ್ಧಾನಂದರ ಪೂರ್ವಾಶ್ರ ಮದ ಅಳಿಯನು—ಅವರ ಮಗಳು ಶ್ರೀಮತೀ ಅಮೃತಕಲಾದೇವಿಯ ಪತಿ!

ಶ್ರೀ ಶಾಂತಿದೇವಿಯು ವನಿತಾಶ್ರಮವನ್ನು ಸೇರಿ ಅಲ್ಲಿ ಹಿಂದೂಧರ್ಮ ಗ್ರಂಥಗಳ ಪಠಣೆಯಲ್ಲಿ ತೊಡಗಿದಳು. ಹೀಗೆ ಮೂರುತಿಂಗಳು ಕಳೆ

ಯಿತು. ಅಷ್ಟರಲ್ಲಿ ಅಸಗರೀಬೀಗಮಳ ತಂದೆ ಮೌಲ್ವೀ ತಾಜಮುಹಮ್ಮದ್‍ಖಾ ಎಂಬಾತನೂ, ಆಕೆಯ ಪತಿ ಅಬ್ದುಲ್ ಹಲೀಮ್ ಎಂಬಾತನೂ, ಆಕೆಯನ್ನು ಆರ್ಯಸಮಾಜದವರು ಹಿಂದೂವಾಗಿಮಾಡಿದರೆಂದು ಕೇಳಿ ಡೆಲ್ಲಿಗೆ ಬಂದು, ಅಲ್ಲಿಯ ಇಸ್ಲಾಮಿಾ ಅಂಜುಮಾನೀ ಸಂಘದವರ ಸಹಾಯವನ್ನು ಹೊಂದಿ ಆರ್ಯಸಮಾಜ ಮಂದಿರವನ್ನು ಸೇರಿ, ಆಕೆಯನ್ನು ಪುನಃ ಮುಸಲ್ಮಾನೀ ಧರ್ಮಕ್ಕೆ ವಾಪಸು ಬಿಟ್ಟುಕೊಡಬೇಕೆಂದು ಕೇಳಿಕೊಂಡರು. ಆರ್ಯಸಮಾಜದವರು ಅದಕ್ಕೊಪ್ಪಲಿಲ್ಲ! ಮುಹಮ್ಮದೀಯರ ಕ್ರೋಧರೋಷಗಳು ನೆತ್ತಿಗೇರಿದುವು. ದೊಡ್ಡ ದೊಡ್ಡ ನ್ಯಾಯವಾದಿಗಳ ಬೆಂಬಲಗೊಂಡು ಅವರು ನ್ಯಾಯಸ್ಥಾನದಲ್ಲಿ ಮೊಕದ್ದಮೆಯನ್ನು ನಡೆಯಿಸಲನುವಾದರು. ಶ್ರೀ ಸ್ವಾಮಿಾ ಶ್ರದ್ಧಾನಂದರು, ಡಾ. ಶುಕದೇವಜೀ, ಲಾ. ದೇಶಬಂಧು ಗುಪ್ತಾ, ಪ್ರೊ. ಇಂದ್ರ, ಲಾ. ಗಣಪತರಾವ್ ಮತ್ತು ಕರಾಚೀ ಆರ್ಯಸಮಾಜದ ಮಂತ್ರಿ ಇವರುಗಳೆಲ್ಲರೂ, ಅಸಗರೀ ಬೀಗಮಳಿಗೆ ದುರ್ಬೋಧನೆಮಾಡಿ ಆಕೆಯನ್ನೂ ಆಕೆಯ ಅವಯಸ್ಕ ಮಕ್ಕಳನ್ನೂ ಧರ್ಮಾಂತರಗೊಳಿಸಿರುವರೆಂದು ಆಪಾದಿತಸ್ಥಾನದಲ್ಲಿ ಸೇರಿಸಿ ಡೆಲ್ಲಿಯ ನ್ಯಾಯಸ್ಥಾನದಲ್ಲಿ ವ್ಯವಹಾರ ನಡೆಯಿಸಿದರು. ಮ್ಯಾಜಿಸ್ಟ್ರೇಟರು ಎಲ್ಲಾ ವಿಚಾರಗಳನ್ನೂ ಆಮೂಲಾಗ್ರವಾಗಿ ವಿಚಾರಿಸಿ, ಅಸಗರೀ ಬೀಗಮಳು ತನ್ನ ಸ್ವಂತ ಅಪೇಕ್ಷೆಯಿಂದ ಆರ್ಯಧರ್ಮವನ್ನು ಮೆಚ್ಚಿ ಅದಕ್ಕೆ ಶರಣುಹೋದವಳಲ್ಲದೆ, ಯಾರಿಂದಲೂ ಬಲಾತ್ಕರಿಸಲ್ಪಟ್ಟವಳಲ್ಲವೆಂಬುದನ್ನು ಕಂಡುಹಿಡಿದು, ಆಕೆಯ ಸ್ವಂತ ಅಭಿಪ್ರಾಯದಮೇಲೆ ಮುಸಲ್ಮಾನ್ ಧರ್ಮೀಯರಿಗಾಗಲೀ, ಆಕೆಯ (ಪೂರ್ವದ) ಗಂಡನಿಗೇ ಆಗಲಿ ಯಾವ ಅಧಿಕಾರವೂ ಇಲ್ಲವೆಂದೂ ಮಕ್ಕಳ ಸ್ವಾಧೀನತೆಗಾಗಿ ಪತಿಯು ಇಷ್ಟವಿದ್ದರೆ ಸಿವಿಲ್ ಮೂಲಕ ವ್ಯವಹರಿಸಬಹುದೆಂದೂ ತೀರ್ಮಾನವನ್ನಿತ್ತರು. ಆರ್ಯಸಮಾಜದವರ ಶುದ್ಧಿ-ಸಂಘಟನೆಗಳ ವಿಷಯದ ಸಚ್ಚರಿತ್ರೆಯು-ನಿರ್ದೋಷವಾದುದೆಂದು ಈಮೂಲಕ ಜಗತ್ತಿಗೇ ಪ್ರಕಟವಾಯಿತು. ಈ ವ್ಯವಹಾರದಲ್ಲಿ ಸ್ವಾಮಿಗಳಿಗೆ ಆದ ಈ ವಿಜಯವು ಅವರ ಶತ್ರುಗಳಿಗೆ ಅವರ ಮೇಲಿದ್ದ ದ್ವೇಷವನ್ನು ಮತ್ತೂ ಹೆಚ್ಚಿಸಿತು.

## — ಶರೀರಾಸ್ವಸ್ಥ್ಯ —

ಶ್ರೀ ಸ್ವಾಮಿಜೀಯವರನ್ನು ಸಾಕ್ಷಾತ್ತಾಗಿ ನೋಡಿದವರು, ಅವರ ಭವ್ಯದೇಹ ಸಂಪತ್ತಿಗಾಗಿ ಅಗಾಧಪಡುತ್ತಿದ್ದುದುಂಟು. ಆದರೂ ಅವರ ದೇಹವನ್ನು ರೋಗವು ಆಕ್ರಮಿಸಿದ್ದು, ಅದು ದಿನದಿನಕ್ಕೆ ಒಳಗೇ ಅಭಿವೃದ್ಧಿಯಾಗುತ್ತಿದ್ದಿತು. ಚಿಕ್ಕಂದಿನ ಅಶಿಕ್ಷಿತ ದಿನಗಳಲ್ಲಿ ನಡೆದ ಅತ್ಯಾಚಾರಗಳಿಂದ ದೇಹದಲ್ಲಿ ಉಬ್ಬಸಾದಿ ರೋಗಗಳು ಮನೆಮಾಡಿಕೊಂಡು ನಿಂತಿದ್ದವು. ಈಚೆಗೆ ನಿಯಮಿತ ಜೀವನಕ್ರಮ, ಅದ್ವಿತೀಯ ಬ್ರಹ್ಮಚರ್ಯ ದೀಕ್ಷೆ, ಸಚ್ಚಿಂತನೆ, ಸರ್ವದಾಕಾರ್ಯತತ್ಪರತೆ ಮುಂತಾದುವುಗಳ ಪ್ರಭಾವದಿಂದ ದೇಹವು ವಜ್ರಪಂಜರದಂತೆ ದೃಢವಾಗಿದ್ದರೂ, ವೃದ್ಧಾಪ್ಯಬಂದಂತೆಲ್ಲ ಹಿಂದಿನ ವ್ಯಾಧಿಯು ಅವರನ್ನು ಬಾಧಿಸತೊಡಗಿತು. ಆದರಿಂದ ಶಾಂತಿದೇವಿ ಸಂಬಂಧದ ಪ್ರಕರಣವು ಮುಗಿದೊಡನೆಯೇ ಎಲ್ಲಾದರೊಂದೆಡೆಯಲ್ಲಿ ಕೆಲದಿನಗಳು ವಿಶ್ರಾಂತಿಗೊಳ್ಳಬೇಕೆಂದು ಅವರು ಇಚ್ಛಿಸಿದ್ದರು. ಕುರುಕ್ಷೇತ್ರ ಗುರುಕುಲದಲ್ಲಿ ವಾಸಿಸಬಹುದೆಂದು ಅಲ್ಲಿಯ ಮುಖ್ಯಾಧಿಪನು ಪ್ರಾರ್ಥಿಸಿ ಪತ್ರಬರೆದಿದ್ದನು. ಆತನ ಪ್ರಾರ್ಥನೆಯನ್ನು ಮನ್ನಿಸಿ ಉಬ್ಬಸ ವ್ಯಾಧಿಯಿಂದ ಬಾಧೆಪಡುತ್ತಿದ್ದರೂ ಮೋಟಾರಿನಲ್ಲಿ ಅಲ್ಲಿಗೆ ಹೊರಟರು. ಮಾರ್ಗದಲ್ಲಿ ಮಂಜು ವಿಶೇಷವಾಗಿ ಸುರಿಯುತ್ತಿದ್ದುದರಿಂದಲೂ, ಚಳಿ ಬಹು ಹೆಚ್ಚಾಗಿದ್ದುದರಿಂದಲೂ ಅವರ ಗಂಟಲಿನಲ್ಲಿ ಶೀತದ ಗಡ್ಡೆಗಳುಂಟಾದುವು. ಜ್ವರಸಹ ಬಂತು. ಇದು ಸಾಧುವಲ್ಲವೆಂದು ಯೋಚಿಸಿ ಆದಿನ ಸಾಯಂಕಾಲಕ್ಕೇ ಪುನಃ ಡೆಲ್ಲೀಗೆ ಬಂದುಬಿಟ್ಟರು.

ಡೆಲ್ಲಿಗೆ ಬರುವ ವೇಳೆಗೆ ಅವರಿಗೆ ಬ್ರಾಂಕೋನಿಮೋನಿಯಾ ಎಂಬ ಶ್ವಾಸಕೋಶವ್ಯಾಧಿಯು ಪ್ರಾಪ್ತವಾಗಿಬಿಟ್ಟಿದ್ದಿತು. ಒಡನೆ ಡಾ. ಶುಕದೇವಜೀಯು ಚಿಕಿತ್ಸೆ ಮಾಡಿದರಾದರೂ, ಸ್ವಾಮಿಜೀಯವರ ವಿಶ್ವಾಸವು, ಡಾಕ್ಟರ್ ಅನ್ಸಾರೀಯವರ ಔಷಧದಮೇಲೆ ಹೆಚ್ಚಾಗಿದ್ದುದರಿಂದ ಅವರು ಬಂದು, ಪ್ರೇಮಪೂರ್ವಕ ಶ್ರೀಯವರ ದೇಹಸ್ಥಿತಿಯನ್ನು ಪರೀಕ್ಷಿಸಿ ಔಷಧ ಕೊಟ್ಟರು. ಮೂರುದಿನಗಳೊಳಗಾಗಿ, ದೇಹಸ್ಥಿತಿಯು ಎಷ್ಟೋಮಟ್ಟಿಗೆ ಉತ್ತಮವಾಯಿತು. ಆದರೆ ನಾಲ್ಕನೆಯದಿನ ಡಾ. ಅನ್ಸಾರಿಯವರು

ರಾಮಪುರವೆಂಬಲ್ಲಿಗೆ ಹೋಗಬೇಕಾಗಿ ಬಂದುದರಿಂದ ಚಿಕಿತ್ಸೆಗೆ ತಕ್ಕ ಏರ್ಪಾಟುಮಾಡಿ ರೋಗಿಯನ್ನು ಬಿಡಲಾರದೆ ಬಿಟ್ಟು ಹೊರಟುನಡೆದರು. ಸ್ವಾಮಿಯುವರು ಡಾಕ್ಟರು ಹೇಳಿದ್ದ ಪಥ್ಯಪಾನಗಳ ವಿಚಾರದಲ್ಲಿ ಲೇಶಮಾತ್ರವೂ ಅವಿಧೇಯರಾಗಿ ನಡೆಯದೆ ದಿನ ದಿನಕ್ಕೆ ಗುಣಪಡಿಸಿಕೊಳ್ಳುತ್ತಿದ್ದರು. ಅವರ ಶಿಷ್ಯರೂ ಅನುಯಾಯಿಗಳೂ ಸೇವಕರೂ ಮುಂತಾಗಿ ಕ್ಷಣಮಾತ್ರವೂ ಅವರನ್ನು ಬಿಟ್ಟಗಲದೆ ಅವರ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಿದ್ದರು. ನಾಲ್ಕುದಿನಗಳ ತರುವಾಯ ಡಾ. ಅನ್ಸಾರಿಯುವರು ಬಂದು ರೋಗಿಯ ದೇಹಸ್ಥಿತಿಯನ್ನು ನೋಡಿ, ಪುನಃ ಔಷಧಕೊಟ್ಟು ಬೆದರಿಕೆಗೆ ಕಾರಣವಿಲ್ಲವೆಂದು ಹೇಳಿ, ಎಲ್ಲರ ಮನಸ್ಸಿಗೂ ಸಮಾಧಾನನ್ನುಂಟುಮಾಡಿದರು.



## — ವೀರ ಸ್ವರ್ಗಾರೋಹಣ —

ಪ್ರಾಣಾಪಾಯಕಾರಿಯಾದ ನಿಮೋನಿಯಾ ಜಾಡ್ಯದ ಭಯಂಕರ ಸ್ಥಿತಿಯು ನಿವಾರಣೆಯಾದರೂ ಇನ್ನೂ ಶ್ರೀಯುವರು ಹಾಸಿಗೆಯನು ಬಿಟ್ಟೆದ್ದು ಎಲ್ಲರಂತೆ ಓಡಿಯಾಡಲು ತಕ್ಕ ಸ್ಥಿತಿಯುಂಟಾಗಲಿಲ್ಲ! ಈ ಸ್ಥಿತಿಯಲ್ಲೊಂದುದಿನ ಅವರ ದರ್ಶನ ತೆಗೆದುಕೊಳ್ಳಲು ಹೋಗಿದ್ದ ಒಬ್ಬ ಏಕಾಂತ ಭಕ್ತರನ್ನು ಕುರಿತು ಸ್ವಾಮಿಜೀಯುವರು—'ಇನ್ನು ಈ ದೇಹದ ಆಸೆ ತೀರಿತು. ಪುನಃ ಎದ್ದು ಹಿಂದಿನಂತೆ ಕೆಲಸಮಾಡುವೆನೆಂಬ ನಂಬಿಕೆಯಿಲ್ಲ. ನನ್ನ ದಫ್ತರದಲ್ಲಿ ಆರ್ಯಸಮಾಜ ಚರಿತ್ರೆಯ ಸಂಬಂಧ ವಿಶೇಷ ಕಾಗದಪತ್ರಗಳ ಸಂಗ್ರಹವಿದೆ. ಅದನ್ನು ತೆಗೆದುಕೊಂಡು ಆದಷ್ಟು ಶೀಘ್ರವಾಗಿ ಸಮಾಜದ ಚರಿತ್ರೆಯನ್ನು ಬರೆದಿಡಿರಿ. ನನ್ನಿಂದ ಸಮಾಜಕಾರ್ಯದಲ್ಲಿ ಎಷ್ಟೋ ಲೋಪದೋಷಗಳು ನಡೆದಿವೆ. ಸಮಾಜ ಚರಿತ್ರೆಯನ್ನು ಬರೆವಾಗ ನೀವು ನನ್ನ ಮೇಲಿನ ಅಭಿಮಾನದಿಂದ ಪ್ರೇರಿತರಾಗಿ ನನ್ನ ಲೋಪಗಳನ್ನು ಮುಚ್ಚಿಡದಂತೆ ಉದ್ಘಾಟಿಸಿ ನ್ಯಾಯರೀತಿಯಲ್ಲಿ ಬರೆಯಬೇಕೆಂದು ಮಾತ್ರ ನನ್ನ ಕೋರಿಕೆ' ಎಂದರಂತೆ! ಮತ್ತೊಂದುವೇಳೆ ವ್ಯಾಖ್ಯಾನವಾಚಸ್ಪತಿ ಪಂ. ದೀನದಯಾಳು ಶರ್ಮಾ ಎಂಬುವರು ಸ್ವಾಮಿಯುವರಲ್ಲಿಗೆ

ಹೋಗಿ ಮಾತನಾಡುತ್ತಾ ಕುಳಿತವೇಳೆಯಲ್ಲಿ ಶ್ರೀಯವರು ಪ್ರಸಂಗವ ಶಾತ್-'ಪಂಡಿತಜೀ, ಈ ಕಲಿಯುಗದಲ್ಲಿ ಮೋಕ್ಷಾಪೇಕ್ಷೆ ಮಾಡುವುದು ವ್ಯರ್ಥವಲ್ಲವೆಂದೇ ನನ್ನ ಅಭಿಪ್ರಾಯ! ನಾನು ಕೇವಲ ಈ ಶರೀರವನ್ನು ಬದಲಿಸಿ ಬೇರೊಂದು ಶರೀರ ಧಾರಣಮಾಡಬೇಕೆಂದು ಮಾತ್ರ ಇಚ್ಛಿಸುತ್ತೇನಲ್ಲದೆ ನಾನು ಅಪೇಕ್ಷಿಸುವುದು ಮೋಕ್ಷವನ್ನಲ್ಲ! ಏಕೆಂದರೆ, ಈ ಜೀರ್ಣದೇಹದಿಂದ ಇನ್ನು ಮಾತೃದೇಶ ಸೇವಾಕಾರ್ಯವು ನಡೆಯಲಾರದು. ಆದುದರಿಂದ ಭಗವದಿಷ್ಟವಿದ್ದರೆ, ಪುನಃ ಈ ಭಾರತವರ್ಷದಲ್ಲೇ ಜನ್ಮಗ್ರಹಣಮಾಡಿ ಈ ದೇಶಮಾತೆಯ ಪಾದಗಳನ್ನು ಸೇವೆಮಾಡಬೇಕೆಂಬುದೆ ನನ್ನ ಆಸೆಯಾಗಿದೆ' ಎಂದರಂತೆ!

ಇದು ನಡೆದ ಕೆಲದಿನಗಳೆಂಬ ವೇಳೆಗೆ ಡಿಸಂಬರು ೨೩ ನೆಯ ದುರ್ದಿನವು ಪ್ರಾಪ್ತವಾಯಿತು. ಆದಿನ ಪ್ರಾತಃಕಾಲವಾದೊಡನೆಯೇ ಎಂದಿನಂತೆಯೇ ಚಿಕಿತ್ಸೋಪಚಾರಗಳು ನಡೆದುವು. ಮಧ್ಯಾಹ್ನದಲ್ಲಿ ಡಾ. ಶುಕದೇವಜೀ, ಕನ್ಯಾಗುರುಕುಲದ ಆಚಾರ್ಯಾ ಶ್ರೀಮತೀ ವಿದ್ಯಾವತೀ ದೇವಿ, ಮತ್ತು ಸ್ವಾಮಿಜೀಯವರ ಅನನ್ಯಭಕ್ತ ಲಾ. ಜಮುನಾದಾಸ ಮುಂತಾದ ಅನೇಕಮಂದಿ ಬಂದು ಅವರ ದರ್ಶನತೆಗೆದುಕೊಂಡು ಹೋದರು. ಸುಮಾರು ಎರಡು ಗಂಟೆಯ ವೇಳೆಗೆ,-'ಇನ್ನು ಎಲ್ಲರೂ ಹೊರಟುಹೋಗಿರಿ. ಇಲ್ಲಿ ಧರ್ಮಸಿಂಹ ಮಾತ್ರವಿರಲಿ, ಎಂದು ನುಡಿದು ಸ್ವಾಮಿಯವರು ಸ್ವಲ್ಪಕಾಲ ವಿಶ್ರಮಿಸಿಕೊಂಡರು. ಸ್ವಲ್ಪಹೊತ್ತಿನಲ್ಲೇ ಬಹಿರ್ದೆಸೆಗೆ ಅವಸರ ತೋರಿತು. ಸೇವಕ ಧರ್ಮಸಿಂಹನು ಅನುಕೂಲಪಡಿಸಿಕೊಟ್ಟನು. ಸ್ವಾಮಿಯವರು ಶೌಚವಿಧಿಯನ್ನು ತೀರಿಸಿಕೊಂಡು ಶುದ್ಧರಾಗಿ ಪುನಃ ಹಾಸಿಗೆಯಮೇಲೆ ಮಲಗಿಕೊಂಡರು.

ಅಷ್ಟರಲ್ಲಿ ಅವರಿದ್ದ ಮಹಡಿಯ ಮೆಟ್ಟಲಿನ ದ್ವಾರದಲ್ಲೊಬ್ಬ ಮುಸಲ್ಮಾನನು ಧರ್ಮಸಿಂಹನ ದೃಷ್ಟಿಗೋಚರನಾದನು. ಅವನಾರೆಂದು ವಿಚಾರಿಸಲು, ಶ್ರೀಯವರ ಸಂದರ್ಶನಕ್ಕಾಗಿ ಬಂದಿದ್ದೇನೆಂದು ತಿಳಿಸಿದನು. ಡಾಕ್ಟರು, ಅವರನ್ನು ನೋಡಲು ಬರುವ ಕೇವಲ ಆಪ್ತರಲ್ಲದ ಯಾರೊಬ್ಬರಿಗೂ ಅವಕಾಶಕೊಡಕೂಡದೆಂದು ಹೇಳಿದ್ದುದರಿಂದ ಧರ್ಮಸಿಂಹನು ಆಗ ಶ್ರೀಯವರನ್ನು ನೋಡಲು ಆಗಲಾರದೆಂದು ನಿಷೇಧಿಸಿದನು. ಆ

ಶಬ್ದವು ಅವರ ಕಿವಿಗೆ ಕೇಳಿಸಿ, ಅದೇನೆಂದರು! ಸಂಗತಿಯು ತಿಳಿಯಲು, ಒಡನೆ ಆ ಮಹಮ್ಮದೀಯನನ್ನು ಒಳಕ್ಕೆ ಕರೆಯಿಸಿ ಕುಳ್ಳಿರಿಸಿಕೊಂಡು, ಬಂದ ಕಾರಣವೇನೆಂದು ವಿಚಾರಿಸಿದರು. ಅವನು—'ಸ್ವಾಮಿಜೀ ನಾನು ತಮ್ಮಲ್ಲಿ ಇಸ್ಲಾಮಿ ಧರ್ಮವಿಚಾರದಲ್ಲಿ ವಾಗ್ವಾದ ಮಾಡಲು ಬಂದಿದ್ದೇನೆ' ಎಂದನು. ಅದನ್ನು ಕೇಳಿದ ಸ್ವಾಮಿಜೀಯವರು—'ಭಾಯಿಸಾ, ನಾನು ಕಾಹಿಲೆ ಇದ್ದೇನೆ. ಗುಣವಾದ ನಂತರ ನಿನ್ನ ಇಚ್ಛಾ ಪೂರ್ಣವಾಗಲಾದೀತು!' ಎಂದರು. ತರುವಾಯ ಅವನು, ಕುಡಿಯಲು ಸ್ವಲ್ಪ ನೀರು ಬೇಕೆಂದನು. ಧರ್ಮಸಿಂಹನಿಗೆ ನೀರು ತಂದುಕೊಡಹೇಳಿದರು. ಅವನು ತಂದುಕೊಟ್ಟ ನೀರನ್ನು ಕುಡಿದು ಬಾಯಾರಿಕೆಯನ್ನು ಕಳೆದುಕೊಂಡ ಆ ಪಾಪಿಯು, ಪಾತ್ರೆಯನ್ನಿಡಲು ಒಳಕ್ಕೆ ಹೋದ ಧರ್ಮಸಿಂಹನ ಗೈರ್ ಹಾಜರಿಯಲ್ಲಿ ಕೈಕೋವಿಯನ್ನೆತ್ತಿ ಕಣ್ಣುಚ್ಚಿ ದಿಂಬಿಗೆ ಒರಗಿ ಅರ್ಧಶಯನ ಸ್ಥಿತಿಯಲ್ಲಿದ್ದ ಸ್ವಾಮಿಯವರ ಎದೆಗೆ ಪ್ರಯೋಗಿಸಿದನು. ಒಂದು ಗುಂಡು ತಗುಲಿತು. ಒಡನೆ ರಕ್ತವು ಪ್ರವಹಿಸತೊಡಗಿ ಅವರ ಕಣ್ಣು ಕತ್ತಲಿಟ್ಟು ಮುಚ್ಚಿಹೋಯಿತು. ಅಷ್ಟರಲ್ಲಿ ಇನ್ನೊಂದು ಗುಂಡೂ ಬಂದು ತಗುಲಿತು. ಸ್ವಲ್ಪ ಹೊತ್ತಿನಲ್ಲೇ ಅವರ ಪ್ರಾಣವಾಯುವು ದೇಹದಿಂದ ಹೊರಟುಹೋಯಿತು.

ಏಕಾಏಕಿ ಎರಡು ಗುಂಡು ಹಾರಿದ ಶಬ್ದವನ್ನು ಕೇಳಿ ಗಾಬರಿಗೊಂಡ ಧರ್ಮಸಿಂಹನು ಒಳಕ್ಕೆ ಬಂದು, ಆ ಪಾಪಿಯ ಕೈಯನ್ನು ಹಿಡಿದುಕೊಂಡನು. ಒಡನೆ ಅವನ ಮೈಮೇಲೂ ಒಂದು ಗುಂಡು ಪ್ರಯೋಗಿಸಲ್ಪಟ್ಟಿತು. ಅವನು ಅದರ ಬಾಧೆಯಿಂದ ನಿಸ್ಸತ್ವನಾಗಿ ಆ ಘಾತುಕನ ಕೈಬಿಡುವ ವೇಳೆಗೆ ಸರಿಯಾಗಿ ಸ್ವಾಮಿಜೀಯವರ ಆಪ್ತ ಸಚಿವ ಸ್ನಾತಕ ಧರ್ಮಪಾಲನೆಂಬಾತನು ಬಂದು ತನ್ನ ಎರಡು ಕೈಗಳಿಂದಲೂ, ಆ ಘಾತುಕ ಮಹಮ್ಮದೀಯನ ಎರಡು ಕೈಗಳನ್ನೂ ಹಿಡಿದು ನೆಲಕ್ಕೆ ಕೆಡಹಿ ಎದೆಯ ಮೇಲೆ ಕುಳಿತನು. ಸ್ವಲ್ಪಹೊತ್ತಿನೊಳಗಾಗಿ ಆ ವೃತ್ತಾಂತವು ಊರಲ್ಲೆಲ್ಲಾ ಹಬ್ಬಿ ಅನೇಕರು ಬಂದರು. ಪೋಲೀಸು ಅಧಿಕಾರಿಗಳೂ ಮುಂತಾಗಿ ಬಂದು ಆ ದುರುಳನನ್ನು ನಿರ್ಬಂಧಿಸಿದರು. ವಿಚಾರಕ್ಕೆ ಗುರಿಪಡಿಸಿದರು. ಬಹು ದಿನಗಳವರೆಗೆ ವಿಚಾರ ನಡೆಯಿತು. ನಿಸ್ಸಹಾಯಕರಾಗಿ, ರೋಗ

ದಿಂದ ಹಾಸಿಗೆ ಹಿಡಿದು ಮಲಗಿದ್ದ ಸಾಧು ಸನ್ಯಾಸಿಯನ್ನು ಹಿಂಸಿಸಿದ ಆ ರಣಹೇಡಿ (ಅಬ್ದುಲ್ ರಷೀದ) ಯನ್ನು ಮಹಾ ಧರ್ಮವೀರನೋ ಎಂಬಂತೆ ಹೊಗಳಿ, ಮಹಮ್ಮದೀಯರನೇಕರು, ಅವನ ತಪ್ಪನ್ನು ಮುಚ್ಚಿಟ್ಟು ರಕ್ಷಿಸಲಿಕ್ಕಾಗಿ ಸಹಸ್ರಾರು ದ್ರವ್ಯವನ್ನು ನೀರಿನಂತೆ ವ್ಯಯಮಾಡಲು ಸಿದ್ಧರಾದರು. ಸುಪ್ರಸಿದ್ಧ ನ್ಯಾಯವಾದಿಗಳನೇಕರು, ಅವನ ಪರವಾಗಿ ವಾದಿಸಿದರು. ತಾನು ಧರ್ಮವೀರನೆಂದೂ, ತಾನು ಮಾಡಿದ ಧರ್ಮೋದ್ಧಾರ ಕಾರ್ಯಕ್ಕಾಗಿ ತನಗೆ ಸ್ವರ್ಗದ ಬಾಗಿಲು ತೆರೆದಿದೆಯೆಂದೂ ಬಹು ಬಗೆಯಿಂದ ಪೌರುಷವನ್ನು ಕೊಚ್ಚಿಕೊಂಡಿದ್ದ ಅಬ್ದುಲ್ ರಷೀದನು, ರಾಜದಂಡಕ್ಕೆ ಗುರಿಯಾಗಿ ವಿಚಾರಣೆಗೆ ಒಳಪಟ್ಟೊಡನೆಯೇ ಪ್ರಾಣಭಯದಿಂದ ಪೀಡಿತನಾಗಿ, ಬುದ್ಧಿಸ್ವಾಧೀನವಿಲ್ಲದವನಂತೆ ನಟಿಸಿದನು. ಅವನ ಪರ ನ್ಯಾಯವಾದಿಗಳು ಅವನು ಬುದ್ಧಿಭ್ರಮಣೆಯಿಂದ ಇರುವನೆಂಬುದನ್ನು ಸ್ಥಾಪಿಸಲು ವಿಶ್ವಪ್ರಯತ್ನಮಾಡಿದರು. ನಿರಪರಾಧಿಯಾದ ಅವನನ್ನು ಎಲ್ಲರೂ ಸತ್ತುಗಟ್ಟಿ ಹಿಡಿದು ಆರೋಪವನ್ನು ಹೋರಿಸಿದರೆಂಬುದನ್ನು ಸ್ಥಾಪಿಸಬೇಕೆಂದು ನೂರಾರುಮಂದಿ ಸಾಕ್ಷಿಗಳನ್ನು ಸಿದ್ಧಗೊಳಿಸಿದರು. ಏನಾದರೇನು ! ಲಾಹೋರ್ ಹೈಕೋರ್ಟಿನಲ್ಲಿ ಅವನಿಗೆ ಮರಣದಂಡನೆಯ ಶಿಕ್ಷೆಯು ವಿಧಿಸಲ್ಪಟ್ಟಿತು. ಅದಕ್ಕೆ ವಿರುದ್ಧವಾಗಿ, ವಿಲಾಯತಿಯಲ್ಲಿನ ಪ್ರಿವಿ ಕೌನ್ಸಿಲ್‌ಗೆ ಅಪ್ಪೀಲು ನಡೆಯಿತು. ದುರ್ದೈವದಿಂದ ಅಲ್ಲೂ ಅದೇ ನಿರ್ಧರವಾಯಿತು. ವೀರಸ್ವರ್ಗವನ್ನು ಬಯಸಿ ಮಾಡಿದ ಮಹತ್ಕಾರ್ಯದಿಂದ ಪ್ರಾಪ್ತವಾಗಲುಳ್ಳ ಸದ್ಗತಿಯು ಐಹಿಕ ಬುದ್ಧಿಯ ಜನರ ಪ್ರಯತ್ನದಿಂದ ದೂರವಾಯಿತೇ! ಕರ್ಮಾಧಿದೇವತೆಗಳು ಅಂಧರೇ! ಎಂತೂ ಕೊನೆಗೆ ಅಬ್ದುಲ್ ರಷೀದನಿಗೆ ಮರಣದಂಡನೆಯೇ ಸ್ಥಿರವೆಂದು ಗೊತ್ತಾಯಿತು. ಅಂತೆಯೇ ನವಂಬರು ಮಾಸದ ೧೪ ನೆಯ ದಿನದಲ್ಲಿ ಅವನು ಮರಣದಂಡನೆಯನ್ನು ಹೊಂದಿದನು. ಕಾಫರನನ್ನು ಕೊಂದು ಧರ್ಮೋದ್ಧಾರಮಾಡಬೇಕೆಂದು ಯತ್ನಿಸಿ ತನ್ಮೂಲಕ ದೇಹವನ್ನು ಬಲಿಯಾಗಿ ಕೊಟ್ಟ ಅವನ ಆತ್ಮವಾದರೂ ವೀರಸ್ವರ್ಗವನ್ನೇ ಹೊಂದಿರಬೇಕು!............ಬೇಕು! ಅಲ್ಲವೆ ! ಪ್ರಿಯವಾಚಕರೇ, ಈ ವಿಷಯದಲ್ಲಿ! ತಾವು ಸಂದೇಹಿಸುವಿರಾ !

# ಉಪಸಂಹಾರ

ಆಜನ್ಮವೂ ಧರ್ಮಸಂಗ್ರಹಣ ಕಾರ್ಯಕ್ಕಾಗಿಯೇ ಶ್ರಮಿಸಿದ ಶ್ರೀಯವರು, ತಮ್ಮ ಗಳಿತ ದೇಹವನ್ನೂ ಬಲಿಕೊಟ್ಟು ತ್ಯಾಗರೂಪೀ ಯಜ್ಞ ಕಾರ್ಯವನ್ನು ಸಂಪೂರ್ಣರೀತಿಯಿಂದ ಕೊನೆಗಾಣಿಸಿರುವರು. ಅವರ ಪವಿತ್ರಾತ್ಮವು ಭಾರತೀಯೋದ್ಧಾರಕ ವಿಷಯ ಸಂಗ್ರಹಣಕ್ಕಾಗಿಯೋ ಎಂಬಂತೆ ಪರಲೋಕಕ್ಕೆ ಪ್ರಯಾಣಮಾಡಿರಲು ಇತ್ತ ಭೌತಿಕ ಕಳೇಬರವನ್ನು ಅವರ ಲಕ್ಷಾಂತರಮಂದಿ ಅನುಯಾಯಿಗಳೂ ಭಕ್ತರೂ ನೆರೆದು ಮಹೋತ್ಸವದಿಂದ, ಪುಷ್ಪವೃಷ್ಟಿಯನ್ನು ಕರೆಯುತ್ತಾ ರುದ್ರಭೂಮಿಗೆ ಸಾಗಿಸಿ ಅಲ್ಲಿ ಶ್ರೀ ಗಂಧ ಕಾಷ್ಟ ಕರ್ಪೂರಾದಿ ದಹನ ಸಾಧನಗಳಿಂದ ಭಸ್ಮೀಕರಿಸಿದರು.

ದೇಹಧಾರಿಯಾದವನು ಎಂದಿದ್ದರೊಂದು ದಿನ ಸಾಯುವಿದ್ದರೆ ತೀರದು! ಆದರೆ ಜನ್ಮಾವಧಿ, ದೇಶೋದ್ಧಾರ ಧರ್ಮೋದ್ಧಾರಗಳಿಗಾಗಿ ದೇಹವನ್ನು ತೇಯ್ದು ದೇಶಮಾತೆಯ ಸಾಕಾರವಿಂದಕ್ಕೆ ಆಕೆಯಿಂದ ಪರಿಪೋಷಿತವಾದ ತನುವನ್ನು ಬಲಿದಾನವನ್ನಾಗಿ ಅರ್ಪಿಸುವ ಇಂತಹ ಮಹನೀಯರ ಜೀವಿತವೇ ಸಾರ್ಥಕವಾದುದಲ್ಲವೆ! ಅತ್ತ ಮಹಾತ್ಮರಲ್ಲನ ಹುಳುವಿನಂತೆ ಅನಾಮಧೇಯರಾಗಿ ಹುಟ್ಟಿ, ದಾಸ್ಯದಲ್ಲಿ-ತನುಮನಗಳನ್ನು ವಿಕ್ರಯಿಸುತ್ತಾ ಜೀವಿಸಿ, ಧರ್ಮಬಾಹಿರರಾಗಿ ಕೊನೆಗೊಂದು ದಿನ ನಿರ್ನಾಮರಾಗುವ ಅಸ್ಮದಾದಿಗಳ ಕೋಟ್ಯಾಂತರ ಸಂಖ್ಯೆಗೆ ಬದಲಾಗಿ ಭರತಮಾತೆಯ ಪುಣ್ಯಗರ್ಭವು ಇಂತಹ ಒಂದು ನೂರುಮಂದಿ ನರಶಾರ್ದೂಲರಿಗೆ ಜನ್ಮವಿತ್ತರೂ ಉತ್ತಮವೇ ಅಲ್ಲವೆ!-ಆಗಲಿ ಹಿಂದೂಗಳಾದ ನಾವು ಎಂದಿದ್ದರೂ ನಾಶವಾಗತಕ್ಕ ಅವರ ಪಾಂಚಭೌತಿಕ ದೇಹವಾಗಲೀ, ಅವಿನಾಶಿಯಾದ ಆತ್ಮನಾಗಲೀ ಕಣ್ಮರೆಯಾದುದಕ್ಕೆ ಚಿಂತಿಸಬೇಕಾದ ಪ್ರಕೃತವಿಲ್ಲ. ಪುನಃ ಭಾರತವರ್ಷದಲ್ಲೇ ಜನ್ಮವೆತ್ತುವಂತೆ ಅವರ ಪ್ರಾರ್ಥನವೇ ಇದೆಯಲ್ಲವೆ! ಆವರೆಗೆ, ಒಬ್ಬೊಬ್ಬ ಭಾರತೀಯನೂ ಅವರ ಆದರ್ಶಜೀವಿತದಲ್ಲಿ ತೋರ್ಪಟ್ಟ ನಿರಲಸಿಕೆ, ಧೈರ್ಯ, ಸಾಹಸ, ಉದಾರತೆ, ಬ್ರಹ್ಮತೇಜ-ಕ್ಷಾತ್ರತೇಜಗಳ ಐಕ್ಯ, ದೇಶಭಕ್ತಿ ಎಲ್ಲಕ್ಕೂ ಮೇಲಾಗಿ ಬ್ರಹ್ಮಚರ್ಯಪಾಲನೆ ಈ ಮುಂತಾದ ಕಲ್ಯಾಣಗುಣಗಳನ್ನು ಸಾಧ್ಯವಿರುವಷ್ಟು ಮಟ್ಟಿಗಾದರೂ ಆಚರಣೆಯಲ್ಲಿ ತಂದು ದೇಶಸೇವೆ ಧರ್ಮಸೇವೆಗಳನ್ನು ಮಾಡಲು ಶ್ರೀ ಪರಾತ್ಪರನು ಮನೋದಾರ್ಢ್ಯವನ್ನಿತ್ತು ಅನುಗ್ರಹಿಸಲಿ. ಶ್ರೀ ಸ್ವಾಮಿ ಶ್ರದ್ಧಾನಂದರೂ ತಮ್ಮ ಪ್ರೇಮಕ್ಕೆ ಪಾತ್ರವಾದ ಈ ಭಾರತಭೂಮಿಯ ಜನತೆಯ ಮೇಲೆ ಪರಿಪೂರ್ಣ ಅಭಿಮಾನವಿಟ್ಟು ಶೀಘ್ರಕಾಲದಲ್ಲೇ ಪುನಃ ಜನ್ಮಗ್ರಹಣ ಮಾಡಿ ದೇಶೋದ್ಧಾರ ಕಾರ್ಯಕ್ಕೆ ಸಿದ್ಧರಾಗಲಿ. **ತಥಾಸ್ತು.**

✤ ಶ್ರೀರಾಮ ಸಹಾಯಂ ✤

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸ ಪುಸ್ತಕಾವಳಿ)

**ಮುನ್ನುಡಿ: —**

ಶ್ರೀ ರುಕ್ಮಾಂಗದ ಮಹಾರಾಜನು ಏಕಾದಶೀ ಮಹಾವ್ರತವನ್ನು ಸಾಂಗವಾಗಿ ನೆರವೇರಿಸಿ ಹೆಸರುಗೊಂಡ ಮಹಾನುಭಾವನು. ಶ್ರೀಹರಿಯ ಪಾದಕಮಲಗಳಲ್ಲಿರಿಸಿದ ನಿಶ್ಚಲಚಿತ್ತದಿಂದ ಆಸ್ತಿಕಶಿರೋಮಣಿಯಾದ ಆ ರಾಜವರೇಣ್ಯನು ತನ್ನ ಆ ವ್ರತಪಾಲನೆಗೆ ಒದಗಿದ ದುರಂತ ವಿಘ್ನಗಳನ್ನೂ ಲಕ್ಷ್ಯಮಾಡದೆ ಧೈರ್ಯದಿಂದ ಎದುರಿಸಿ, ಕೊನೆಗೂ ಕೃತಕೃತ್ಯನಾದನು. ಇತರ ಸಾಮಾನ್ಯರಿಗೆ ಅಸಾಧ್ಯ-ಅತ್ಯಸಾಧ್ಯವೆಂಬ ರೀತಿಯಿಂದ ಕಾಮ-ಮೋಹಗಳನ್ನು ಜಯಿಸಿ. ತನ್ನ ಧರ್ಮವನ್ನು ಕಾಯ್ದುಕೊಂಡುದರಿಂದಲೇ ಆತನು ದಿವ್ಯತೇಜಃಪುಂಜವಾದ ಕೀರ್ತಿ ಶರೀರದಿಂದ ಈಗಲೂ ಪ್ರಶಂಸಾರ್ಹನಾಗಿದ್ದಾನೆ.

ಏಕಾದಶಿ ತಿಥಿಯು ಪ್ರತಿ ಶುಕ್ಲಪಕ್ಷ-ಕೃಷ್ಣಪಕ್ಷದ ಹನ್ನೊಂದನೆಯ ದಿನ ಬರುತ್ತದೆ. ದಶಮಿಯದಿನ ಏಕಭುಕ್ತ (ಒಂದೇಸಾರ ಊಟ) ಮಾಡಿ, ಏಕಾದಶಿಯದಿನ ನಿರಾಹಾರವಾಗಿದ್ದು, ಆದಿನವೆಲ್ಲಾ ಸರ್ವೋತ್ತಮ ದೈವವಾದ ಶ್ರೀ ವಿಷ್ಣುಮೂರ್ತಿಯ ಪೂಜಾರಾಧನೆಗಳಲ್ಲಿ ತೊಡಗಿದ್ದು-ಆತನ ಪಾವನ ಸ್ತೋತ್ರಗಳನ್ನು ಹೇಳಿಕೊಳ್ಳುತ್ತಾ ಕಳೆದು, ರಾತ್ರಿಯಲ್ಲೂ ನಿದ್ರಿಸದೆ ಹರಿಕೀರ್ತನೆಗಳನ್ನು ಪಠಿಸುತ್ತಾ ಜಾಗರಮಾಡಿಕೊಂಡಿದ್ದು, ಮಾರನೆಯ ದ್ವಾದಶಿಯದಿನ ಪ್ರಾತಃಕಾಲದಲ್ಲೇ ಸ್ನಾನಾಹ್ನಿಕಗಳನ್ನು ತೀರಿಸಿಕೊಂಡು ಶ್ರೀವರನ ಪಾದಕಮಲಗಳನ್ನು ಪರಿಶುದ್ಧ ಜಲದಿಂದ ವಿಧ್ಯುಕ್ತವಾಗಿ ಅಭಿಷೇಕಿಸಿ, ಪರಿಮಳ ಗಂಧ ಪುಷ್ಪಾಕ್ಷತೆ ಧೂಪದೀಪಾದಿಗಳಿಂದ ಅರ್ಚಿಸಿ, ನೈವೇದ್ಯಾದಿಗಳನ್ನು ಸಮರ್ಪಿಸಬೇಕು. ಅಲ್ಲದೆ ಅತಿಥಿ ಅಭ್ಯಾಗತರಿಗೆ ಅನ್ನದಾನ ಪೂರ್ವಕ ತಾನೂ ಮಿತಹಾರ ಸ್ವೀಕಾರ ಮಾಡಿ, ಆದಿನವೂ ದಶಮಿಯಂತೆಯೇ ಏಕಭುಕ್ತ ಏಕಶಯ್ಯೆಯಿಂದ ನಿಷ್ಠ

ಸಾಗಿರಬೇಕೆಂಬುದೇ ಏಕಾದಶಿಯ ವ್ರತವಿಧಿಯು. ನಿಷ್ಠವೈಷ್ಣವ ಸಂಪ್ರದಾಯಸ್ಥರು ಈ ವ್ರತವನ್ನು ಹೀಗೆ ಸಾಂಗವಾಗಿ ನೆರವೇರಿಸುವ ಪದ್ಧತಿಯು ಈಗಲೂ ಉಂಟು. ಈ ಶ್ರೇಷ್ಠವ್ರತದ ಮಹಿಮೆಯನ್ನೂ ಇದನ್ನು ಆಚರಿಸುವುದರ ಅಂತರ್ಯೋದ್ದೇಶಗಳನ್ನೂ ಅದರಿಂದ ಪ್ರಾಪ್ತವಾಗುವ ದೈಹಿಕ ಮಾನಸಿಕ-ಅರ್ಥಾತ್ ಐಹಿಕ ಪಾರತ್ರಿಕ ಫಲಪ್ರಯೋಜನಗಳನ್ನೂ ಅರಿಯಲಾರದಿದ್ದವರು ಇವೆಲ್ಲವೂ ಕೆಲಸಕ್ಕೆ ಬಾರದ ಕಂತೆಯ ಕಥೆಗಳೆನ್ನಬಹುದು. ಮಹಾಮಹಿಮರಾದ ನಮ್ಮ ಪೂರ್ವಿಕರು ಏರ್ಪಡಿಸಿದ ಪದ್ಧತಿಗಳ ಅಂತರ್ಯ ರಹಸ್ಯಗಳೇನೆಂಬುದನ್ನು ಸ್ವತಃ ಯೋಚಿಸಲಾರದೆ, ಸಕಾರಣವಾಗಿ ತಿಳಿಸಿದರೂ ಒಪ್ಪದೆ ಇರುವವನ್ನು ಮೆಚ್ಚಿಸುವುದೂ ಮೆಚ್ಚಿಸಲೆತ್ನಿಸುವುದೂ ಅಸಾಧ್ಯಪ್ರಕರಣವು. ಆದುದರಿಂದ ಕುಚೇಷ್ಟೆ ಕುಯುಕ್ತಿನಿಪುಣರ ದೂಷಣೆ ತಿರಸ್ಕಾರಗಳ ಕಡೆಗೆ ಲಕ್ಷ್ಯವಿಡದೆ ಮಹಾಜ್ಞಾನಿಗಳಾದ ನಮ್ಮ ಪೂರ್ವಿಕರು, ಈ ಏಕಾದಶೀ ವ್ರತವನ್ನು ಏರ್ಪಡಿಸಿದುದರಲ್ಲಿ ಇಟ್ಟುಕೊಂಡಿದ್ದ ಮಹದುದ್ದೇಶವೇನೆಂಬುದನ್ನು ಕುರಿತು-ಸತ್ಯ ವ್ರತಪಾಲನೆಗಾಗಿ ತನ್ನ ವಂಶಾಂಕುರನಾಗಿದ್ದ ಏಕಮಾತ್ರ ಪುತ್ರನನ್ನು ಸಹ ಸ್ವಹಸ್ತದಿಂದ ವಧಿಸಲು ಸಿದ್ಧನಾದ ಶ್ರೀ ರುಕ್ಮಾಂಗದ ಮಹಾರಾಜನ ಚರಿತ್ರೆಯ ಮೂಲಕ ಪ್ರಸ್ತಾಪಿಸಲೆಳಸುತ್ತೇವೆ. ಕರ್ಣಾಟಕ ಮಹಾಜನರು ಯಥಾಪೂರ್ವ ಅಭಿಮಾನದಿಂದ ಈ ಚರಿತ್ರೆಯನ್ನೂ ಸ್ವೀಕರಿಸಿ, ತನ್ಮೂಲಕ ಗ್ರಂಥಮಾಲೆಯನ್ನು ಪ್ರೋತ್ಸಾಹಿಸಬೇಕೆಂದು ಪ್ರಾರ್ಥಿಸುತ್ತೇವೆ.

ಬೆಂಗಳೂರು ನಗರ.<br>ತಾ|| ೨೫—೧—೧೯೨೮

ಇತಿ ಸುಜನ ವಿಧೇಯ,<br>**ಯಂ. ರಾಮರಾವ್.**

---

ಸುಬೋಧ ಮುದ್ರಣಾಲಯ, ಬೆಂಗಳೂರು ನಗರ —೧,೦೦೦—೧೯೨೮.

॥ ಶ್ರೀರಾಮಸಹಾಯಂ ॥

ಅ ಪ್ರ ತಿ ಮ  ವಿ ಷ್ಣು ಭ ಕ್ತ

# ಶ್ರೀ ರುಕ್ಮಾಂಗದ ಮಹಾರಾಜ



## ಅಧ್ಯಾಯ ೧  " ಅಪೂರ್ವ ಪುಷ್ಪಹಾರ "

ನಮ್ಮ ಮಾತೃಭೂಮಿಯಾದ ಈ ಭರತ ಖಂಡವನ್ನು ಪಾಲಿಸಿದ ಧರಾರಮಣರಲ್ಲಿ ಸೂರ್ಯವಂಶ-ಚಂದ್ರವಂಶಗಳ ರಾಜರು ಸುಪ್ರಸಿದ್ಧರು. ಈ ಮಹಾವಂಶಗಳಲ್ಲಿ ಉದ್ಭವಿಸಿದ ರಾಜರಲ್ಲೊಬ್ಬೊಬ್ಬರೂ ಒಂದಲ್ಲ ಒಂದು ಮಹತ್ಕಾರ್ಯವನ್ನು ಸಾಧಿಸಿ ತಮ್ಮ ಹೆಸರನ್ನು ಆಚಂದ್ರಾರ್ಕ ಸ್ಥಿರಗೊಳಿಸಿದ್ದಾರೆ. ಸೂರ್ಯವಂಶೋದ್ಭವರಾದ ರಾಜರಲ್ಲಿ ಒಬ್ಬಾತನು ಸತ್ಯವಾಕ್ಯ ಪರಿಪಾಲನೆಗಾಗಿ ರಾಜ್ಯಕೋಶಗಳನ್ನು ತೆತ್ತು, ಹೆಂಡಿರು ಮಕ್ಕಳನ್ನು ಮಾರಿ, ಕೊನೆಗೆ ತನ್ನ ದೇಹವನ್ನು ಸಹ ಚಾಂಡಾಲನಿಗೆ ವಿಕ್ರಯಿಸಿ ಹೆಸರುಗೊಂಡನು. ಮತ್ತೊಬ್ಬಾತನು ಅಖಂಡ ತಪಶ್ಚರ್ಯದಿಂದ ಬ್ರಹ್ಮರುದ್ರಾದಿಗಳನ್ನು ಮೆಚ್ಚಿಸಿ ಲೋಕಪಾವನೆ ಗಂಗಾದೇವಿಯನ್ನು ಭೂಲೋಕದಲ್ಲಿ ಪ್ರವಹಿಸಗೊಡಿಸಿ ಕೀರ್ತಿಶರೀರಿಯಾದನು. ಬೇರೊಬ್ಬ ರಾಜವರೇಣ್ಯನು ಪಿತೃವಾಕ್ಯ ಪರಿಪಾಲನೆಗಾಗಿ ಕೈಗೆ ಬಂದ ರಾಜ್ಯಭೋಗಾದಿಗಳನ್ನು ತ್ಯಜಿಸಿ, ತುಂಬು ಯೌವನದಲ್ಲಿ ನಾರು ಬಟ್ಟೆಯನ್ನುಟ್ಟು ಕಾಡುಪೋಗಿಯಂತೆ ಹದಿನಾಲ್ಕುವರ್ಷ ವನವಾಸಮಾಡಿದನು. ಚಂದ್ರವಂಶೋದ್ಭವರಲ್ಲೂ ಹೀಗೆಯೇ! ಒಬ್ಬ ಮಹಾಮಹಿಮನು ತನ್ನ ತಂದೆಗೆ ತೃಪ್ತಿಯನ್ನುಂಟುಮಾಡಬೇಕೆಂದು ಆಜನ್ಮ ಬ್ರಹ್ಮಚರ್ಯವ್ರತಧಾರಣೆ ಮಾಡಿ, ರಾಜ್ಯಭೋಗಾದಿಗಳನ್ನು ತೃಣಕ್ಕೆ ಸಮವೆಂದು ಭಾವಿಸಿದನು.

ಮತ್ತೊಬ್ಬ ಪುಣ್ಯಾತ್ಮನು ಕ್ಷಮಾಭರಣಶೀಲನಾಗಿ, ದಾಯಾದಿಗಳಿಂದ ಸಹಿಸಲಶಕ್ಯವೆನಿಸುವಂತೆ ಮೇಲೆ ಮೇಲೆ ಬಂದೊದಗುತ್ತಿದ್ದ ವಿಚಿತ್ರ ಹಿಂಸೆಗಳನ್ನೂ ತಾಳಿಕೊಂಡು ಅಜಾತಶತ್ರುವೆಂಬ ಲೋಕೋತ್ತರ ಬಿರುದಿನಿಂದ ವಿಭೂಷಿತನಾದನು. ನಮ್ಮ ಕಥಾನಾಯಕನೂ ಸೂರ್ಯವಂಶವನ್ನಲಂಕರಿಸಿದ ರಾಜೋತ್ತಮರಲ್ಲಿ ಒಬ್ಬನು. ಆತನ ರಾಜಧಾನಿಯು ಅಯೋಧ್ಯಾನಗರವು.

ರುಕ್ಮಾಂಗದ ರಾಜೇಂದ್ರನ ಪಾಲನೆಗೊಳಪಟ್ಟ ಅಯೋಧ್ಯಾ ನಗರಿಯ ಸಾಮ್ರಾಜ್ಯವು ಸರ್ವಸಂಪತ್ಪರಿಪೂರ್ಣವಾಗಿ ಶೋಭಿಸುತ್ತಿರುವುದು. ಆ ದೇಶದ ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರರೆಂಬ ಚಾತುರ್ವರ್ಣದವರೂ ವಿಧ್ಯುಕ್ತ ಧರ್ಮಗಳನ್ನು ಮೀರದೆ ನಡೆಯುತ್ತಿರುವರು. ಬ್ರಾಹ್ಮಣರು ವೇದವೇದಾಂಗ ಪಾರಂಗತರು, ಷಟ್ಕರ್ಮನಿರತರು, ಸರ್ವದಾ ಸತ್ಕಾರ್ಯದಲ್ಲೇ ಪ್ರವೃತ್ತಿಯುಳ್ಳವರು, ಸಾಧುವರ್ಯರು. ಕ್ಷತ್ರಿಯರು ಶೌರ್ಯ ಸಾಹಸವಿಜೃಂಭಿತರು, ಯುದ್ಧವಿದ್ಯಾ ವಿಶಾರದರು, ಅನ್ಯಾಯ ಅಸತ್ಯ ಮಾರ್ಗಗಳಿಂದ ಪ್ರಜಾಪೀಡಿತರಾದ ದುಷ್ಟರನ್ನು ನಿಗ್ರಹಿಸಿ ಅಶಕ್ತರಾದ ಶಿಷ್ಟಪ್ರಜೆಗಳನ್ನು ಪರಿಪಾಲನೆ ಮಾಡುವುದರಲ್ಲಿ ಎಂದೂ ಬೇಸರಗೊಳ್ಳದವರು; ನ್ಯಾಯಮಾರ್ಗವನ್ನು ತಪ್ಪದೆ ಅನುಸರಿಸುವವರು. ವೈಶ್ಯರು, ಕನಕ ನವರತ್ನಾಭರಣಗಳು ದವಸ ಧಾನ್ಯಗಳು ಮುಂತಾದುವುಗಳಲ್ಲಿ ಪರದೇಶಗಳೊಂದಿಗೆ ನಡೆಸುವ ವ್ಯಾಪಾರದಿಂದಲೂ, ಭೂವ್ಯವಸಾಯ ಪಶುಪಾಲನೆಗಳಿಂದಲೂ ಅಗಣಿತ ದ್ರವ್ಯ ಸಂಪತ್ತನ್ನು ಗಳಿಸಿ ಆ ತಮ್ಮ ಐಶ್ವರ್ಯವನ್ನು ಛತ್ರ ಮಠ ದೇವಸ್ಥಾನ ವಿದ್ಯಾಶಾಲೆ ವೈದ್ಯಶಾಲೆ ಅನಾಥಾಲಯ ಮುಂತಾದುವುಗಳನ್ನು ಸ್ಥಾಪಿಸುವುದರ ಮೂಲಕವೂ, ಸಾಲುಮರ ತೋಪುಗಳನ್ನು ಹಾಕಿಸುವುದು, ಅರವಟ್ಟಿಗೆಗಳನ್ನು ಇಡಿಸುವುದು ಮುಂತಾದುವುಗಳ ಮೂಲಕವೂ ಸಾರ್ಥಕಪಡಿಸುತ್ತಿರುವರು. ಇನ್ನು ಚತುರ್ಥವರ್ಣದವರು ಮೇಲಿನ ಮೂವರು ದ್ವಿಜವರ್ಗದವರ ಸೇವೆಯಲ್ಲೂ ಪಶುಪಾಲನೆ ಮುಂತಾದ ಕಾರ್ಯಗಳಲ್ಲೂ ನಿರತರಾಗಿ ದೇಶದ ಸಂಪದಭಿವೃದ್ಧಿಗೆ ಸಹಾಯಕರಾಗಿರುವರು. ದೇಶದಲ್ಲಿ ಅಂತಃಕಲಹ, ಪರಸ್ಪರ ಅಸೂಯೆ, ಗೋಬ್ರಾಹ್ಮಣಾಪಮಾನ, ಪಶುವಧೆ, ನಾಸ್ತಿಕತೆ ಮುಂತಾ

ದುವು ಇಣಿಕಿನೋಡಲೂ ಆಸ್ಪದವಿರಲಿಲ್ಲ. ಎಲ್ಲಿ ನೋಡಿದರೂ ತಿಳಿನೀರಿನಿಂದ ತುಂಬಿದ ಕೆರೆ ಕಟ್ಟೆ ಕಾಲುವೆಗಳೂ, ಪುಷ್ಪ ಫಲಗಳ ಭಾರದಿಂದ ಜಗ್ಗುತ್ತಿರುವ ಪೈರು ಪಚ್ಚೆ-ಫಲವೃಕ್ಷಾದಿಗಳೂ, ಕೊಡ ಹಾಲು ಕರೆವ ಗೋಮಹಿಷಗಳೂ ನೇತ್ರಾನಂದಕರವಾಗಿರುವುವು. ಹೀಗೆ ಸಕಲ ವಿಧ ಸೌಭಾಗ್ಯಗಳಿಗೂ ತೌರುಮನೆಯೆಂಬಂತೆ ಕಂಗೊಳಿಸುತ್ತಿದ್ದ ಆ ದೇಶವನ್ನು ಧರ್ಮಾತ್ಮನಾದ ರುಕ್ಮಾಂಗದ ಮಹಾರಾಜನು ಧರ್ಮದಿಂದ ಪರಿಪಾಲನೆ ಮಾಡುತ್ತಿದ್ದನು. ಅಕ್ಕಟಾ, ದುರ್ದೈವಿಗಳಾದ ಭಾರತೀಯರು ಮತ್ತೊಂದು ವೇಳೆ ಅಂತಹ ಧರ್ಮಪಾಲನೆಯನ್ನೂ-ದೇಶದಲ್ಲಿ ಅಂತಹ ಸೌಭಾಗ್ಯ ಸ್ಥಿತಿಯನ್ನೂ ನೋಡುವ ಭಾಗ್ಯವು ಲಭಿಸೀತೇ!

ಸಮಸ್ತ ಸಲ್ಲಕ್ಷಣಗಳಿಂದಲೂ ಕೂಡಿ, ಸಾಕ್ಷಾಲ್ಲಕ್ಷ್ಮೀದೇವಿಯೋ ಎಂಬಂತೆ ಮಂಗಳಕರಳಾಗಿದ್ದ ಸಂಧ್ಯಾವಳೀದೇವಿಯೆಂಬ ಧರ್ಮಪತ್ನಿಯಿಂದ ಆ ರಾಜನ ಗೃಹಸ್ಥಧರ್ಮವು ಪಾಲಿಸಲ್ಪಡುತ್ತಿದ್ದಿತು. ಆತನ ವಿಶಾಲವಾದ ಅರಮನೆಯು ಆ ಮಹಿಳೆಯ ಪಾತಿವ್ರತ್ಯ, ದಯಾರ್ದ್ರಹೃದಯ, ಪಾವನ ಚರಿತ್ರೆ, ಧಾರ್ಮಿಕ ನಡತೆ, ಗೋಬ್ರಾಹ್ಮಣ ಸೇವೆ, ದೇವ-ದೇವತಾರಾಧನೆ, ಅತಿಥಿ ಅಭ್ಯಾಗತ ಸತ್ಕಾರ ಮುಂತಾದ ಕಲ್ಯಾಣಗುಣಗಳೆಂಬ ರತ್ನಜ್ಯೋತಿಗಳಿಂದ ಬೆಳಗುತ್ತಿರುವುದು. ಯುಕ್ತ ಗೃಹಸ್ಥಧರ್ಮಪಾಲನೆಯಿಂದ ಲೋಕಯಾತ್ರೆಯನ್ನು ಸಾಗಿಸುತ್ತಿರಲು, ಕ್ಷೀರಸಮುದ್ರದಲ್ಲಿ ಶೀತಕಿರಣನುದಿಸಿದಂತೆ ಸಂಧ್ಯಾವಳೀದೇವಿಯ ಗರ್ಭಸುಧಾಂಬುಧಿಯಲ್ಲೂ ಒಬ್ಬ ಸುಕುಮಾರನು ಜನಿಸಿದನು. ರುಕ್ಮಾಂಗದ ಮಹಾರಾಜನು ತನ್ನ ಕುವರನಿಗೆ ಧರ್ಮಾಂಗದನೆಂದು ನಾಮಕರಣಮಾಡಿ, ದಾನ ಧರ್ಮಗಳಿಂದ ಸಕಲರನ್ನೂ ತೃಪ್ತಿಗೊಳಿಸಿ ಮಗನ ಬಾಲಲೀಲೆಗಳನ್ನು ನೋಡಿ ಪತ್ನಿಯೊಂದಿಗೆ ಆನಂದಿಸುತ್ತಾ ಸುಖದಿಂದ ರಾಜ್ಯಭಾರ ಮಾಡಿಕೊಂಡಿದ್ದನು.

ರುಕ್ಮಾಂಗದ ಮಹಾರಾಜನು ರಸಿಕಶಿರೋಮಣಿಯು. ಭಗವಂತನ ವಿಚಿತ್ರ ಸೃಷ್ಟಿಯಲ್ಲಿನ ಅನೇಕ ವಸ್ತುಗಳು ಆತನ ಮನಸ್ಸನ್ನು ಸೂರೆಗೊಳ್ಳುವುವು. ಪ್ರಪಂಚವನ್ನು, ಅದ್ವಿತೀಯವಾದ-ಉಪಮಾನರಹಿತವಾದ ಕಾಂತಿಯಿಂದ ಬೆಳಗುವ ಪೌರ್ಣಿಮಾ ಚಂದ್ರಿಕೆ, ಕೋಕಿಲಾಲಾಪ, ಪಕ್ಷಿ

ಗಳ ಕಿಲಕಿಲ ನಿನಾದ, ವೃಕ್ಷಗಳ ಮೃದು ಮಧುರವಾದ ಎಳೆಯ ಚಿಗುರು ಗಳು, ಪುಷ್ಪ ಸೌರಭಯುಕ್ತವಾದ ತಂಗಾಳಿ, ಪ್ರಾತಃಕಾಲದ ಮೃದೂಷ್ಣದ ಸೂರ್ಯಕಿರಣಗಳು, ದಿವ್ಯ ಪರಿಮಳಯುಕ್ತವೂ ವಿವಿಧ ವರ್ಣರಂಜಿತವೂ ಆದ ಅಸಂಖ್ಯ ಪುಷ್ಪಜಾತಿಗಳು, ನಸುಗಾಳಿಗೂ ತಲೆಬಾಗುತ್ತಾ ಚಲಿಸುತ್ತಿರುವ-ಪಚ್ಚೆಯ ಹಾಸಿಗೆಯೋ ಎಂಬಂತೆ ಕಣ್ಣಿಗೆ ತಂಪಾದ ನೋಟವನ್ನು ಪ್ರಸಾದಿಸುತ್ತಿರುವ ಗರಿಕೆ ಹುಲ್ಲಿನ ಮೈದಾನ, ಶಿಶುಗಳ ಸುನೀಲವಾದ ಪುಟ್ಟ ಕಣ್ಣುಗಳಲ್ಲಿ ತೋರಿಬರುವ ನಿಷ್ಕಲ್ಮಷವಾದ ನೋಟ,-ಅಂತಹನೋಟದೊಂದಿಗೆ ಬೆರೆದ ಮಂದಹಾಸವೂ-ಮಾಂಸುಲವೂ ಆದ ಅವರ ಮುಖ ಈ ಮುಂತಾದ ಅನೇಕಾನೇಕ ವಸ್ತುಗಳಲ್ಲೊಂದೊಂದೂ ಅನೇಕಾರ್ಥಗಳನ್ನುಂಟಾಗಿ ಆತನ ಕಣ್ಣಿಗೆ ಗೋಚರಿಸುವುವು. ರಾಜೇಂದ್ರನು ಒಂದೊಂದನ್ನೂ ನಟ್ಟದೃಷ್ಟಿಯಿಂದ ನೋಡಿ, ಆ ಭಾವಪೂರ್ಣ ಸೌಂದರ್ಯದ ಹಿಂದಡಗಿದ್ದ ಭಗವಚ್ಚೈತನ್ಯದ ಚಿತ್ಪ್ರಕಾಶವನ್ನು ತನ್ನ ಜ್ಞಾನ ಚಕ್ಷುವಿನಿಂದ ಕಂಡು ಮಹದಾನಂದ ಮಗ್ನನಾಗುವನು. ನೋಡಿನೋಡಿದಂತೆ ಆತನ ಅಂತರ್ದೃಷ್ಟಿಯ ದಿಗಂತವು ವಿಸ್ತಾರವಾಗುತ್ತಾ ಹೋಗುವುದು. ನೋಡಿನೋಡಿದಂತೆ ಒಂದೊಂದು ವಸ್ತುವೂ ಹೊಸ ಹೊಸ ರೂಪು-ಹೊಸ ಹೊಸ ಭಾವಗಳನ್ನು ಪ್ರದರ್ಶಿಸುತ್ತಿರುವಂತೆ ಕಾಣುವುದು. ಹೀಗೆ ಪ್ರಕೃತಿ ಸೌಂದರ್ಯ ವೀಕ್ಷಣೆಯಲ್ಲಿ ಚತುರನಾದ ಆ ರಾಜವರೇಣ್ಯನು ತನ್ನ ರಾಜಧಾನಿಯಲ್ಲಿ ಒಂದು ಪುಷ್ಪ ವನವನ್ನು ಸೃಷ್ಟಿಸಿದ್ದನು. ಅದರಲ್ಲಿ ಪ್ರಪಂಚದ ಪಂಚವಲಯುಗಳಲ್ಲಿ ಬೆಳೆವ ವಿವಿಧ ವೃಕ್ಷ ಲತಾದಿ ಜಾತಿಗಳನ್ನೂ ತರಿಸಿ ಅವವುಗಳಿಗೆ ಯೋಗ್ಯವೆನ್ನಿಸುವ ಪ್ರಕೃತಿಸ್ಥಿತಿ-ಗೊಬ್ಬರ ಗೋಡುಗಳನ್ನೊದಗಿಸಿ ಕಾಪಾಡಿ ಬೆಳೆಯಿಸಲು ತಕ್ಕ ಏರ್ಪಾಡುಗಳನ್ನು ಮಾಡಿದ್ದನು. ಆತನ ಆ ವನದಲ್ಲಿ ಇತರ ಅನೇಕ ಜಾತಿಯ ವಿಚಿತ್ರ ಹೂಗಿಡಬಳ್ಳಿಗಳಲ್ಲದೆ, ಮೊಲೆಮಲ್ಲಿಗೆ ಶಾವಂತಿಗೆ ಇರವಂತಿಗೆ ಕುಮುದಕಲ್ಹಾರ, ಪಾರಿಜಾತ ಸಂಪಿಗೆ, ಜಾಜೆ ಪಾದರಿ ಕೆಂದಾವರೆ ಬಿಳಿದಾವರೆ ಸುಗಂಧರಾಜ ಮುಂತಾದ ಸುವಾಸಿತ ಪುಷ್ಪಗಳು ಕಡುಸೊಂಪಾಗಿ ಬೆಳೆದು ಕಣ್ಣುಗಳಿಗೆ ಹಬ್ಬವನ್ನುಂಟುಮಾಡುತ್ತಿದ್ದುವು. ವಿವಿಧ ವರ್ಣರಂಜಿತವೂ ಬಗೆಬಗೆಯ ಪರಿಮಳದಿಂದ ಸುಮನೋಹರವೂ ಆದ

ಆ ದಿವ್ಯ ಪುಷ್ಪಗಳಿಂದ ನಿಬಿಡವಾದ ಆ ಉದ್ಯಾನದಲ್ಲಿ ರಾಜನು ತನ್ನ ರಾಣಿಯೊಂದಿಗೂ ಮಗುವಾದ ಧರ್ಮಾಂಗದನೊಂದಿಗೂ ಪ್ರಾತಃಕಾಲ ಸಾಯಂಕಾಲಗಳಲ್ಲಿ ವಿಹರಿಸುತ್ತಾ ಆನಂದಿಸುವನು. ಮಹಾರಾಜನ ಪ್ರೇಮಕ್ಕೆ ಪಾತ್ರವಾಗಿದ್ದ ಆ ಉದ್ಯಾನದಲ್ಲಿನ ಪುಷ್ಪಗಳನ್ನು ಯಾರೂ ಕಿತ್ತುಕೊಂಡೊಯ್ಯದಂತೆ ರಾಜದೂತರು ಅಹರ್ನಿಶಿ ಬಹು ಜಾಗರೂಕತೆಯಿಂದ ನೋಡಿಕೊಳ್ಳುತ್ತಿದ್ದರು.

ಒಂದಾನೊಂದು ದಿನ ಪ್ರಾತಃಕಾಲ ರಾಜನು ತನ್ನ ಪುಷ್ಪೋದ್ಯಾನವನ್ನು ಸಂದರ್ಶಿಸಿ ಅರಮನೆಗೆ ಬಂದು ಸ್ನಾನಾದಿಗಳನ್ನು ಮುಗಿಸಿಕೊಂಡು, ದಿವ್ಯ ವಸ್ತ್ರಾಭರಣವಿಭೂಷಿತನಾಗಿ ರಾಜಾಸ್ಥಾನಕ್ಕೆ ಬಂದನು. ಆವೇಳೆಗೆ ವನಪಾಲಕರೂ, ನಿತ್ಯದ ಸರದಿಯಂತೆ ಬಗೆಬಗೆಯ ಪುಷ್ಪ ಹಾರ-ಗುಚ್ಛಗಳನ್ನು ಕಟ್ಟಿ ಸಿದ್ಧಪಡಿಸಿಕೊಂಡು ತಂದೊಪ್ಪಿಸಿದರು. ಸಿಂಹಾಸನಾಸೀನನಾದ ರುಕ್ಮಾಂಗದ ಮಹಾರಾಜನಿಗೆ ಮಂತ್ರಿ ಸಾಮಂತರು ಆ ಹಾರ-ಗುಚ್ಛಗಳನ್ನು ಒಪ್ಪಿಸಬೇಕೆಂಬಷ್ಟರೊಳಗೆ ಸಭಾದ್ವಾರ ಪ್ರದೇಶದಲ್ಲಿ ನಾರದ ಮಹರ್ಷಿಗಳು ದಯಮಾಡಿಸಿದ್ದಾರೆಂಬ ವರ್ತಮಾನವನ್ನು ದೂತನು ತಂದನು. ಒಡನೆ ರಾಜನು ಶ್ರದ್ಧಾಭಕ್ತಿಯುತನಾಗಿ ಸಿಂಹಾಸನದಿಂದ ಕೆಳಕ್ಕಿಳಿದು ನಿಂತುಕೊಂಡು ಆ ದೇವರ್ಷಿವರ್ಯರನ್ನು ಉಚಿತ ಮರ್ಯಾದೆಯಿಂದ ಒಳಕ್ಕೆ ಕರೆತರುವಂತೆ ಮಂತ್ರಿಯನ್ನು ಕಳುಹಿಸಿದನು. ಮಂತ್ರಿಯೊಂದಿಗೆ ಒಳಕ್ಕೆ ಬಿಜಮಾಡಿದ ಆ ದೇವಮುನಿಗೆ ರಾಜನು ಆ ಪುಷ್ಪಹಾರವನ್ನೂ ಪುಷ್ಪಗುಚ್ಛವನ್ನೂ ಸಮರ್ಪಿಸಿ ಪಾದಾಭಿವಾದನಮಾಡಿದನು. ನಾರದಮಹರ್ಷಿಗಳು ಆ ಪುಷ್ಪಗಳ ಅಪೂರ್ವ ಸೌರಭಾತಿಶಯಕ್ಕಾಗಿ ಪರಮಾನಂದಗೊಂಡು, ಅವುಗಳನ್ನು ಎಲ್ಲಿಂದ ತರಿಸಿದೆಯೆಂದು ರಾಜನನ್ನು ಪ್ರಶ್ನಿಸಿದರು. ರುಕ್ಮಾಂಗದ ರಾಜನು ಅವು ತನ್ನ ಉದ್ಯಾನದಲ್ಲೇ ಬೆಳೆದುವುಗಳೆಂದು ತಿಳಿಸಿದುದಲ್ಲದೆ, ಅವರನ್ನೂ ಕರೆದುಕೊಂಡು ತನ್ನ ಪುಷ್ಪೋದ್ಯಾನಕ್ಕೆ ನಡೆದು ವಿವಿಧ ಪುಷ್ಪ ಜಾತಿಗಳನ್ನು ಅವರಿಗೆ ತೋರಿಸಿ, ಅಲ್ಲಿರುವವುಗಳಲ್ಲದೆ, ಬೇರಾವಜಾತಿಯಾದರೂ ಎಲ್ಲಾದರೂ ಇದ್ದರೆ ತಿಳಿಸಬೇಕೆಂದೂ ತ್ರಿಲೋಕಸಂಚಾರಿಗಳಾದ ಅವರನ್ನು ಕೇಳಿಕೊಂಡನು. ಅವುಗಳನ್ನು ಕಂಡ ನಾರದರು ''ರಾಜೇಂದ್ರಾ ಅತಿಶಯಪ್ರೇಮ ಪೂರ್ವಕ

ವಾಗಿ ನೀನು ಬೆಳೆಸಿರುವ ಈ ಪುಷ್ಪಗಳಿಗೆ ಸಮಾನವಾದುವುಗಳನ್ನು ದೇವೇಂದ್ರನ ನಂದನ ವನದಲ್ಲೂ ನಾನು ನೋಡಲಿಲ್ಲ. ಹೆಚ್ಚೇನು! ತ್ರಿಲೋಕದಲ್ಲೆಲ್ಲೂ ಕಾಣೆ! ನೀನು ಇವುಗಳನ್ನು ಇಷ್ಟು ಸೌಂದರ್ಯ ಯುಕ್ತವಾಗುವಂತೆ ಸೊಂಪಾಗಿಯೂ, ಸುವಾಸಿತವಾಗುವಂತೆಯೂ ಬೆಳೆಸಿದ ಕೌಶಲವು ಹೊಗಳತಕ್ಕುದಾಗಿದೆ. ಆದರೆ ಈ ಸಂದರ್ಭದಲ್ಲಿ ನಿನಗೆ ಒಂದು ಹಿತವಾಕ್ಯವನ್ನು ಹೇಳುವೆನು ಕೇಳು. ಈ ಪುಷ್ಪ ಸಮೂಹವನ್ನು ನಿನ್ನ ಚಕ್ಷುರಿಂದ್ರಿಯ ಘ್ರಾಣೇಂದ್ರಿಯುಗಳ ತೃಪ್ತಿಗಾಗಿ ಎಂದು ಮಾತ್ರ ಬೆಳೆಯಿಸತೊಡಗುವೆಯಾದರೆ ಆದರಿಂದ ನಿನ್ನಲ್ಲಿ ಹೆಮ್ಮೆಯೂ ಸ್ವಾರ್ಥತೆಯೂ ಉದಯಿಸಲು ಅವಕಾಶವಿರುವುದು. ಸ್ವಾರ್ಥತೆ ದಂಭ ಅಹಂಕಾರಗಳು ಆತ್ಮನಾಶಕಸಾಮಗ್ರಿಗಳೆಂಬುದನ್ನು ಮರೆಯಬೇಡ. ಆದುದರಿಂದ ಪ್ರಕೃತಿ ದೇವತೆಯು ಪ್ರಸಾದಿಸುವ ಪದಾರ್ಥಗಳಲ್ಲೆಲ್ಲಾ ಸುಂದರ ತರ-ಪವಿತ್ರತಮ ವಸ್ತುಗಳಾದ ಈ ಪುಷ್ಪಗಳನ್ನು ಶ್ರೀವರನ ಪಾದಕಮಲಾರ್ಚನೆಗೆ ಉಪಯೋಗಿಸುವುದನ್ನು ಕಲಿ. ಆದರಿಂದ ನಿನ್ನಲ್ಲಿ ಶ್ರದ್ಧಾಭಕ್ತಿಗಳು ಬೆಳೆಯುವವಲ್ಲದೆ ನನ್ನವು-ನಾನು ಬೆಳೆಯಿಸಿದುವು ಎಂಬ ಸ್ವಾರ್ಥತಾ ಪೂರ್ಣ ಅಭಿಮಾನವು ಕಡಮೆಯಾಗುತ್ತಾ ಪುಣ್ಯಸಾಧನೆಯಾಗುವುದು; ಅಲ್ಲದೆ ಉತ್ತರೋತ್ತರ ಶ್ರೇಯಸ್ಸೂ ಉಂಟು" ಎಂದು ಹೇಳಿ ಹರಿಪಾದಧ್ಯಾನಪೂರ್ವಕ ವೀಣಾವಾದನ ಮಾಡುತ್ತಾ ನಾರದರು ಹೊರಟುಹೋದರು.

ನಾರದ ಮಹರ್ಷಿಗಳ ಸಂದೇಶವು ರುಕ್ಮಾಂಗದ ನರೇಂದ್ರನ ಕಣ್ಣುಗಳನ್ನು ತೆರೆಯಿಸಿತು. ಇದುವರೆಗೆ ಕೇವಲ ಅಹಂಕಾರ ಪೂರ್ಣವಾಗಿದ್ದ ಆತನ ಮನಸ್ಥಿತಿಯು ನಮ್ರತಾ ಭಾವವನ್ನೈದಿತು. 'ನಾನು ಎಷ್ಟು ಬಗೆಯ, ಎಂತಹ ಸುಂದರ-ಸುವಾಸಿತ ಪುಷ್ಪಗಳನ್ನು ದಿನದಿನವೂ ಬೆಳೆಯಿಸುತ್ತಿರುವೆನಲ್ಲಾ" ಎಂಬ ಅಹಂಕಾರ - ಮಮಕಾರಗಳ ಸ್ಥಾನದಲ್ಲಿ 'ಆಹಾ ಭಗವಂತನು ಎಂತಹ ದಯಾಮಯನು! ಎಂತಹ ಅಪೂರ್ವ ವಸ್ತುಗಳನ್ನು ಸೃಷ್ಟಿಸಿರುವನು!' ಎಂಬ ಭಗವತ್ಪರ ಚಿತ್ತವೃತ್ತಿಯು ಲಭ್ಯವಾಯಿತು. ಅಪ್ರಾರ್ಥಿತರಾಗಿ ಬಂದು ಸ್ವಾರ್ಥತೆಯ ಬಲೆಗೆ ಬಲಿ ಬಿದ್ದು ಹೋಗುತ್ತಿದ್ದ ತನ್ನನ್ನು ಸತ್ಪಥದಲ್ಲಿ ಬಿಟ್ಟು ಉದ್ಧರಿಸಿದ ಆ ಮಹಾನುಭಾವರನ್ನು ಮನಸಾ ವಂದಿಸುತ್ತ, ಅಂದಿನಿಂದ ಪ್ರತಿನಿತ್ಯವೂ ಬುಟ್ಟಿಬುಟ್ಟಿಗಳಾಗಿ ಒದಗುತ್ತಿದ್ದ

ಆ ಪುಷ್ಪಗಳಿಂದ ಲಕ್ಷ್ಮೀಪತಿಯ ಪಾದಕಮಲಗಳನ್ನರ್ಚಿಸುವುದರಲ್ಲಿ ಆಸಕ್ತನಾಗಿರಲು ದಿನದಿನಕ್ಕೆ ನಾರದವಾಕ್ಯದಂತೆ ಆತನಲ್ಲಿ ಭಕ್ತಿಭಾವವು ಬೆಳೆದು ಬರುತ್ತಿದ್ದಿತು.

ಇತ್ತ ರಾಜನಿಂದ ಸಮರ್ಪಿತವಾದ ಪುಷ್ಪಹಾರವನ್ನು ಕೊರಳಲ್ಲಿ ಧರಿಸಿಕೊಂಡು, ಪುಷ್ಪಗುಚ್ಛವನ್ನು ಕೈಯಲ್ಲಿ ಹಿಡಿದುಕೊಂಡು ನಾರದ ಮಹರ್ಷಿಗಳು ದೇವಲೋಕಕ್ಕೆ ನಡೆದರು. ನಾರದರು ಅಮರಾವತಿಯಲ್ಲಿ ದೇವರಾಜನ ಸುಧರ್ಮ ಸಭೆಯನ್ನು ಹೊಕ್ಕೊಡನೆಯೇ ಆ ಪುಷ್ಪಗಳ ಪರಿಮಳಕ್ಕಾಗಿ ಅಲ್ಲಿದ್ದ ಸಮಸ್ತರೂ ದಿಗ್ಭ್ರಾಂತರಾದರು. ದೇವೇಂದ್ರನು ದೇವಲೋಕಕ್ಕೂ ಅಲಭ್ಯವಾದ ಅಪೂರ್ವ ಪರಿಮಳವುಳ್ಳ ಪುಷ್ಪಹಾರವು ಎಲ್ಲಿಯದೆಂದು ಪ್ರಶ್ನಿಸಲು ನಾರದರು, ಆ ಪುಷ್ಪಗಳು ಭೂಲೋಕದಲ್ಲಿ ಅಯೋಧ್ಯಾ ನಗರಾಧಿಪತಿಯಾದ ರುಕ್ಮಾಂಗದ ಮಹಾರಾಜನ ಪುಷ್ಪೋದ್ಯಾನದಲ್ಲಿ ಬೆಳೆದುವುಗಳೆಂದರು. ಅದನ್ನು ಕೇಳಿದ ಇಂದ್ರನು ತನ್ನ ದೂತರನ್ನು ಕುರಿತು—"ಇನ್ನು ಮೇಲೆ ಆ ರುಕ್ಮಾಂಗದನ ಉಪವನದಿಂದ ನನಗೆ ಪುಷ್ಪಗಳನ್ನು ತಂದೊದಗಿಸಿರಿ" ಎಂದು ಆಜ್ಞಾಪಿಸಿದನು. ಆ ದೇವದೂತರು ಹಾಗೆಯೇ ಪ್ರತಿದಿನವೂ ವಿಮಾನಾರೂಢರಾಗಿ ಬಂದು ಅದೃಶ್ಯರಾಗಿ ಆ ಪುಷ್ಪಗಳನ್ನು ಸಂಗ್ರಹಿಸಿ ಕೊಂಡೊಯ್ದು ದೇವರಾಜನಿಗೆ ಒಪ್ಪಿಸುತ್ತಿದ್ದರು. ಹೀಗೆ ಕೆಲವು ದಿನಗಳವರೆಗೆ ನಡೆದು ಬಂತು.



## ಅಧ್ಯಾಯ ೩ "ಉಪವಾಸ ಪ್ರಭಾವ"

ರುಕ್ಮಾಂಗದ ಮಹಾರಾಜನಿಗೆ ಭಗವದರ್ಚನೆಯಲ್ಲಿ ಆಸಕ್ತಿಯು ದಿನದಿನಕ್ಕೆ ಹೆಚ್ಚುತ್ತ ಸಾಗಿದ್ದಂತೆ, ಇತ್ತ ಉದ್ಯಾನದಲ್ಲಿನ ಪುಷ್ಪಗಳ ಪ್ರಮಾಣವೂ ಕಡಮೆಯಾಗುತ್ತಾ ನಡೆದಿತ್ತು. ಮೊದಲು ಕೆಲವು ದಿನಗಳವರೆಗೆ ದೂತರು ಪುಷ್ಪಗಳು ಕಡಮೆಯಾಗುತ್ತಿದ್ದುದರ ಕಾರಣವನ್ನು ತಿಳಿಯಲಾರದೆ, ಏಕೋ ಬೆಳವಣಿಗೆಯು ಕಡಮೆಯಾಯಿತೆಂದುಕೊಂಡು, ಗಿಡಗಳಿಗೆ ಹೆಚ್ಚು

ಗೊಬ್ಬರ ಗೋಡುಗಳನ್ನು ಹಾಕಿ, ಕಳೆ ತೆಗೆದು ನೀರುಕಟ್ಟಿ ಬೆಳೆಸಿದರು. ಒಂದಕ್ಕೆರಡರಷ್ಟು-ನಾಲ್ಕರಷ್ಟು ಮೊಗ್ಗುಗಳು ಬಿಟ್ಟುವು. ಮೊಗ್ಗುಗಳು ಇಂದು ಅಥವ ನಾಳೆ ಅರಳುವುವೆಂಬ ಸ್ಥಿತಿಯಲ್ಲಿದ್ದಾಗ ನೋಡಿ, ಸೇವಕರು, ನಾಳೆ ಅರಮನೆಗೆ ನಾಲ್ಕು ಹೆಡಿಗೆ ಹೂಗಳನ್ನು ಕಳುಹಿಸಬಹುದು ಎಂದುಕೊಂಡರು. ಆದರೆ ಮಾರನೆಯ ಪ್ರಾತಃಕಾಲವಾಗವ ವೇಳೆಗೆ ಗಿಡಗಳಲ್ಲಿ ಒಂದೇ ಒಂದು ಹೂವಾದರೂ ಕಾಣಿಸದೆ ಮಾಯವಾಗಿದ್ದುವು. ಹೀಗೆ ದಿನ ದಿನವೂ ಆಗುತ್ತಿರಲು, ಅದರ ಕಾರಣವು ತಿಳಿಯದೆ ಕೆಲವುದಿನ ರಾತ್ರಿಯೆಲ್ಲಾ ಎಚ್ಚತ್ತುಕಾದಿದ್ದರು. ಆದರೂ ಏನೂ ಪ್ರಯೋಜನ ತೋರಲಿಲ್ಲ.ಹೂಗಳು ಕಣ್ಣಿಂದ ನೋಡಿ-ನೋಡುತ್ತಿದ್ದಂತೆಯೇ ಮಾಯವಾಗುವುವು. ದಿನದಿನಕ್ಕೆ ಕಡಮೆ ಕಡಮೆಯಾಗುತ್ತಿದ್ದ ಪುಷ್ಪಗಳ ಪ್ರಮಾಣವು ರಾಜನ ಗಮನವನ್ನು ಆಕರ್ಷಿಸದಿರಲಿಲ್ಲ. ಅದಕ್ಕೆ ಕಾರಣವೇನೆಂದೂ ರಾಜನು ವಿಚಾರಿಸಿದನು. ಉದ್ಯಾನ ಸೇವಕರು, ಕೆಲವುದಿನಗಳಿಂದ ರಾತ್ರಿ ನೋಡಿದ ಹೂಗಳು ಬೆಳಗ್ಗೆ ಕಾಣದೆ, ರಾತ್ರಿಯೆಲ್ಲ ಎಚ್ಚತ್ತು ನೋಡಿಕೊಂಡೇ ಇದ್ದರೂ ಕಣ್ಣೆದುರಿಗೆ ಇದ್ದುದಿದ್ದಂತೆಯೇ ಹೂಗಳು ಮಾಯವಾಗುತ್ತಿದ್ದ ವಿಚಿತ್ರ ಪ್ರಸಂಗವನ್ನು ರಾಜನ ಸನ್ನಿಧಿಯಲ್ಲಿ ವಿಜ್ಞಾಪಿಸಿ, ಅವರಿಗೆ ತಿಳಿಸದಿದ್ದ ತಮ್ಮ ಅಪರಾಧವನ್ನು ಕ್ಷಮಿಸಬೇಕೆಂದು ಬೇಡಿಕೊಂಡರು.

ದೂತರು ಹೇಳಿದ ಮಾತಿಗೆ ರಾಜನೂ ಆಶ್ಚರ್ಯಪಟ್ಟನಾದರೂ, ಅದು ಅದೃಶ್ಯವಾಗಿ ದೇವದೂತರು ಮಾಡುತ್ತಿದ್ದ ಕಾರ್ಯವೆಂದು ಸಂದೇಹಿಸಲು ಯಾವ ಕಾರಣವೂ ಇರಲಿಲ್ಲ. ಪುಷ್ಪಗಳನ್ನು ಕಳವುಮಾಡುತ್ತಿರುವ ಅವರು ಯಾರೇ ಆದರೂ ಅವರನ್ನು ಹೇಗಾದರೂ ಹಿಡಿದು ತಂದು ಒಪ್ಪಿಸದಿದ್ದರೆ ಉದ್ಯಾನ ಪಾಲಕರಿಗೆ ಬಹು ಕಠಿಣ ಶಿಕ್ಷೆಯನ್ನು ವಿಧಿಸುತ್ತೇನೆಂದು ಆಜ್ಞಾಪಿಸಿ ಅವರನ್ನು ಕಳುಹಿಸಿಬಿಟ್ಟನು. ಸೇವಕರು ಉಪಾಯಕಾಣದೆ, ಬಹು ವ್ಯಸನಾಕ್ರಾಂತರಾಗಿ, ಮುಂದೆ ಮಾರ್ಗತೋರದೆ, ಕೊನೆಗೆ ಒಂದು ದಿನ ರಾತ್ರಿ ಎಲ್ಲರೂ ಎಚ್ಚತ್ತಿದ್ದು ಉದ್ಯಾನದ ಸುತ್ತಲಿನ ಪ್ರಾಕಾರ ಗೋಡೆಯ ಮೇಲೆ ಯಾರೂ ಹತ್ತಿಬರದಂತೆ ಸುತ್ತಲೂ ವಿಷದ ಮುಳ್ಳುಗಳನ್ನು ಹೊದ್ದಿಸಿ, ಬಾಗಿಲುಗಳನ್ನು ಭದ್ರಪಡಿಸಿ, ಒಳಗೆ ತೋಟದ

ಎಲ್ಲಾ ಭಾಗವೂ ಕಾಣುವಂತಹ ನಾಲ್ಕಾರು ಸ್ಥಳಗಳಲ್ಲಿ ಬೆಂಕಿಹಾಕಿ ಕೊಂಡು ಕಾಯ್ದು ಕುಳಿತರು. ಬೆಳಗಿನ ಜಾವದ ತಂಗಾಳಿಗೆ ಪುಷ್ಪಗಳೆಲ್ಲ ಅರಳುತ್ತಿರುವ ವೇಳೆಗೆ ಸರಿಯಾಗಿ ವಿಮಾನಾರೂಢರಾದ ದೇವದೂತರು ಬಂದು ಉಪವನದ ಒಂದು ಭಾಗದಲ್ಲಿ ತಮ್ಮ ವಿಮಾನವನ್ನಿಳಿಸಿ ಕೆಳಕ್ಕಿ ಳಿದುಬಂದು, ಆಗತಾನೆ ಅರಳುತ್ತಿದ್ದ ಪುಷ್ಪಗಳನ್ನು ಕೊಯ್ದು ಬುಟ್ಟಿ ಗಳನ್ನು ತುಂಬಿಕೊಳ್ಳಲಾರಂಭಿಸಿದರು. ಒಂದೊಂದು ಗಿಡದಲ್ಲೂ ಬಳ್ಳಿ ಯಲ್ಲೂ ಎಲೆಗಳು ಕಾಣಿಸದಂತೆ ತುಂಬಿದ್ದ ಹೂಗಳು ನೋಡಿ-ನೋಡು ತ್ತಿದ್ದಂತೆಯೇ ಕಣ್ಮರೆಯಾಗುತ್ತಿದ್ದುದನ್ನು ಕಂಡು-ಆದರೆ ಯಾವ ವ್ಯಕ್ತಿ ಯನ್ನೂ ಕಾಣಲಾರದೆ ರಾಜದೂತರು ಕೋಲಾಹಲವನ್ನೆಬ್ಬಿಸಿ, ಉರಿಯನ್ನು ದೊಡ್ಡದುಮಾಡಿ, ಹೂಗಿಡಗಳ ಪಕ್ಕದಲ್ಲಿ ನಿಂತು ತಮ್ಮ ಕೈಯಲ್ಲಿದ್ದ ದೀರ್ಘವಾದ ಕಟ್ಟಿಗೆಗಳನ್ನು ವರಸೆ ತಿರುಗಿಸಲಾರಂಭಿಸಿದರು. ಇದರಿಂದ ದೇವದೂತರು ಎಂದಿನಂತೆ ಸರಾಗವಾಗಿ ತಮ್ಮ ಕೆಲಸವನ್ನು ಮಾಡಿಕೊ ಳ್ಳಲು ಸಾಧ್ಯವಾಗದೆ ಸಾವಕಾಶವಾಯಿತು. ಅಷ್ಟರಲ್ಲಿ ಬೆಳಕಾಗುತ್ತಾ ಬಂದಿದುದರಿಂದ ದೇವರಾಜನ ಪೂಜಾಕಾಲಕ್ಕೆ ಹೋಗಬೇಕೆಂದು ಅವಸರ ಪಟ್ಟುಕೊಂಡ ದೇವದೂತರು, ಅರ್ಧ ತುಂಬಿದ್ದ ಬುಟ್ಟಿಗಳನ್ನೇ ವಿಮಾನದ ಲ್ಲಿಟ್ಟುಕೊಂಡು ಹೊರಡಲುದ್ಯುಕ್ತರಾದರು. ಆದರೆ ಆದಿನ ವನಪಾಲಕರು ನಾಲ್ಕೆಂಟು ಕಡೆಯಲ್ಲಿ ಹಾಕಿ ಉರಿಸುತ್ತಿದ್ದ ಬೆಂಕಿಯಲ್ಲಿ ಹೇಗೋ ಅಕ ಸ್ಮಾತ್ತಾಗಿ ಬಿದ್ದು ಉರಿಯುತ್ತಿದ್ದ ಯಾವುದೋ ಒಂದು ಮೂಲಿಕಾವಿಶೇ ಷದ ಹೊಗೆಯು ಬಡಿದುದರಿಂದ ಆ ವಿಮಾನದ ಗಮನಶಕ್ತಿಯು ಉಡುಗಿ ದುದಲ್ಲದೆ, ಅಂತರದಲ್ಲಿ ನಿಂತಿದ್ದ ಆ ದೇವ ವಿಮಾನವು ನೆಲಕ್ಕೆ ಬಿದ್ದು, ಮೇಲಕ್ಕೆ ಏಳದಂತಾಯಿತು. ಅಕಸ್ಮಾತ್ತಾಗಿ ಪ್ರಾಪ್ತವಾದ ತಮ್ಮ ಆಸ್ಥಿತಿಯು ಅವರಿಗೆ ಅತ್ಯಂತ ಗಾಬರಿಯನ್ನುಂಟುಮಾಡಿತು. ಈ ವರೆಗೆ ದೈವಿಕ ಶಕ್ತಿಯಿಂದ ಅದೃಶ್ಯವಾಗಿ, ನೆಲವನ್ನು ಬಿಟ್ಟು ಅಂತರದಲ್ಲಿ ನಿಲ್ಲು ತಿದ್ದ ವಿಮಾನವು ಇಂದು ಆಶಕ್ತಿಯು ಲೋಪವಾದುದರಿಂದ ಭೂಮಿ ಯನ್ನು ಸೋಕಿದೊಡನೆಯೇ ಆ ವಿಮಾನವೂ ಅದರಲ್ಲಿ ಕುಳಿತಿದ್ದ ದೇವ ದೂತರೂ ಸುತ್ತಲಿದ್ದ ಎಲ್ಲರ ಕಣ್ಣಿಗೂ ಕಾಣಿಸತೊಡಗಿದರು ತಾವು ಎಂದೂ ಕಂಡು ಕೇಳಿಅರಿಯದ ಆ ವಿಚಿತ್ರ ವಿಮಾನವನ್ನೂ ಅದರಲ್ಲಿ ದಿವ್ಯ

ವಸ್ತ್ರಮಾಲ್ಯಾದಿಗಳಿಂದ ಅಲಂಕೃತರಾಗಿ ಕುಳಿತಿದ್ದ ಮಂಗಳಸ್ವರೂಪರಾದ ಆ ದೇವದೂತರನ್ನೂ ಕಂಡು ಆ ರಾಜಭಟರು ಕೆಲಹೊತ್ತು ಭ್ರಾಂತರಂತೆ ನಿಂತಿದ್ದು, ತರುವಾಯ ಜಾಗ್ರತೆಗೊಂಡು, ಕೆಲವರು ಓಡಿಹೋಗಿ ರಾಜನಿಗೆ ಆ ವಾರ್ತೆಯನ್ನು ತಿಳಿಸಿದರು. ರಾಜನೂ ಕೌತುಕಗೊಂಡು ಮಂತ್ರಿಸಾಮಾಜಿಕರೊಡನೆ ಅಲ್ಲಿಗೆ ಬಂದನು. ಅಪೂರ್ವ ವ್ಯಕ್ತಿಗಳಾದ ಆ ದೇವದೂತರನ್ನು ಕಂಡು ಎಲ್ಲರೂ ಪರಮಾಶ್ಚರ್ಯಪಟ್ಟರು.

'ಅವರು ಯಾರು ಎಲ್ಲಿಂದ ಬಂದವರು, ಪುಷ್ಪಗಳನ್ನೇಕೆ ಕಳವು, ಮಾಡುತ್ತಿದ್ದುದು ?' ಎಂದು ಪ್ರಶ್ನಿಸಿದ ರಾಜನಿಗೆ ಪ್ರತ್ಯುತ್ತರವಾಗಿ, ಅವರು, ನಾರದರು ದೇವಸಭೆಗೆ ಬಂದು ಆ ಉಪವನದ ಮತ್ತು ಅಲ್ಲಿಯ ದೇವದುರ್ಲಭವಾದ ಪುಷ್ಪಗಳ ವೃತ್ತಾಂತವನ್ನು ಹೇಳಿದುದು ಮೊದಲು, ಆ ದಿನ ಪ್ರಾತಃಕಾಲ ತಾವು ಸಿಕ್ಕುಬಿದ್ದುದರವರೆಗೆ ನಡೆದ ಸಂಗತಿಯನ್ನೆಲ್ಲ ವಿಸ್ತಾರವಾಗಿ ತಿಳಿಸಿದರು. ತಮ್ಮ ಉಪವನದ ಪುಷ್ಪಗಳು ದೇವೇಂದ್ರನ ಮೆಚ್ಚುಗೆಗೂ ಪಾತ್ರವಾಗಿವೆಯೆಂಬ ವಾರ್ತೆಯನ್ನು ಕೇಳಿ ಮಹಾರಾಜನು ಮಾತ್ರವಲ್ಲ-ಆ ವನಪಾಲಕರೂ, ಅಯೋಧ್ಯಾನಗರದ ಪ್ರಜೆಗಳೂ ಮಂತ್ರಿಸಾಮಾಜಿಕರೂ ಮಹದಾನಂದಗೊಂಡರು. ಅವರು ಆವರೆಗೆ ಕಳುವಿನಿಂದ ಹೂವುಗಳನ್ನು ಒಯ್ಯುತ್ತಿದ್ದ ಅಪರಾಧವನ್ನು-ದೇವರಾಜನ ಗೌರವವನ್ನು ಲಕ್ಷಿಸಿ ಮಾನಸಿಕಮಾಡಿದುದಲ್ಲದೆ, ರಾಜನು ಆ ವಿಮಾನಕ್ಕೆ ಪ್ರಯಾಣಗತಿಯು ಕುಂಠಿತವಾದುದರಿಂದ ದೇವರಾಜನ ಪೂಜಾಕಾಲಕ್ಕೆ ಪುಷ್ಪಗಳೊದಗಲು ಅವಕಾಶ ತಪ್ಪಿತಲ್ಲಾ ಎಂದೂ ಪೇಚಾಡಿಕೊಂಡನು. ಮತ್ತು ಅದಕ್ಕೆ ಪೂರ್ವದಂತೆ ಅಂತರಿಕ್ಷದಲ್ಲಿ ಗಮನ ಸಾಮರ್ಥ್ಯವು ಲಭಿಸಲು ಏನಾದರೂ ಉಪಾಯವಿದ್ದರೆ ಹೇಳಬೇಕೆಂದು ಅವರನ್ನು ಪ್ರಶ್ನಿಸಿದನು. ಆಮಾತಿಗೆ ದೇವದೂತರು—'ರಾಜೇಂದ್ರಾ ಅದಕ್ಕೆ ಒಂದು ಉಪಾಯವಿದೆ. ನಿನ್ನೆ ಏಕಾದಶಿಯಾದುದರಿಂದ ನಿರಾಹಾರವನ್ನೂ, ರಾತ್ರೆ ಜಾಗರಣೆಯನ್ನೂ ಮಾಡಿದ ಯಾರಾದರೂ ನಿನ್ನ ರಾಜ್ಯದಲ್ಲಿದ್ದರೆ ಅವರನ್ನು ಕರೆಯಿಸಿ ಅವರಿಂದ ಆ ಉಪವಾಸದ ಪುಣ್ಯ ಫಲವನ್ನು ಸಂಕಲ್ಪಪೂರ್ವಕವಾಗಿ ದಾನಕೊಡಿಸುವುದಾದರೆ, ಈ ವಿಮಾನಕ್ಕೆ ಗಮನಸಾಮರ್ಥ್ಯವು ಪ್ರಾಪ್ತವಾಗುವುದು' ಎಂದು ಹೇಳಿದರು.

ಆ ಮಾತನ್ನು ಕೇಳಿದ ರಾಜನು ಅತಿಶಯಕೌತುಕದಿಂದ, ಒಡನೆ ತನ್ನ ರಾಜಧಾನಿಯಲ್ಲಿ ಹಿಂದಿನ ದಿನ ಉಪವಾಸಮಾಡಿ-ರಾತ್ರಿಯೆಲ್ಲಾ ಎಚ್ಚತ್ತಿದ್ದ-ಇಂತು ಉಪವಾಸ ಜಾಗರಣೆಗಳನ್ನು ಮಾಡಿದವರು ಯಾರಾದರೂ ಇದ್ದರೆ ಬಂದು ತಮ್ಮ ಆ ಪುಣ್ಯವನ್ನು ದೇವವಿಮಾನಕ್ಕೆ ದಾನಕೊಡಬೇಕೆಂದೂ, ಅದಕ್ಕಾಗಿ ರಾಜನಿಂದ ವಿಶೇಷ ಸನ್ಮಾನವು ನಡೆಯಿಸಲ್ಪಡುವುದೆಂದೂ ಡಂಗೂರಮೂಲಕ ಪ್ರಸಿದ್ಧಪಡಿಸಿದನು. ರಾಜದೂತರು ಆ ನಗರದ ಸಕಲ ಭಾಗಗಳಲ್ಲೂ ಆ ರಾಜಸಂದೇಶವನ್ನು ಹೇಳಿಕೊಂಡು ಸುತ್ತಿದರು. ಆ ಮಾತನ್ನು ಕೇಳಿ-ಎಲ್ಲರೂ ಊಟನಿದ್ರೆಗಳನ್ನು ಮಾಡಿದವರೇ ಆದುದರಿಂದ ಯಾರೂ ಉತ್ತರಕೊಡದೆ ಸುಮ್ಮನಿರಲು, ಕೊನೆಗೆ ಒಬ್ಬ ಹಣ್ಣು ಹಣ್ಣು ಮುದುಕಿಯು ಆ ವಾರ್ತೆಯನ್ನು ಕೇಳಿ ಕಾರ್ಯ ಕಾರಣಗಳನ್ನು ತಿಳಿಯದೆ—'ಅಯ್ಯಾ ರಾಜದೂತರೆ ನಾನು ನಿನ್ನೆಯೆಲ್ಲ ಒಂದಗುಳು ಅನ್ನ ತಿಂದಿಲ್ಲ-ಹನಿನೀರು ಕುಡಿದಿಲ್ಲ, ರಾತ್ರಿಯಲ್ಲಿ ಒಂದು ಕ್ಷಣವಾದರೂ ಕಣ್ಣು ಮುಚ್ಚಿ ನಿದ್ರೆ ಮಾಡಲಿಲ್ಲ. ಇದು ನಿಶ್ಚಯವು!' ಎಂದಳು. ಭಟರು ಆ ವೃತ್ತಾಂತವನ್ನು ರಾಜನಲ್ಲಿ ವಿಜ್ಞಾಪಿಸಿದರು. ಆವಳನ್ನು ಉಪವನದ ಸಮೀಪಕ್ಕೆ ಕರೆತರುವಂತೆ ರಾಜಾಜ್ಞೆಯಾಯಿತು. ಯೋಗ್ಯ ವಿಚಾರದಿಂದ ರಾಜನು ಸಂತಷ್ಟನಾಗಿ, ಅವಳಿಂದ ಆ ಉಪವಾಸ ಜಾಗರಣೆಗಳ ಫಲವನ್ನು ರಾಜಪುರೋಹಿತರ ಮೂಲಕ ಸಂಕಲ್ಪಪೂರ್ವಕ ಆ ವಿಮಾನಾಭಿಮಾನ ದೇವತೆಗೆ ದಾನ ಕೊಡಿಸಿದನು. ಒಡನೆ ಕೇಳುವುದೇನು! ಆಶ್ಚರ್ಯವಾಶ್ಚರ್ಯವು! ನೆಲವನ್ನು ಸೋಂಕಿ ಹೊಂದಿನಿಂತಿದ್ದ ಆ ವಿಮಾನವು, ಉತ್ತರಕ್ಷಣದಲ್ಲೇ ಭೂಮಿಯನ್ನು ಬಿಟ್ಟು ಅಂತರದಲ್ಲಿ ನಿಂತಿತು. ಆ ವಿಚಿತ್ರವನ್ನು ಕಂಡು ಸಕಲರೂ ಪರಮಾಶ್ಚರ್ಯಪಟ್ಟರು. ದೇವದೂತರು, ರುಕ್ಮಾಂಗದ ರಾಜನು ದೇವರಾಜನಿಗರ್ಪಿಸಿದ ವಂದನೆಗಳ ಸಂದೇಶವನ್ನು ಕೈಕೊಂಡು ವಿಮಾನವನ್ನೇರಿಕೊಂಡರು. ವಿಮಾನವು ಒಡನೆ ಅದೃಶ್ಯವಾಗಿ ದೇವಲೋಕವನ್ನು ಕುರಿತು ಪ್ರಯಾಣಮಾಡಿತು.

ದೇವದೂತರು ಹೊರಟುಹೋದ ತರುವಾಯ ರಾಜನು, ಆ ವೃದ್ಧೆಳನ್ನು ಕುರಿತು 'ಯಾವ ಸಿದ್ಧಿಯು ಪ್ರಾಪ್ತಿಗಾಗಿ ಉಪವಾಸ ಜಾಗರಣೆಗಳನ್ನು ಮಾಡಿದೆ'ಯೆಂದು ಪ್ರಶ್ನಿಸಿದನು. ಪಾಪ, ಆ ಮುದುಕಿಗೆ ಉಪ

ವಾಸವೆಂದರೇನೋ ಜಾಗರಣೆಯೆಂದರೇನೊ ತಿಳಿಯದೆ ತನ್ನ ಸ್ವಾಭಾವಿಕ ವಾದ ನಿಷ್ಕಲ್ಮಷ ಸರಳಭಾವದಿಂದ—'ಮಹಾಪ್ರಭೋ ನನಗೆ ಅದಾವು ದೂ ತಿಳಿಯದು. ಮನೆಯಲ್ಲಿನ ಅತ್ತೆ ಸೊಸೆಯರ ಜಗಳದಿಂದ ಅನ್ನ ತಿನ್ನಲು ಮನಸ್ಸುಬಾರದೆ ಮೊನ್ನೆಯ ರಾತ್ರೆ-ನಿನ್ನೆ ಹಗಲು ರಾತ್ರೆಗಳನ್ನು ಉಪ ವಾಸವಾಗಿ ಕಳೆದೆನು. ಹಸಿವೆಯ ಸಂಕಟದಿಂದಲೂ, ತಗಣಿ ಸೊಳ್ಳೆಗಳ ಕಾಟದಿಂದಲೂ ನಿನ್ನೆಯರಾತ್ರೆ ಕ್ಷಣಮಾತ್ರವೂ ನಿದ್ರೆ ಬರಲಿಲ್ಲ. ಈದಿನ ಬೆಳಿಗ್ಗೆ ಈ ದೂತರು ಡಂಗೂರವನ್ನು ಸಾರುತ್ತ ಬಂದರು. ನನ್ನ ಈ ಬಲವಂತದ ನಿರಾಹಾರವು ನಮ್ಮ ರಾಜನ ಕಾರ್ಯಕ್ಕೆ ಯಾವ ಬಗೆಯಿಂ ದಾದರೂ ಉಪಯೋಗವಾಗುವಂತಿದ್ದರೆ ಈ ನನ್ನ ಜನ್ಮವು ಸಾರ್ಥಕವಾಗ ಬಹುದೆಂದು ತಿಳಿದು ಬಂದೆನು' ಎಂದಳು. ವೃದ್ಧೆಯಾಡಿದ ಆ ಮಾತನ್ನು ಕೇಳಿ ಎಲ್ಲರೂ ಪರಮಾಶ್ಚರ್ಯಭರಿತರಾದರು. ರಾಜನು ಕೈಹೊಯ್ದು ನಗುತ್ತಾ, ಆ ಸಾಧು ಮುದುಕಿಗೆ ವೃದ್ಧಾಪ್ಯದಲ್ಲಿ ಸೊಸೆಯಿಂದ ಒದಗುವ ದೂಷಣೆ ತಿರಸ್ಕಾರಗಳಿಗೆ ದಾರಿದ್ರ್ಯವೇ ಕಾರಣವೆಂದು ತಿಳಿದು, ಅವರ ದಾರಿದ್ರ್ಯವು ಹತವಾಗುವಂತೆ ಒಡವೆ ವಸ್ತ್ರಗಳನ್ನೂ ದವಸ ಧಾನ್ಯಗ ಳನ್ನೂ ಕೊಟ್ಟು ತೃಪ್ತಿಪಡಿಸಿ ಕಳುಹಿಸಿದನು. ಈ ಕಾರಣವು ಅಕಸ್ಮಾ ತ್ತಾಗಿ ಹೀಗೆ ನಡೆದು ಹೋಯಿತಾದರೂ, ರಾಜನ ಮನಸ್ಸಿನಲ್ಲಿ ಉಪ ವಾಸ ಮತ್ತು ಜಾಗರಣೆಗಳ ಪ್ರಭಾವವನ್ನು ಕುರಿತು ಒಂದು ಬಹು ಘನ ವಾದ ಅಭಿಪ್ರಾಯವು ನಿಂತಿತು. ಅದರ ವೃತ್ತಾಂತವನ್ನು ಪೂರ್ಣವಾಗಿ ತಿಳಿದುಕೊಳ್ಳಬೇಕೆಂದು, ಆತನು ಅನುಕೂಲ ಸಮಯ ನಿರೀಕ್ಷಣೆಯಲ್ಲಿದ್ದನು.



## ಅಧ್ಯಾಯ ೩ "ಏಕಾದಶಿ"

ಕೇವಲ ಉದ್ದೇಶರಹಿತಳಾಗಿ ಒಂದು ಬಗೆಯ ಬಲಾತ್ಕಾರಕ್ಕಾಗಿ ಆ ವೃದ್ಧಳು ಮಾಡಿದ ನಿರಾಹಾರದ ಫಲವೇ ಅಷ್ಟುಮಟ್ಟಿಗಿರುತ್ತಿರುವಲ್ಲ, ಶ್ರದ್ಧಾ ಭಕ್ತಿ ಪ್ರೇರಿತರಾಗಿ ನಿಶ್ಚಯೋದ್ದೇಶವನ್ನಿಟ್ಟುಕೊಂಡು, ಮಾಡುವ

ಉಪವಾಸಾದಿ ವ್ರತಗಳಿಂದ ಮತ್ತೆಂತಹ ಫಲಪ್ರಯೋಜನಗಳು ಪ್ರಾಪ್ತ ವಾಗಬಹುದೋ ಎಂದು, ರಾಜನು ವಿಚಾರಮಗ್ನನಾಗಿ ಆ ಶ್ರೇಷ್ಠವ್ರತದ ಸಂಪೂರ್ಣ ವಿಚಾರವನ್ನು ಯಾರ ಮೂಲಕ ತಿಳಿಯಬಹುದೆಂದು ಯೋಚಿ ಸತೊಡಗಿದನು. ಆವೇಳೆಗೆ ಸರಿಯಾಗಿ ಮಹಾಮಹಿಮರಾದ ಶುಕ ಶೌನ ಕಾದಿ ಋಷಿಗಳು ಮಾರ್ಗವಶಾತ್ ಆತನ ಸಭಾದ್ವಾರದ ಸಮೀಪಕ್ಕೆ ಬಂದಿ ರುವರೆಂಬ ವಾರ್ತೆಯು ರಾಜನಿಗೆ ತಿಳಿಯಿತು. ಆ ಋಷಿಶ್ರೇಷ್ಠರನ್ನು ಉಚಿತ ಗೌರವಾದಿಗಳಿಂದ ಒಳಕ್ಕೆ ಕರೆದು ಅರ್ಘ್ಯಪಾದ್ಯಾದಿಗಳಿಂದ ಸತ್ಕ ರಿಸಿ ಯೋಗ್ಯಾಸನದಲ್ಲಿ ಕುಳ್ಳಿರಿಸಿ ಫಲಪುಷ್ಪಾದಿಗಳನ್ನೊಪ್ಪಿಸಿದನು. ಮಹರ್ಷಿಗಳು ರಾಜನ ಸತ್ಕಾರದಿಂದ ಪರಮ ಸಂತುಷ್ಟರಾಗಿರಲು, ರುಕ್ಮಾಂಗದನು—'ಮಹರ್ಷಿವರ್ಯರೆ, ತಮ್ಮ ಆಗಮನದಿಂದ ನನ್ನ ಈ ಗೃಹವೂ ರಾಜಧಾನಿಯೂ ಪಾವನವಾದುವು. ಪರೋಪಕಾರ ನಿರತರಾದ ತಮ್ಮಂತಹ ಮಹಾನುಭಾವರು ದೀನರಾದ ಅಸ್ಮದಾದಿಗಳಿಗೆ ಮಾರ್ಗದರ್ಶ ಕರಾಗಿ ಉದ್ಧಾರಮಾಡುವುದಕ್ಕಾಗಿಯೇ ಅಲ್ಲವೆ ಹೀಗೆ ಅಪ್ರಾರ್ಥಿತವಾಗಿ ದರ್ಶನಕೊಡುವುದು! ಧನ್ಯನಾದೆನು.' ಎಂದು ಮೃದೂಕ್ತಿಗಳಿಂದ ಉಪಚರಿಸಿದನು. ರಾಜನ ಸೌಜನ್ಯವನ್ನು ಮೆಚ್ಚಿಕೊಂಡು ಸುಖಾಸೀನರಾ ಗಿದ್ದ ಅವರನ್ನು ಕುರಿತು, ಪುನಃ—'ಮಹರ್ಷಿವರ್ಯರೆ, ಏಕಾದಶಿ ವ್ರತವು ವ್ರತಗಳಲ್ಲೆಲ್ಲಾ ಸರ್ವೋತ್ತಮವಾದುದೆಂದೂ ಮಹಾಮಹಿಮೋಪೇತವಾ ದುದೆಂದೂ ಕೇಳಿದ್ದೇನೆ. ಆ ವ್ರತದ ಕಟ್ಟಳೆಗಳೇನು! ಅದನ್ನು ಆಚರಿ ಸುವ ಬಗೆ ಹೇಗೆ? ಅದರಿಂದುಂಟಾಗುವ ಪ್ರಯೋಜನಗಳೇನು! ಇದನ್ನು ತಿಳಿಯಬೇಕೆಂದು ಆಸೆಯಾಗುತ್ತದೆ. ದಯವಿಟ್ಟು ತಿಳಿಸಬೇಕು.' ಎಂದು ಪ್ರಾರ್ಥಿಸಿ ದೇವವಿಮಾನ, ವೃದ್ಧಳ ಉಪವಾಸ ವಿಚಾರ ಮುಂತಾದ ಆಶ್ಚರ್ಯಕರ ಸಂಗತಿಗಳನ್ನೂ ತಿಳಿಸಿದನು.

ರಾಜನ ಪ್ರಶ್ನೆಯನ್ನು ಕೇಳಿ, ಆತನ ಆಸ್ತಿಕತೆಗಾಗಿ ಸಂತುಷ್ಟರಾದ ಆ ಮಹರ್ಷಿಗಳು—'ರಾಜೇಂದ್ರಾ, ಕೇಳು, ಏಕಾದಶಿಗೆ ಹರಿದಿನವೆಂಬ ಪ್ರಸಿದ್ಧ ನಾಮವುಂಟು. ಲೋಕದಲ್ಲಿ ಶಾಸ್ತ್ರ-ಪುರಾಣಗಳಲ್ಲಿ ಎಷ್ಟೋ ವ್ರತ-ಪೂಜಾವಿಧಿಗಳು ಹೇಳಲ್ಪಟ್ಟಿವೆಯಷ್ಟೆ! ಒಂದೊಂದು ವ್ರತವನ್ನೂ ಯಾವುದಾದರೊಂದು ಫಲವನ್ನುದ್ದೇಶಿಸಿ ಮಾಡತಕ್ಕುದು. ಆಯಾ ವ್ರತವನ್ನು

ಮಾಡಿ, ಆ ವ್ರತಾಭಿಮಾನಿ ದೇವತೆಯನ್ನು ತೃಪ್ತಿಪಡಿಸಿದರೆ, ಕರ್ತೃವಿನ ಶ್ರದ್ಧಾ ಭಕ್ತಿಗಳನ್ನನುಸರಿಸಿ ಫಲವಾಗುವುದು. ಮಾಡದಿದ್ದರೆ ಅದರಿಂದ ಪಾಪ ಸಾಧನೆಯಿಲ್ಲ. ಆದುದರಿಂದ ಅವು ಕಾಮ್ಯವ್ರತಗಳು ಎನಿಸಿಕೊಳ್ಳುವುವು. ಆದರೆ ಏಕಾದಶೀ ಮಹಾ ವ್ರತದ ವಿಚಾರವು ಅಂಥದಲ್ಲ! ಅದನ್ನು ನಿತ್ಯವಿಧಿಯಂತೆ ಪ್ರತಿಯೊಬ್ಬರೂ ಆಚರಿಸಬೇಕಾದುದು ಕರ್ತವ್ಯವು. ಏಕೆಂದರೆ ಧರ್ಮ ಅರ್ಥ ಕಾಮ ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನು ಸಾಧಿಸತಕ್ಕುದು ಮನುಷ್ಯನಾಗಿ ಜನ್ಮಿಸಿದವನ ಆದ್ಯ ಕರ್ತವ್ಯವಷ್ಟೆ '-ಜೀವಿತದ ಧ್ಯೇಯವಷ್ಟೆ! ಈ ಮಹಾವ್ರತದ ಆಚರಣೆಯಿಂದ ಆ ನಾಲ್ಕು ಪುರುಷಾರ್ಥಗಳೂ ಲಭ್ಯವಾಗುವುವು. *ಧರ್ಮಾರ್ಥ ಕಾಮ ಮೋಕ್ಷಗಳ ಸಾಧನೆಗೆ ಆರೋಗ್ಯವೇ ಮೂಲವೆಂದೂ, ಅದೇ ಉತ್ತಮ ಸಾಧನವೆಂದೂ ಆರ್ಯೋಕ್ತಿಯುಂಟಲ್ಲವೆ? ಅಂತಹ ಆರೋಗ್ಯ ಭಾಗ್ಯವು ಈ ವ್ರತಪಾಲನೆಯಿಂದ ಲಭ್ಯವಾಗುವುದು. ಇದನ್ನು ಆಚರಿಸತಕ್ಕ ವಿಧಿಯನ್ನು ಹೇಳುವೆವು ಕೇಳು. ಪ್ರತಿಪಕ್ಷದ ದಶಮಿಯ ದಿನ ಸ್ನಾನಾಹ್ನಿಕಗಳನ್ನು ಮುಗಿಸಿಕೊಂಡು ಆವಿನ ಒಂದೇ ಹೊತ್ತು ಭೋಜನಮಾಡಬೇಕು. ಮಾರನೆಯದಿನವೇ ಏಕಾದಶಿ. ಆದಿನ ಪೂರ್ತಿಯಾಗಿ ನಿರಾಹಾರವಾಗಿರಬೇಕು. ಮತ್ತು ರಾತ್ರೆಯಲ್ಲಿ ನಿದ್ರೆಯನ್ನೂ ಮಾಡದೆ, ಹಗಲು ರಾತ್ರೆಗಳೆರಡನ್ನೂ ಶ್ರೀ ವಿಷ್ಣುಮೂರ್ತಿಯ ಪೂಜೆ ಭಜನೆಗಳಲ್ಲೂ, ಭಗವತ್ಸಂಬಂಧವಾದ ಪುರಾಣ ಪುಣ್ಯಕಥಾಶ್ರವಣಾದಿಗಳಲ್ಲೂ-ಮುಖ್ಯ ಸಚ್ಚಿಂತನೆಯಲ್ಲಿ ಕಳೆಯಬೇಕು. ಮಾರನೆಯ ಪ್ರಾತಃಕಾಲ, ಎಂದಿನಂತೆ ಸ್ನಾನಾಹ್ನಿಕಗಳನ್ನು ತೀರಿಸಿಕೊಂಡು ಸ್ವಾಮಿಯ ಆರಾಧನೆಯನ್ನೂ ನಡೆಯಿಸಿ, ಅತಿಥಿ ಅಭ್ಯಾಗತರೊಡನೆ ಮಿತಾಹಾರ ಗ್ರಹಣಮಾಡಬೇಕಲ್ಲದೆ, ಆ ದಿನವೂ ಏಕಭುಕ್ತದಿಂದ ಇರಬೇಕು. ಈ ದಶಮಿ ಏಕಾದಶಿ ದ್ವಾದಶಿ ದಿನತ್ರಯದಲ್ಲೂ ಗೃಹಸ್ಥನು ಏಕಶಯ್ಯೆಯಿಂದ ನಿಷ್ಠನಾಗಿರಬೇಕೆಂದು ಹೇಳಬೇಕಾದುದಿಲ್ಲವಷ್ಟೆ! ಇದು ಏಕಾದಶಿಯ ವ್ರತಾಚರಣ ವಿಧಿಯು. ಆದರೆ ಇಷ್ಟುಮಾತ್ರವಲ್ಲ. ದೇಹಕ್ಕೆ ಸಂಬಂಧಪಟ್ಟ ಈ ಕ್ರಿಯೆಯೊಂದಿಗೆ ಮನಸ್ಸು ಸಂಬಂಧ ಪಡದಿದ್ದರೆ ಪ್ರಯೋಜನವಿಲ್ಲ. ದೇಹವನ್ನು

---

* ಧರ್ಮಾರ್ಥಃ ಕಾಮಮೋಕ್ಷಾಣಾಂ ಆರೋಗ್ಯಂ ಮೂಲ ಮುತ್ತಮಂ ||

ಧರ್ಮಾಂಗದ ಬಾಲಕನು—'ತಾಯೇ ಶೋಕಿಸದಿರು. ಈ ದೇಹವು ಯಾರದು, ಯಾರಿಂದ ಬಂದುದು? ಈ ತಂದೆಯಿಂದಲೇ ಅಲ್ಲವೆ! ಆತನ ಸತ್ಯವ್ರತಪಾಲನೆಗಾಗಿ ಈ ತನುವು ಉಪಯೋಗವಾಗುವಂತಿದ್ದರೆ ಅದರ ಸಾರ್ಥಕತೆಗಾಗಿ ಸಂತೋಷಿಸಬೇಕಲ್ಲದೆ, ವ್ಯಸನಪಡಲೇಕೆ? ಪಂಚಭೂತಾತ್ಮಕವಾದ ಈ ದೇಹವು ಎಂದಿದ್ದರೂ ನಾಶವಾಗತಕ್ಕುದೇ ಅಲ್ಲವೆ! ಮಾತೆಯೇ ತಂದೆಯು ತನ್ನ ವ್ರತಪಾಲನೆ ಮಾಡಿಕೊಳ್ಳಲು ಸಮ್ಮತಿಸು' ಎಂದು ನುಡಿದನು. ಮತ್ತು ರುಕ್ಮಾಂಗದನ ಕಡೆಗೆ ತಿರುಗಿ—'ತಂದೆಯೇ, ಸಾವಕಾಶಬೇಡ. ಇದೋ ಸಿದ್ಧನಾಗಿರುವೆನು. ನಿನ್ನ ಕೈಕತ್ತಿಯಿಂದ ನನ್ನೀ ಶಿರವನ್ನು ಛೇದಿಸಿ ಬಲಿಕೊಟ್ಟು ನಿನ್ನ ಸತ್ಯ ವಚನವನ್ನೂ ಈ ಮಹಾವ್ರತವನ್ನೂ ಪಾಲಿಸಿಕೋ!' ಎಂದನು. ಬಾಲಭಾಷೆಯಿಂದ ತನ್ನ ಮಗ ನಾಡುತ್ತಿದ್ದ ಆ ಮಾತುಗಳು ರಾಜನಿಗೆ ಅತಿಶಯ ಸಂತಾಪವನ್ನುಂಟುಮಾಡುತ್ತಿರಲು, ಉಪಾಯ ತೋರದೆ—'ಹಾ ಪುತ್ರಾ, ತಂದೆಯಾದ ನಾನೇ ನಿನಗೆ ಮೃತ್ಯುವಾಗಿ ಏರ್ಪಟ್ಟೆನಲ್ಲಾ-ಅಕಟಾ ಈ ವಿಧಿಯನ್ನು ಮೀರಲೆಂತು?' ಎಂದು ಹತಾಶನಾಗಿ ನಿಂತನು. ಆಗ ಧರ್ಮಾಂಗದನು—'ಜನಕನೇ, ಲೋಕದಲ್ಲಿ ಪತ್ನಿ ಪುತ್ರ ರಾಜ್ಯ ಐಶ್ವರ್ಯ ಯೌವನಾದಿಗಳಲ್ಲೊಂದೂ ಶಾಶ್ವತವಾದುದಲ್ಲ. ಶಾಶ್ವತವಾದುದು ಕೀರ್ತಿಯೊಂದೆ! ಮನುಷ್ಯನು ಇವುಗಳಲ್ಲಾವುದನ್ನಾದರೂ ಅಥವ ಈ ಎಲ್ಲವನ್ನೂ ಆದರೂ ತ್ಯಜಿಸಿ ಕೀರ್ತಿಯನ್ನು ಕಾಪಾಡಿಕೊಳ್ಳತಕ್ಕುದು ಧರ್ಮವು. ಅದರಲ್ಲೂ ಸೂರ್ಯವಂಶ ಶ್ರೇಷ್ಠನಾದ ನೀನು ಹಾಗೆ ಆಚರಿಸತಕ್ಕುದು ಕರ್ತವ್ಯವೇ ಅಲ್ಲವೆ! ಸಾವಕಾಶ ಮಾಡಲೇಕೆ! ನನ್ನೀ ದೇಹವೂ ಜನ್ಮವೂ ಸಾರ್ಥಕವಾದುವು. ಬೇಗನೆ ಕೆಲಸವನ್ನು ತೀರಿಸು' ಎಂದು ನುಡಿದನು.

ತೀರ್ವ ಸ್ಥಿರಾಗಿಯುಂತೆ ಕೇವಲ ದೇಹಾಭಿಮಾನವನ್ನು ತೊರೆದು ನಿರ್ಭಯದಿಂದ ನುಡಿಯುತ್ತಿದ್ದ ಆ ಹಸುಳೆಯ ಭಾಷಿತವು ಅಲ್ಲಿ ನೆರೆದ ಸಮಸ್ತರಿಗೂ ಹೃದಯದ್ರಾವಕವಾಗಿದ್ದಿತು. ಎಲ್ಲರ ಕಣ್ಣುಗಳಿಂದಲೂ ಅಶ್ರುಧಾರೆಗಳು ಸಾರೋದ್ಧಾರವಾಗಿ ಸುರಿಯತೊಡಗಿದುವು. ರಾಜನೂ ಕಣ್ಣೀರಿನಿಂದ ದೃಷ್ಟಿಯು ಮುಚ್ಚಿ ಹೋಗುತ್ತಿರಲು ವಸ್ತ್ರಗಳಿಂದ ಒರೆಸಿಕೊಳ್ಳುತ್ತ, ಬಿಕ್ಕಿಬಿಕ್ಕಿ ಅಳುತ್ತ ಉಪಾಯ ತೋರದೆ ನಿಂತನು. ಅತ್ತ ರಾಣಿಯು ಮೂರ್ಛೆ ಹೋಗಿ ಬಿದ್ದಿರುವಳು. ಆ ಸ್ಥಿತಿಯಲ್ಲಿ ಅಲ್ಲಿ ಎಚ್ಚರಿದ್ದ ವ್ಯಸನ

ಸಡದೆ ನಿಂತಿದ್ದವಳೆಂದರೆ, ಆ ಕಟುಕ ಮನಸ್ಸಿನ ಮೋಹಿನಿಯೊಬ್ಬಳೇ ! ಅವಳು ಈ ಪರಿಯನ್ನು ಕಂಡು—'ರಾಜೇಂದ್ರಾ ಸತ್ಯಸಂಧಾ, ಈಗಲೂ ಚಿಂತಿಸಬೇಕಾದುದಿಲ್ಲ. ಮಗನನ್ನು ಬಲಿ ಕೊಡುವುದೆಂದರೇನು ! ವ್ರತವೆಂದರೇನು, ಇದರಿಂದ ಮೋಕ್ಷ ಸಿಗುವುದೆಂದರೇನು ! ಇದೆಲ್ಲ ಭ್ರಾಂತಿಯಲ್ಲವೆ ! ಚಿಂತಿಸುವೆಯೇಕೆ ? ಎಲ್ಲರಿಗೂ ಅಭಯಕೊಟ್ಟು ಕಳುಹಿಸು. ಏಳು ಶಯ್ಯಾಗೃಹಕ್ಕೆ ಹೋಗೋಣ!' ಎಂದು ಮೂದಲಿಸತೊಡಗಿದಳು. ತನ್ನ ಜಳ್ಳು ಮನಸ್ಸನ್ನು ಹಂಗಿಸುವಂತಿದ್ದ ಆ ಮಾತುಗಳು ರಾಜನ ಹೃದಯವನ್ನು ಹರಿತವಾದ ಚೂರಿಗಳಂತೆ ಕೊರೆಯತೊಡಗಿದುವು. ಒಡನೆ ರಾಜನು ಏಕ್ಷತ್ರವನಂತೆ ಧೈರ್ಯ ತಾದುಕೊಂಡು, ಮನಸ್ಸನ್ನು ಗಟ್ಟಿ ಮಾಡಿಕೊಂಡು ಕೈಯಲ್ಲಿ ಚಂದ್ರಾಯುಧವನ್ನು ಧರಿಸಿ ಮೋಹಿನಿಯನ್ನು ಕುರಿತು—'ಎಲೆ ತೊತ್ತೆ ಏನೆಂದು ಬೊಗಳುವೆ ? ರುಕ್ಮಾಂಗದನು ಹಂದೆಯಲ್ಲ. ಚಂದ್ರಸೂರ್ಯರಗತಿ ತಪ್ಪಿದರೂ, ಅಗ್ನಿಗೆ ಶೈತ್ಯತೆಯುಂಟಾದರೂ ನಾನು ಮೋಹಪಾಶ ಬದ್ಧನಾಗಿ ಈ ಮಹಾವ್ರತವನ್ನು ತ್ಯಜಿಸತಕ್ಕವನಲ್ಲ.' ಎಂದು ನುಡಿದು-ಮಗನನ್ನು ಕುರಿತು—'ಪುತ್ರಾ ಧರ್ಮಾಂಗದಾ ಸಿದ್ಧನಾಗು. ನಿನ್ನ ಪಿತನಾದ ರುಕ್ಮಾಂಗದನು ಸತ್ಯವಾಕ್ಪಾಲನೆಗಾಗಿ ಈ ದಿನ ನಿನ್ನೀ ತನುವನ್ನು ವಧಿಸಲು ಸಿದ್ಧನಿರುವನು' ಎಂದು ನುಡಿದು ಕತ್ತಿಯನ್ನು ಝಳಪಿಸಿದನು. ಅದರ ಹೊಳಪು ಆ ಸಭೆಯಲ್ಲಿದ್ದ ಎಲ್ಲರ ಕಣ್ಣುಗಳಿಗೂ ಕತ್ತಲೆಯನ್ನುಂಟುಮಾಡಿತು. ಆ ಭಯಂಕರ ನೋಟವನ್ನು ನೋಡಲಾರದೆ ಎಲ್ಲರೂ ಕಣ್ಣು ಮುಚ್ಚಿದರು. ಧರ್ಮಾಂಗದನು ವಿನೀತನಾಗಿ ತಲೆಯೊಡ್ಡಿ, ಮನಸ್ಸಿನಲ್ಲಿ ಹರಿಧ್ಯಾನ ಮಾಡುತ್ತಾ ಕುಳಿತನು. ರುಕ್ಮಾಂಗದನು ನಿರ್ಧಾರ ಮನಸ್ಕನಾಗಿ ದೃಢ ಹಸ್ತದಿಂದ, ಶ್ರೀ ಹರಿ ಪ್ರೀತಿಯಾಗಲೆಂದು ನುಡಿದು, ಕತ್ತಿಯನ್ನೆತ್ತಿ ಕುವರನ ಕತ್ತಿನಮೇಲೆ ಪ್ರಯೋಗಿಸಿದನು. ಅಲ್ಲಿದ್ದ ಸ್ತ್ರೀಯರೆಲ್ಲರೂ ಒಂದೇಸಾರಿಗೆ 'ಹೋ' ಎಂದು ಅರಚಿ ಗೋಳಿಟ್ಟರು. ಪುನಃ ತಾವು ಕಣ್ದೆರೆದು ನೋಡುವುದರೊಳಗೆ ತಮ್ಮಾ ರಾಜಪುತ್ರನ ರುಂಡವು ಮುಂಡದಿಂದ ಪ್ರತ್ಯೇಕವಾಗಿ ರಕ್ತದ ಕುಳಿಯಲ್ಲಿ ಉರುಳುತ್ತಿರಬಹುದೆಂದು ಭಾವಿಸಿ ಕಣ್ಣು ಬಿಡಲು ಅಂಜುತ್ತಿರಲು, ಇತ್ತ ರಾಜನು ತಾನು ಸರ್ವಶಕ್ತಿಯಿಂದಲೂ ಗುರಿನೋಡಿ ಪ್ರಯೋಗಿಸಿದ್ದರೂ

ಕಠಿಣಶಿಲೆಯನ್ನಾದರೂ ಭೇದಿಸಿಬಿಡುವಂತಹ ತನ್ನ ಕರಕೃಪಾಣವು ಮೃದುವಾದ ಬಾಲಕನ ಕತ್ತನ್ನು ಸಹ ಕತ್ತರಿಸದಿದ್ದ ಪರಿಯನ್ನು ಕಂಡು ಪರಮಾಶ್ಚರ್ಯಪಟ್ಟನು. ಆ ದೃಶ್ಯವನ್ನು ಎವೆಯಿಕ್ಕದೆ ನೋಡಿಕೊಂಡಿದ್ದ ಮೋಹಿನಿಗಾದರೂ ಅದು ಆಶ್ಚರ್ಯವೆನಿಸದಿರಲಿಲ್ಲ. ರಾಜನು ದೃಢವಾಗಿ ನಿಂತುಕೊಂಡು ಮತ್ತೊಂದುಸಾರಿ ಪ್ರಯೋಗಿಸಿದನು. ಆಗಲೂ ವ್ಯರ್ಥವಾಯಿತು. ರಾಜನು ಕಾರಣತಿಳಿಯದೆ ಭ್ರಾಂತನಂತಾದನು. ಎಲ್ಲರೂ ಕೌತುಕಗೊಂಡು ನೋಡುತ್ತಿದ್ದರು ಇತ್ತ ಮೋಹಿನಿಯಾದರೋ—'ರಾಜಾ ಈ ಇಂದ್ರಜಾಲ ವಿದ್ಯೆಗಳಿಂದ ಈ ಮೋಹಿನಿಯು ಮೋಸ ಹೋಗತಕ್ಕವಳಲ್ಲ. ಹೃದಯದಲ್ಲಿ ಪುತ್ರ ಮೋಹವನ್ನಿಟ್ಟುಕೊಂಡು, ಹೊರಗೆ ತೋರುವ ಈ ವೇಷವೇಕೆ! ಈಗ ಪುತ್ರವಧೆಯನ್ನು ಮಾಡಿಯೇ ತೀರಬೇಕೆಂಬ ಅಂತಹ ನಿರ್ಬಂಧವಾದರೂ ಏನು! ಏಕೆ ಆ ಮಾರ್ಗವನ್ನು ಬಿಟ್ಟು ನನ್ನನ್ನು ಕೂಡಿ ಸುಖಿಸಲಾಗದು? ಪ್ರತ್ಯಕ್ಷ ಸುಖಸಾಧನವು ಹಸ್ತಗತವಾಗಿರಲಿಕ್ಕಾಗಿ-ನಿಶ್ಚಿತವಲ್ಲದ ಪರೋಕ್ಷ ಸುಖವನ್ನಪೇಕ್ಷಿಸಿ ಇಷ್ಟು ಪ್ರಯಾಸಪಡಲೇಕೆ!' ಎನ್ನುತ್ತಿದ್ದಳು. ರಾಜನು ಅದನ್ನು ಕೇಳಿ—'ಮೋಹಿನೀ ನಾನು ನಿಶ್ಚಯವಾಗಿಯೂ ವಿನೋದ ಮಾಡುತ್ತಿಲ್ಲ. ಎಂದೂ ವ್ಯರ್ಥವಾಗದ ನನ್ನ ಚಂದ್ರಾಯುಧದ ಗತಿಯು ಇಂದೇಕೆ ಹೀಗಾಗುತ್ತಿರುವುದೋ ತಿಳಿಯಲಾರೆನು! ಆದರೇನು ಚಿಂತೆಯಿಲ್ಲ. ಈ ಸಾರಿ ನೋಡು.' ಎಂದು ನುಡಿದು, ---'ಶ್ರೀ ಹರೇ ನನ್ನನ್ನು ವಚನ ಭ್ರಷ್ಟನನ್ನಾಗಿಸದೆ ಕಾಪಾಡು' ಎಂದು ತನ್ನ ಸರ್ವಶಕ್ತಿಯನ್ನೂ ಉಪಯೋಗಿಸಿ, ಆ ಶಿಶುವಿನ ಕತ್ತಿನಮೇಲೆ ಪ್ರಯೋಗಿಸಿದನು. ಆಶ್ಚರ್ಯವಾಶ್ಚರ್ಯವು! ಆಗ ತೀಕ್ಷ್ಣವಾದ ಉಕ್ಕಿನಿಂದ ಮಾಡಿದ ಆ ಕತ್ತಿಯೇ ಅದೃಶ್ಯವಾಗಿ ಅದರ ಸ್ಥಾನದಲ್ಲಿ ದಿವ್ಯ ಮಲ್ಲಿಕಾ ಪುಷ್ಪದ ಹಾರವೊಂದು ರಾಜಕುಮಾರನ ಕತ್ತಿನಲ್ಲಿ ಶೋಭಿಸಿತು. ಧರ್ಮಾಂಗದನು ಎಂದಿನಂತೆ ಕ್ಷೇಮವಾಗಿಯೇ ಇದ್ದನು.

ಮೂರನೆಯ ಆ ಬಾರಿಯ ಖಡ್ಗಹತಿಯೊಂದಿಗೆ ರಾಜಪುತ್ರನು ನಿಶ್ಚಯವಾಗಿ ಸಾಯುವನೆಂದು ತಿಳಿದು ಆ ದೃಶ್ಯವನ್ನು ನೋಡಲಾರದೆ ಕಣ್ಣು ಮುಚ್ಚಿದ್ದವರೆಲ್ಲರೂ ಕಣ್ತೆರೆದು ನೋಡುವವೇಳೆಗೆ ಆ ರಾಜಪ್ರಾಸಾದವೆಲ್ಲವೂ ಮಾನುಷ ಲೋಕಕ್ಕೇ ಅಪೂರ್ವವೆನಿಸುವ ಒಂದು ದಿವ್ಯ ಕಾಂತಿ

ಯಿಂದ ಪ್ರಕಾಶಿಸಿತ್ತು. ಅದನ್ನು ಕಂಡು ಎಲ್ಲರೂ ಪರಮಾಶ್ಚರ್ಯಮಗ್ನ ರಾಗಿರುತ್ತಿರಲು, ರುಕ್ಮಾಂಗದ ಸಂಧ್ಯಾವಳೀ ಧರ್ಮಾಂಗದರು ಮಾತ್ರ ಶ್ರೀದೇವಿ ಭೂದೇವಿಯರಿಂದ ಸಹಿತನಾಗಿ ಗರುಡಾರೂಢನಾಗಿ ಬಂದ ನೀಲಮೇಘಶ್ಯಾಮ ಸುಂದರನಾದ ಶ್ರೀ ಮಹಾವಿಷ್ಣುವಿನ ಮೋಹನ ಮೂರ್ತಿಯನ್ನು ಪ್ರತ್ಯಕ್ಷ ಕಂಡು ಸಾಷ್ಟಾಂಗದಂಡಪ್ರಣಾಮ ಮಾಡಿ ಪರಿಪರಿಯಿಂದ ಸ್ತೋತ್ರ ಮಾಡುತ್ತಿದ್ದರು. ವಿಷ್ಣುಮೂರ್ತಿಯು— 'ರುಕ್ಮಾಂಗದಾ, ನಿನ್ನ ಸತ್ಯಸಂಧತೆಗೂ ವ್ರತನಿಷ್ಠೆಗೂ ನಿಸ್ಪೃಹತೆಗೂ ಮೆಚ್ಚಿದೆನು. ವಂಶೋದ್ಧಾರಕನಾದ ಏಕಮಾತ್ರ ಪುತ್ರನನ್ನಾದರೂ ಬಲಿ ಯಿತ್ತು, ಈ 'ಹರಿದಿನ'ದ ವ್ರತವನ್ನು ಸಾಧಿಸಲು ಹಿಂಜರಿಯದ ನಿನ್ನಂತೆ ಯಾರು ಮನೋವಾಕ್ಕಾಯಗಳಿಂದ ವ್ರತನಿಷ್ಠರಾಗಿರುವರೋ ಅವರು ನನ್ನ ಕೃಪೆಗೆ ಪಾತ್ರರಾಗಿ ಅಂತ್ಯದಲ್ಲಿ ವಿಷ್ಣುಸಾಯುಜ್ಯವನ್ನು ಹೊಂದು ವರು. ಇದರಲ್ಲಿ ಸಂಶಯವಿಲ್ಲ. ಈ ಮೋಹಿನಿಯೂ ನಿನ್ನ ಪರೀಕ್ಷೆಗಾ ಗಿಯೇ ಬ್ರಹ್ಮದೇವನಿಂದ ಸೃಷ್ಟಳಾಗಿ ಕಳುಹಿಸಲ್ಪಟ್ಟವಳಾದುದರಿಂದ— ಈ ದೇವತಾಕಾರ್ಯವನ್ನು ಸಾಂಗವಾಗಿ ನೆರವೇರಿಸಿರುವ ಅವಳನ್ನಾದರೂ ದ್ವೇಷಿಸಬೇಡಿರಿ. ಮಹಾವ್ರತನಿಷ್ಠರಾದ ನೀನೂ ಸಂಧ್ಯಾವಳಿಯೂ ವೈಕುಂಠವನ್ನು ಕುರಿತು ಪ್ರಯಾಣಮಾಡಿರಿ. ನಿಮ್ಮ ಪುತ್ರನೂ ಧರ್ಮಾತ್ಮ ನೆನಿಸಿ ಜೀವಿಸಿ ಅಗಾಧ ಯಶಸ್ಸನ್ನು ಸಂಪಾದಿಸಿ, ದೇಹಾವಸಾನದಲ್ಲಿ ವೈಕುಂಠ ಲೋಕವನ್ನೈದುವನು' ಎಂದು ನುಡಿದನು. ಆಗ ಮೋಹಿ ನಿಯು—'ದೇವಾ ನನ್ನ ಗತಿಯೇನು' ಎನ್ನಲು,—'ಎಲೌ ಯಾರು ಏಕಾ ದಶಿಯ ಉಪವಾಸ ಜಾಗರಗಳನ್ನು ಮಾಡಿ ದ್ವಾದಶಿಯ ಪಾರಣೆಯನಂತರ ಹಗಲು ನಿದ್ರಿಸುವರೋ ಅವರ ಏಕಾದಶೀ ವ್ರತಪುಣ್ಯವು ನಿನಗೆ ಸೇರುವುದು. ಇಂತು ಅದೃಶ್ಯಳಾಗಿ ಭೂಮಿಯಲ್ಲಿ ವಾಸಿಸಿರು' ಎಂದು ನುಡಿದು, ಧರ್ಮಾಂಗದನಿಗೆ ಪಟ್ಟಾಭಿಷೇಕಮಾಡಿ ಗರುಡಗಮನನಾಗಿ ಅಂತರ್ಹಿತ ನಾದನು. ರುಕ್ಮಾಂಗದ ಸಂಧ್ಯಾವಳಿಯರು ವಿಮಾನದಲ್ಲಿ ಕುಳಿತು ವೈಕುಂಠವನ್ನು ಕುರಿತು ನಡೆದರು. ಧರ್ಮಾಂಗದನು ಧರ್ಮದಿಂದ ರಾಜ್ಯವಾಳತೊಡಗಿದನು.

# ಉ ಪ ಸಂ ಹಾ ರ

ರುಕ್ಮಾಂಗದಮಹಾರಾಜನು ಹೀಗೆ ಅಗಾಧ ಧರ್ಮಪರೀಕ್ಷೆಗೆ ಒಳಪಟ್ಟರೂ ತನ್ನ ಸತ್ಯಸಂಧತೆಯನ್ನು ಕಾಯ್ದುಕೊಂಡು ಶ್ರೀ ವಿಷ್ಣುಮೂರ್ತಿಯ ಕೃಪೆಗೆ ಪಾತ್ರನಾಗಲು ಆತನಿಗೆ ಯಾವ ವ್ರತನಿಷ್ಠೆಯು ಸಹಾಯಕವಾಯಿತೋ ಆ ವ್ರತನಿಷ್ಠೆಯು, ಸದ್ಯಃ ವಿಕಲಿತಾಂಗರೂ ವಿಕಲಿತೇಂದ್ರಿಯರೂ ಆಗಿರುವ ಭಾರತೀಯರ ಕಣ್ಣೆದುರಿನಲ್ಲಿದ್ದು ಅವರಲ್ಲಿ ದೃಢನಿಶ್ಚಯ ತ್ರಿಕರಣಶುದ್ಧಿ, ಸತ್ಯ ಧರ್ಮಾನುಷ್ಠಾನಗಳಲ್ಲಿ ನಂಬಿಕೆ, ಧೈರ್ಯಸಾಹಸಾದಿಗಳು, ನಿರ್ಭೀತಿ ಮುಂತಾದ ಸುಗುಣಗಳನ್ನು ಉಂಟುಮಾಡಲಿ.

ಭಾರತಸ್ತ್ರೀಯರು ಸಂಧ್ಯಾವಳೀದೇವಿಯಂತೆ ಪತಿಭಕ್ತಿ ಪಾರಾಯಣರೂ-ಪತಿಗಳು ಒಂದು ವೇಳೆ ದುರ್ದೈವದಿಂದ ದುಷ್ಪಥಗಾಮಿಗಳಾಗಿರುವ ಸಂದರ್ಭದಲ್ಲೂ ಆರ್ಷೇಯ ಆರ್ಯಧರ್ಮಗಳನ್ನು ಬೋಧಿಸಿ ಸನ್ಮಾರ್ಗದಲ್ಲಿ ಪ್ರೇರಿಸತಕ್ಕವರೂ ಆಗಿರಲಿ.

ಭಾರತಬಾಲಕರು, ತಮ್ಮ ತಾಯಿತಂದೆಗಳು ಅನುಸರಿಸುವ ಸತ್ಯಪಥ ಪಾಲನೆಗಾಗಿ ತಮ್ಮ ದೇಹವನ್ನಾದರೂ ತೆತ್ತು ಸಹಕರಿಸುವಂತಹ ಮನೋದಾರ್ಢ್ಯ, ಸಾಹಸ, ನಿರ್ಭಯತ್ವಗಳನ್ನು ಗಳಿಸಲಿ.

ಸರ್ವೇಶನು ಭಾರತೀಯರಲ್ಲಿ ದುರ್ದೈವದಿಂದ ಬಂದು ನೆಲೆಸಿರುವ ಆಲಸ್ಯತೆ ಅಶಕ್ತತೆ ಅಯೋಗ್ಯತೆಗಳನ್ನು ನೀಗಿಸಿ, ಅವರೂ ಮನುಷ್ಯರಾಗಿ ಭಾರತೀಯೋದ್ಧಾರಕ್ಕಾಗಿ ಶ್ರಮಿಸಲು ಆವಶ್ಯಕವಾದ ಶಕ್ತಿ ಸಾಮರ್ಥ್ಯಗಳನ್ನು ಅನುಗ್ರಹಿಸಿ ರಕ್ಷಿಸಲಿ.

**ತಥಾಸ್ತು.**



# ಸಿ. ಪಿ. ಸಿ. ಮೋಟಾರ್ ಸರ್ವಿಸ್.

## ಚಿ ಕ್ಕ ಮ ಗ ಳೂ ರು .

ಕಡೂರು - ಚಿಕ್ಕಮಗಳೂರು-ಮೂಡಗೆರೆ - ಕೊಟ್ಟಿಗೆಹಾರ - ಚಾರಮಾಡಿ-ಧರ್ಮಸ್ಥಳ-ಬೆಳ್ತಂಗಡಿ - ಬಂಟ್ವಾಳ-ಮಂಗಳೂರು-ಉಪ್ಪಿನಂಗಡಿ-ಪುತ್ತೂರು-ಮೂಡಬಿದ್ರೆ - ಕಾರ್ಕಳ- ಉಡಪಿ - ಮೂಡಗೆರೆ-ಸಕಲೇಶಪುರ-ತರೀಕೆರೆ - ಚಿಕ್ಕಮಗಳೂರು, ಈ ಪ್ರಾಂತ ಪ್ರತಿದಿನವೂ ಸರ್ವಿಸ್ಸುಗಳು ಓಡಾಡುತ್ತವೆ.

ವಿಶೇಷ ಸಮಾಚಾರಕ್ಕೆ ಹೆಡ್ ಆಫೀಸಿಗೆ ಬರೆದು ತಿಳಿದುಕೊಳ್ಳಬೇಕೆಂದು ವಿನಂತಿ.

ಪಿ. ಎಲ್. ಹನುಮಂತಪ್ಪ.
ಫ್ರಾಂರಡೂನ್ ಸೊರಾಬ್.
ಕೆ. ಸೂರಪ್ಪ ಶೆಟ್ಟಿ.

**ಪ್ರೊಪ್ರೈಟರ್ಸ್**
**ಸಿ. ಪಿ. ಸಿ. ಮೋಟಾರ್ ಸರ್ವಿಸ್**
**ಚಿಕ್ಕಮಗಳೂರು.**

---

**ಸುಬೋಧ ಪ್ರಕಟನಾಲಯದಿಂದ ಪ್ರಕಟವಾಗುವ**

# ಶ್ರೀ ಕರ್ಣಾಟಕ ಹರಿದಾಸ ಕೀರ್ತನ ತರಂಗಿಣಿ

**ಪ್ರಭವ ಸಂವತ್ಸರ ಚೈತ್ರ ಮಾಸದಿಂದ ಪ್ರಥಮ ಸಂಪುಟವು ಪ್ರಾರಂಭವಾಗಿದೆ.**

ಶ್ರೀ ಪುರಂದರದಾಸರು, ಕನಕದಾಸರೇ ಮೊದಲಾದ ಸುಪ್ರಸಿದ್ಧ ಕರ್ಣಾಟಕ ಹರಿದಾಸರುಗಳು ಲೋಕೋಪಕಾರಾರ್ಥವಾಗಿ ರಚಿಸಿದ ಕೀರ್ತನೆ-ಸುಳಾದಿ-ಉಗಾಭೋಗಗಳು ಬಹಳ ಶುದ್ಧ ರೀತಿಯಿಂದ ಮಾಸ ಪುಸ್ತಕ ರೂಪದಲ್ಲಿ ಪ್ರಕಟವಾಗುವುವು. ಪ್ರತಿ ಶುದ್ಧ ಪೌರ್ಣಿಮೆಯ ದಿನ ಪ್ರಕಟವಾಗುವುದು.

| | **ವಾರ್ಷಿಕ ಚಂದಾ** | **ಬಿಡಿ ಪ್ರತಿ** |
|---|---|---|
| ಉತ್ತಮ ಪ್ರತಿ | ೨—೪—೦ | ೦—೩—೦ |
| ಸಾಮಾನ್ಯ ಪ್ರತಿ | ೧—೮—೦ | ೦—೨—೦ |

ಮೇಲ್ಕಂಡ ಕೀರ್ತನ ತರಂಗಿಣಿಯ, ಒಂದನೆಯ ವರ್ಷದ ಮೊದಲನೆಯ ಆರು ಸಂಚಿಕೆಗಳು ಒಟ್ಟಾಗಿ ಸೇರಿ ಅಂದವಾಗಿ ದಪ್ಪವಾದ ರಟ್ಟಿನಿಂದ ಬೈಂಡಾಗಿರುವ ಪ್ರತಿಗಳು ಮಾರಾಟಕ್ಕೆ ಸಿದ್ಧವಾಗಿದೆ.

**ಬೆಲೆ ಸಾಮಾನ್ಯ ಪ್ರತಿ** ೦—೧೪—೦ **ಉತ್ತಮ ಪ್ರತಿ** ೧—೪—೦

(ಅಂಚೇವೆಚ್ಚ ಬೇರೆ)

ಇಲ್ಲಿ ನೋಡಿ !        ಸೋಪು !!        ಗುಣ ಅತ್ಯಧಿಕ !!!

# ಅಕ್ಬರ್ ಷಾ ಸೋಪು

**ಬೆಲೆ ಅತಿ ಸುಲಭ**        **ಕೇಕ್ ೧ಕ್ಕೆ ಒಂದೇ ಆಣೆ**

**ಅಕ್ಬರ್ ಷಾ ಸೋಪಿನ** ಒಂದು "ಕೇಕ್" ಹತ್ತು ಬಟ್ಟೆಗಳನ್ನು ಶುದ್ಧವಾಗಿ ಒಗೆಯಲು ಸಾಕಾಗುತ್ತದೆ.

**ಅಕ್ಬರ್ ಷಾ ಸೋಪು** ಬಟ್ಟೆಗಳಿಗೆ ಅಪಾಯಕರವಾದ ಲೋಹ ಸಂಬಂಧ ಪದಾರ್ಥಗಳ ಮಿಶ್ರಣದಿಂದಲ್ಲದೆ ಕೇವಲ ವನಸ್ಪತಿ ಪದಾರ್ಥಗಳಿಂದಲೇ ತಯಾರಿಸಲ್ಪಟ್ಟಿದೆ.

**ಅಕ್ಬರ್ ಷಾ ಸೋಪು** ಬಟ್ಟೆಗಳ ಅನೇಕ ಬಗೆಯ ಹಳೆಯ ಕಲೆಗಳು, ಅನೇಕ ದಿನಗಳಿಂದ ಕೂಡಿದ ಕಶ್ಮಲ ಮುಂತಾದ ಕೊಳೆಯನ್ನೆಲ್ಲಾ ಹೋಗಲಾಡಿಸಿ ಸ್ವಚ್ಛವಾದ ಹಿಮಜಲದಂತೆ ಬಟ್ಟೆಗಳನ್ನು ಶುದ್ಧಿ ಮಾಡುತ್ತದೆ.

**ಅಕ್ಬರ್ ಷಾ ಸೋಪು** ಬಟ್ಟೆಗೆ ಹಾಕುವಾಗ ಶೀಘ್ರವಾಗಿ ಕರಗಿ ಹೋಗದೆ ನಿಧಾನವಾಗಿ ಸವೆದು ಬಾಳಿಕೆ ಬರುತ್ತದೆ.

ಇದಲ್ಲದೆ ನಮ್ಮ ಫ್ಯಾಕ್ಟರಿಯಲ್ಲಿ ರೇಷ್ಮೆ ಬಟ್ಟೆಗಳಿಗೂ ಫ್ಲ್ಯಾನಲ್‌ಗಳಿಗೂ ಉಪಯೋಗಿಸುವ '**ಸೀ–ಸ್ಟೈಟ್ ಸೋಪ್**' ಎಂಬ ಹೆಸರಿನ ಉತ್ತಮ ದರ್ಜೆಯ ಸೋಪುಗಳೂ ತಯಾರಾಗುತ್ತವೆ.

ಒಂದುಸಾರಿ ನಮ್ಮ ಕಂಪೆನಿಯ ಈ ಸೋಪುಗಳನ್ನು ಕೊಂಡು ಉಪಯೋಗಿಸಿದವರು ಬೇರೆ ಯಾವ ಬಗೆಯ ಸೋಪನ್ನೂ ಕೊಳ್ಳಲಾರರು.

ವ್ಯಾಪಾರಕ್ಕಾಗಿ ಮೊತ್ತವಾಗಿ ಕೊಳ್ಳುವವರಿಗೆ ಧಾರಾಳವಾದ ಡಿಸ್ಕೌಂಟು ಕೊಡಲಾಗುತ್ತೆ. ಹೆಚ್ಚು ವಿಚಾರಕ್ಕೆ ಕೆಳಗಿನ ನಮ್ಮ ಫ್ಯಾಕ್ಟರಿ ವಿಳಾಸಕ್ಕೆ ಬರೆಯಿರಿ.



ಟ್ರೇಡ್ ಮಾರ್ಕ್

☞ **ದಿ ಬೆಂಗಳೂರು ಟ್ರೇಡಿಂಗ್ ಕಂಪೆನಿ,**
**ಸೋಪು ತಯಾರು ಮಾಡುವ ಕಾರ್ಖಾನೆ,**
ನಂ. ೨೨ ಮುರುಗ ಪಿಳ್ಳೆ ಬೀದಿ,
ಬೆಂಗಳೂರು ದಂಡು.

**(S.K.G.-5)**

ಈಬಗೆಯ ನಿರ್ಬಂಧದ ನಿಬಂಧನೆಗಳಿಗೆ ಒಳಪಡಿಸಬೇಕೆಂಬುದಕ್ಕೆ ಮನಸ್ಸನ್ನು ಸುಸ್ಥಿತಿಯಲ್ಲಿಡಲು ಸಾಧ್ಯವಾಗಬೇಕೆಂಬುದೇ ಕಾರಣವು. ನವಿಸ್ಮಾದೇಹವು ಯಾವ ಪಂಚಜ್ಞಾನೇಂದ್ರಿಯ-ಪಂಚಕರ್ಮೇಂದ್ರಿಯಗಳಿಗೆ ಅಧೀನವಾಗಿದೆಯೋ, ಆ ಇಂದ್ರಿಯಗಳಿಗೆ ಅಭಿಮಾನಿ ದೇವತೆಗಳಿರುವಂತೆಯೇ, ಏಕಾದಶೇಂದ್ರಿಯವಾದ ಮನಸ್ಸಿಗೂ ಅಭಿಮಾನದೇವತೆಯೊಂದುಂಟು. ಶ್ರೀಹರಿಯೇ-ಶ್ರೀಮನ್ನಾರಾಯಣಮೂರ್ತಿಯೇ ಮನೋಭಿಮಾನಿದೇವತೆಯು. ಆ ಶ್ರೀಹರಿಯ ಪ್ರೀತ್ಯರ್ಥವಾಗಿಯೇ ಈ ವ್ರತ ಮಾಡತಕ್ಕದು. ಅದುದರಿಂದಲೇ ಏಕಾದಶಿಗೆ ಹರಿವಾಸರವೆಂಬ ಅನ್ವರ್ಥನಾಮವು ಪ್ರಾಪ್ತವಾಗಿದೆ. ಆಸ್ತಿಕ ಶಿರೋಮಣಿಯಾದ ನಿನಗೆ ಹೆಚ್ಚು ಹೇಳಬೇಕಾದುದೇನು! ಏಕಾದಶಿಯ ಈ ಮಹಾವ್ರತವನ್ನು ನಿಷ್ಠೆಯಿಂದ ನೆರವೇರಿಸಿ, ಶ್ರೀ ವಿಷ್ಣುಮೂರ್ತಿಯನ್ನು ಧ್ಯಾನಾರ್ಚನೆಗಳಿಂದ ಭಜಿಸಿ ಸೇವಿಸು. ಅಂದು ಇತರ ಯಾವ ದುರ್ವ್ಯವಹಾರದಲ್ಲೂ ಕಾಲಯಾಪನೆ ಮಾಡದೆ, ಕಾಮಿನೀಕಾಂಚನಾದಿ ಸಂಸರ್ಗದಿಂದ ದೂರನಾಗಿ, ಭಗವತ್ಸಂಬಂಧವಾದ ಚಿಂತನೆಯಲ್ಲೇ ಇದ್ದು ಸದ್ವ್ಯವಹಾರವನ್ನಿಟ್ಟುಕೊಂಡಿರು. ಶ್ರೀ ವಿಷ್ಣುಮೂರ್ತಿಯ ಕೃಪಾ ಕಟಾಕ್ಷವುಂಟಾಗುವುದು.' ಎಂದು ನುಡಿದರು.

ಮಹರ್ಷಿಗಳು ಹೇಳಿದ ಮೇಲ್ಕಂಡ ವಿಚಾರಗಳಿಂದ ರಾಜನಿಗೆ ಪರಮಾನಂದವಾಯಿತಾದರೂ ಒಂದು ವಿಷಯದಲ್ಲಿ ಸಂದೇಹವು ಉಳಿಯಿತು. ಆಗ ಆತನು —'ಮಹರ್ಷಿವರ್ಯರೇ ನಾನು ಆ ದೇವವಿಮಾನವು ಆ ವೃದ್ಧಳ ಉಪವಾಸ ಫಲದ ಮಹಿಮೆಯಿಂದ ಚಲನ ಸಾಮರ್ಥ್ಯವನ್ನು ಹೊಂದಿತೆಂದು ಹೇಳಿದೆನಲ್ಲವೆ! ಆ ವಿಷಯದಲ್ಲಿ ನನಗೊಂದು ಸಂದೇಹವಿದೆ. ಆ ಮುದುಕಿಗೆ ಈ ವ್ರತೋದ್ದೇಶವಾಗಲಿ ಯಾವುದೊಂದು ಉನ್ನತ ಭಾವನೆಯಾಗಲಿ ಇಲ್ಲದೆ ಬಲವಂತಕ್ಕಾಗಿ ಮಾಡಿದ ಆ ಉಪವಾಸದ ಫಲದಿಂದ ದೇವವಿಮಾನಕ್ಕೆ ಗಮನ ಸಾಮರ್ಥ್ಯವು ಪ್ರಾಪ್ತವಾದುದು ಹೇಗೆ ಎಂಬುದನ್ನು ತಿಳಿಯಲಾರದವನಾಗಿದ್ದೇನೆ. ಆ ವಿಚಾರದಲ್ಲಿ ನನಗೆ ತಿಳಿವಳಿಕೆ ಕೊಡಬೇಕು' ಎಂದನು. ಆಗಲವರು —'ಕೇಳು ರಾಜನೆ ಅಗ್ನಿಗೆ ಉಷ್ಣತೆಯಿದೆ ಎಂಬುದನ್ನು ತಿಳಿದು ಮುಟ್ಟಿದರೂ ತಿಳಿಯದೆ ಮುಟ್ಟಿ

ದರೂ, ಎಂತೂ ಸುಹವುದಲ್ಲವೆ! ನೀರಿಗೆ ಬಾಯಾರಿಕೆಯನ್ನು ಕಳೆವ ಸಾಮರ್ಥ್ಯವು ಇದೆ ಎಂಬುದನ್ನು ತಿಳಿದು ಕುಡಿದರೂ ತಿಳಿಯದೆ ಕುಡಿದರೂ ಎಂತೂ ಬಾಯಾರಿಕೆಯು ಇಂಗುವುದಲ್ಲವೆ? ಹಾಗೆಯೇ ಆಕೆಯು ಉಪವಾಸದ ಉದ್ದೇಶ-ಪ್ರಯೋಜನಗಳನ್ನು ತಿಳಿಯದೆ ಮಾಡಿದರೂ ಅದರಿಂದ ದೇಹದಮೇಲೆ ಆಗುವ ಪರಿಣಾಮವೇನೋ ಆಗಿದ್ದಿತಲ್ಲವೆ! ಆದರೆ ನಿಜವಾದ ಉದ್ದೇಶ-ಪ್ರಯೋಜನಗಳೂ ತಿಳಿದು, ಆ ಕ್ರಿಯೆಯೊಂದಿಗೆ ಮನಸ್ಸೂ ಬೆರೆದಿದ್ದರೆ, ಮನಃಪ್ರಸನ್ನತೆಯೂ ಪ್ರಾಪ್ತವಾಗುತ್ತಿತ್ತೆಂಬುದಕ್ಕೆ ಸಂಶಯವಿಲ್ಲ. ಆ ವಿಚಾರವು ಅವಳಿಗೆ ತಿಳಿದಿರಲಿಲ್ಲವಾಗಿ, ಅದರಿಂದುಂಟಾಗತಕ್ಕ ಫಲವೂ ಅವಳಿಗೆ ಲಭ್ಯವಿಲ್ಲ. ಅದು ಹೋಗಲಿ! ಆದರೆ ಅವಳ ಅಷ್ಟುಮಾತ್ರ ಕ್ರಿಯೆಯಿಂದ ಪ್ರಾಪ್ತವಾದ ಫಲವನ್ನೇ ದೇವದೂತರು ಉಪಯೋಗಿಸಿಕೊಂಡರು. 'ಕ್ರಿಯಾಸಿದ್ಧಿಃ ಸತ್ತ್ವೇ ಭವತಿ ಮಹತಾಂ ನೋಪಕರಣೇ' ಎಂದರೆ ಮಹಾತ್ಮರಿಗೆ ಕಾರ್ಯಸಿದ್ಧಿಯು ಅವರ ಸತ್ತ್ವದಿಂದಲ್ಲದೆ ಅವರು ಉಪಯೋಗಿಸುವ ಉಪಕರಣಗಳಿಂದ ಪ್ರಾಪ್ತವಾಗುವುದಿಲ್ಲವೆಂಬ ಆರ್ಯೋಕ್ತಿಯಂತೆ, ಆ ದಿವ್ಯ ಶಕ್ತಿಯುತರಾದ ದೇವದೂತರೂ ಆ ಫಲವನ್ನು ನಿಮಿತ್ತಮಾತ್ರ ಉಪಯೋಗಿಸಿಕೊಂಡರಲ್ಲದೆ ಅನ್ಯಥಾ ಇಲ್ಲ. ತೃಣವನ್ನು ಬ್ರಹ್ಮಾಸ್ತ್ರವಾಗಿ ಉಪಯೋಗಿಸಿದುದಕ್ಕೆ ಶ್ರೀರಾಮನ ಅನುಪಮಯೋಗಶಕ್ತಿಯೇ ಕಾರಣವಲ್ಲವೆ! ಕರಡಿ ಕಪಿಗಳನ್ನು ನೆರಹಿಕೊಂಡು ಪ್ರಬಲ ಬಲಶಾಲಿಯಾದ ರಾವಣನ ಅಸಂಖ್ಯ ಸೈನ್ಯವನ್ನು ಜಯಿಸಿದುದಕ್ಕೆ ಆತನ ಅದ್ವಿತೀಯ ಸಂಘಟನಸಾಮರ್ಥ್ಯವೇ ಕಾರಣವಲ್ಲವೆ! ಹಾಗೆಯೇ ಸತ್ತ್ವಶಾಲಿಗಳ ಕೈಯಲ್ಲಿ ಉಪಕರಣವು ನಿಮಿತ್ತಮಾತ್ರವೆಂದು ತಿಳಿ. ಆ ವೃದ್ಧಳು ಮನಸ್ಸೊಂದು ಕಡೆ, ಬುದ್ಧಿಯೊಂದು ಕಡೆ, ಹೀಂಗಿದ್ದು ಮಾಡಿದ ಉಪವಾಸವೇ ಒಂದು ಉಪಕರಣವಾಗಿ ಉಪಯೋಗವಾಗಲು ಶಕ್ತವಾಗಿದ್ದಮೇಲೆ, ತ್ರಿಕರಣಗಳನ್ನೂ ಏಕತ್ರ ಸಂಯೋಜಿಸಿ ಮಾಡುವ ಉಪವಾಸದಿಂದ ಅಗಾಧ ಪ್ರಯೋಜನವುಂಟಾಗುವುದೆಂಬುದನ್ನು ಹೇಳಬೇಕಾದುದೇನು? ಮನಸ್ಸಿಗೆ ಎಂತಹ ಪ್ರಸನ್ನತೆಯುಂಟಾಗಬಹುದೆಂಬುದನ್ನು ತಿಳಿಸಬೇಕಾದುದೇನು?' ಎಂದು ನುಡಿದು ಆ ಮಹರ್ಷಿಗಳು ತಪೋವನಾಭಿಮುಖವಾಗಿ ಪ್ರಯಾಣಮಾಡಿದರು.

ಸಾವಧಾನದಿಂದ ಓದುತ್ತಾ ಮುಂದರಿಸಿರುವ ವಾಚಕಮಹಾಶಯರಿಗೆ ನಾವು ಏನೋ ಒಂದು ಕಟ್ಟುಕಥೆಯನ್ನು ಹೇಳತೊಡಗಿದ್ದೇವೆಂಬ ಭಾವ ನೆಯುಂಟಾಗಬಹುದು. ಆದರೆ ಆಧ್ಯಾತ್ಮಿಕ ತತ್ತ್ವಗಳನ್ನು ಪ್ರಾಪಂಚಿಕ ವ್ಯವಹಾರಕ್ಕೆ ಸಂಬಂಧಪಡಿಸುವಾಗಲಾಗಲೀ ಅಥವ ಸತ್ಯ ಧರ್ಮ ದಾನ ಪರೋಪಕಾರಾದಿ ಗುಣಗಳನ್ನು ನಿರೂಪಣೆಮಾಡುವಾಗಲಾಗಲೀ ಅವುಗಳನ್ನು ಲೌಕಿಕ ಭಾಷೆಯಲ್ಲಿ-ಲೌಕಿಕಾನುಭವಕ್ಕೆ ತಕ್ಕಂತೆ ತಿಳಿಸುವುದಕ್ಕಾಗಿ, ಹೀಗೆ ಒಂದುವ್ಯಕ್ತಿ ಮೂಲಕವಾಗಿ ಹೇಳತಕ್ಕ ಪದ್ಧತಿಯು ಇಂದಲ್ಲ-ಅನಾದಿಯಿಂದ ನಡೆದುಬಂದಿದೆ. ಪುರಾಣ ಇತಿಹಾಸಾದಿಗಳ ಉತ್ಪತ್ತಿಗೆ ಇದೇಕಾರಣವು, ಅಲ್ಲವೆ? ಇದುದರಿಂದ ಇದನ್ನೂ ಆ ದೃಷ್ಟಿಯಿಂದಲೇ ನೋಡಬೇಕೆಂದು ಅಪೇಕ್ಷಿಸುತ್ತೇವೆ.

ಭಾರತೀಯರೂ ಋಷಿಸಂತಾನರೂ ಆದ ನಾವು ಈಗ ಪೂರ್ವದಲ್ಲಿ ನಮ್ಮವರಿದ್ದಂತಿಲ್ಲ, ಬೇರೆಯಾಗಿದ್ದೇವೆ: ಅತಿಶಯ ಭಿನ್ನರಾಗಿದ್ದೇವೆ. ನಮ್ಮ ಪೂರ್ವಿಕರಿಗಿದ್ದ ಆ ಶ್ರದ್ಧಾ-ಉತ್ಸಾಹಾದಿಗಳು ಈಗ ನಮ್ಮಲ್ಲಿಲ್ಲ. ಅವರಿಗಿದ್ದ ನಂಬಿಕೆ-ನ್ಯಾಯ ಪಕ್ಷಪಾತತೆಗಳು ನಮ್ಮಲ್ಲಿಲ್ಲ. ಅವರಲ್ಲಿದ್ದ ಸತ್ಯ, ದೃಢ ವಿಶ್ವಾಸಾದಿಗಳು ನಮ್ಮಲ್ಲಿಲ್ಲ! ಈಗ ನಾವು ಶುದ್ಧ ಬೇರೆಯವರಾಗಿದ್ದೇವೆ. ನಮ್ಮ ಹಿರಿಯರು ಯಾವ ಯಾವ ನಡತೆ-ಆಚರಣೆಗಳಿಂದ ಜಗತ್ಪೂಜ್ಯರೆನಿಸಿದ್ದರೋ ಆ ನಡತೆ ಆಚರಣೆಗಳನ್ನು ಅನುಸರಿಸಲು ನಮ್ಮಲ್ಲಿ ನಂಬಿಕೆಯಾಗಲಿ, ಶ್ರದ್ಧೆಯಾಗಲಿ ಉಳಿದಿಲ್ಲ. ಈಗ ಪ್ರತಿಯೊಂದು ವಿಚಾರವೂ ವಿಮರ್ಶೆಗೊಳಪಟ್ಟು ತನ್ನ ಯೋಗ್ಯತೆಯನ್ನು ದೃಢಪಡಿಸಿಕೊಳ್ಳಬೇಕಾಗಿದೆ. ಅದೂ ಪಾಶ್ಚಾತ್ಯ ವಿಮರ್ಶೆಗೊಳಪಟ್ಟು! ಹಾಗೆ ಅವರಿಂದ ಉತ್ತಮವಾದುದೆಂದು ಸ್ವೀಕೃತವಾದೊಡನೆಯೇ-ತಕ್ಷಣವೇ, ಹಿಂದು ಮುಂದು ನೋಡದೆ, ನಾವೂ ನಂಬಿ ಆ ಮಾರ್ಗವನ್ನನುಸರಿಸುವಂತಹ ಭಾವದಾಸ್ಯವು ನಮ್ಮಲ್ಲಿ ರೂಢಮೂಲವಾಗಿದೆ. ಈ ಭಾವದಾಸ್ಯವೇ ನಮ್ಮ ಸಕಲವಿಧ ಅವನತಿಗಳಿಗೂ ಮೂಲಕಾರಣವು. ಅದೊಂದರಿಂದ ನಾವು ಬಿಡುಗಡೆಯನ್ನು ಹೊಂದಿದರೆ ಮನುಷ್ಯರೆನ್ನಿಸಿಕೊಳ್ಳಲು ಯೋಗ್ಯರಾಗುವೆವು.

ದರೂ, ಎಂತೂ ಸುಡವುದಲ್ಲವೆ! ನೀರಿಗೆ ಬಾಯಾರಿಕೆಯನ್ನು ಕಳೆವ ಸಾಮರ್ಥ್ಯವು ಇದೆ ಎಂಬುದನ್ನು ತಿಳಿದು ಕುಡಿದರೂ ತಿಳಿಯದೆ ಕುಡಿದರೂ ಎಂತೂ ಬಾಯಾರಿಕೆಯು ಇಂಗುವುದಲ್ಲವೆ? ಹಾಗೆಯೇ ಆಕೆಯು ಉಪವಾಸದ ಉದ್ದೇಶ-ಪ್ರಯೋಜನಗಳನ್ನು ತಿಳಿಯದೆ ಮಾಡಿದರೂ ಅದರಿಂದ ದೇಹದಮೇಲೆ ಆಗುವ ಪರಿಣಾಮವೇನೋ ಆಗಿದ್ದಿತಲ್ಲವೆ! ಇವರೆ ನಿಜವಾದ ಉದ್ದೇಶ-ಪ್ರಯೋಜನಗಳೂ ತಿಳಿದು, ಆ ಕ್ರಿಯೆಯೊಂದಿಗೆ ಮನಸ್ಸೂ ಬೆರೆದಿದ್ದರೆ, ಮನಃಪ್ರಸನ್ನತೆಯೂ ಪ್ರಾಪ್ತವಾಗುತ್ತಿತ್ತೆಂಬುದಕ್ಕೆ ಸಂಶಯವಿಲ್ಲ. ಆ ವಿಚಾರವು ಆವಳಿಗೆ ತಿಳಿದಿರಲಿಲ್ಲವಾಗಿ, ಅದರಿಂದುಂಟಾಗತಕ್ಕ ಫಲವೂ ಆವಳಿಗೆ ಲಭ್ಯವಿಲ್ಲ. ಅದು ಹೋಗಲಿ! ಇದರೆ ಅವಳ ಅಷ್ಟುಮಾತ್ರ ಕ್ರಿಯೆಯಿಂದ ಪ್ರಾಪ್ತವಾದ ಫಲವನ್ನೇ ದೇವದೂತರು ಉಪಯೋಗಿಸಿಕೊಂಡರು. 'ಕ್ರಿಯಾಸಿದ್ಧಿಃ ಸತ್ವೇಭವತಿ ಮಹತಾಂ ನೋಪಕರಣೇ' ಎಂದರೆ ಮಹಾತ್ಮರಿಗೆ ಕಾರ್ಯಸಿದ್ಧಿಯು ಅವರ ಸತ್ವದಿಂದಲ್ಲದೆ ಅವರು ಉಪಯೋಗಿಸುವ ಉಪಕರಣಗಳಿಂದ ಪ್ರಾಪ್ತವಾಗುವುದಿಲ್ಲವೆಂಬ ಆರ್ಯೋಕ್ತಿಯಂತೆ, ಆ ದಿವ್ಯ ಶಕ್ತಿಯುತರಾದ ದೇವದೂತರೂ ಆ ಫಲವನ್ನು ನಿಮಿತ್ತಮಾತ್ರ ಉಪಯೋಗಿಸಿಕೊಂಡರಲ್ಲದೆ ಅನ್ಯಥಾ ಇಲ್ಲ. ತೃಣವನ್ನು ಬ್ರಹ್ಮಾಸ್ತ್ರವಾಗಿ ಉಪಯೋಗಿಸಿದುದಕ್ಕೆ ಶ್ರೀರಾಮನ ಅನುಪಮಯೋಗಶಕ್ತಿಯೇ ಕಾರಣವಲ್ಲವೆ! ಕರಡಿ ಕಪಿಗಳನ್ನು ನೆರಹಿಕೊಂಡು ಪ್ರಬಲ ಬಲಶಾಲಿಯಾದ ರಾವಣನ ಅಸಂಖ್ಯಸೈನ್ಯವನ್ನು ಜಯಿಸಿದುದಕ್ಕೆ ಅತನ ಅದ್ವಿತೀಯ ಸಂಘಟನಸಾಮರ್ಥ್ಯವೇ ಕಾರಣವಲ್ಲವೆ! ಹಾಗೆಯೇ ಸತ್ವಶಾಲಿಗಳ ಕೈಯಲ್ಲಿ ಉಪಕರಣವು ನಿಮಿತ್ತಮಾತ್ರವೆಂದು ತಿಳಿ. ಆ ವೃದ್ಧಳು ಮನಸ್ಸೊಂದು ಕಡೆ, ಬುದ್ಧಿಯೊಂದು ಕಡೆ, ಹೀಗಿದ್ದು ಮಾಡಿದ ಉಪವಾಸವೇ ಒಂದು ಉಪಕರಣವಾಗಿ ಉಪಯೋಗವಾಗಲು ಶಕ್ತವಾಗಿದ್ದಮೇಲೆ, ತ್ರಿಕರಣಗಳನ್ನೂ ಏಕತ್ರಸಂಯೋಜಿಸಿ ಮಾಡುವ ಉಪವಾಸದಿಂದ ಅಗಾಧ ಪ್ರಯೋಜನವುಂಟಾಗುವುದೆಂಬುದನ್ನು ಹೇಳಬೇಕಾದುದೇನು? ಮನಸ್ಸಿಗೆ ಎಂತಹ ಪ್ರಸನ್ನತೆಯುಂಟಾಗಬಹುದೆಂಬುದನ್ನು ತಿಳಿಸಬೇಕಾದುದೇನು?' ಎಂದು ನುಡಿದು ಆ ಮಹರ್ಷಿಗಳು ತಪೋವನಾಭಿಮುಖವಾಗಿ ಪ್ರಯಾಣಮಾಡಿದರು.

ಸಾವಧಾನವಿಂದ ಓದುತ್ತಾ ಮುಂದರಿಸಿರುವ ವಾಚಕಮಹಾಶಯರಿಗೆ ನಾವು ಏನೋ ಒಂದು ಕಟ್ಟುಕಥೆಯನ್ನು ಹೇಳತೊಡಗಿದ್ದೇವೆಂಬ ಭಾವನೆಯುಂಟಾಗಬಹುದು. ಆದರೆ ಆಧ್ಯಾತ್ಮಿಕ ತತ್ವಗಳನ್ನು ಪ್ರಾಪಂಚಿಕ ವ್ಯವಹಾರಕ್ಕೆ ಸಂಬಂಧಪಡಿಸುವಾಗಲಾಗಲೀ ಅಥವ ಸತ್ಯ ಧರ್ಮ ದಾನ ಪರೋಪಕಾರಾದಿ ಗುಣಗಳನ್ನು ನಿರೂಪಣೆಮಾಡುವಾಗಲಾಗಲೀ ಅವುಗಳನ್ನು ಲೌಕಿಕ ಭಾಷೆಯಲ್ಲಿ-ಲೌಕಿಕಾನುಭವಕ್ಕೆ ತಕ್ಕಂತೆ ತಿಳಿಸುವುದಕ್ಕಾಗಿ, ಹೀಗೆ ಒಂದುವ್ಯಕ್ತಿ ಮೂಲಕನಾಗಿ ಹೇಳತಕ್ಕ ಪದ್ಧತಿಯು ಇಂದಲ್ಲ-ಅನಾದಿಯಿಂದ ನಡೆದುಬಂದಿದೆ. ಪುರಾಣ ಇತಿಹಾಸಾದಿಗಳ ಉತ್ಪತ್ತಿಗೆ ಇದೇ ಕಾರಣವು, ಅಲ್ಲವೆ? ಆದುದರಿಂದ ಇದನ್ನೂ ಆ ದೃಷ್ಟಿಯಿಂದಲೇ ನೋಡಬೇಕೆಂದು ಅಪೇಕ್ಷಿಸುತ್ತೇವೆ.

ಭಾರತೀಯರೂ ಋಷಿಸಂತಾನರೂ ಆದ ನಾವು ಈಗ ಪೂರ್ವದಲ್ಲಿ ನಮ್ಮವರಿದ್ದಂತಿಲ್ಲ, ಬೇರೆಯಾಗಿದ್ದೇವೆ; ಅತಿಶಯ ಭಿನ್ನರಾಗಿದ್ದೇವೆ. ನಮ್ಮ ಪೂರ್ವಿಕರಿಗಿದ್ದ ಆ ಶ್ರದ್ಧಾ-ಉತ್ಸಾಹಾದಿಗಳು ಈಗ ನಮ್ಮಲ್ಲಿಲ್ಲ. ಅವರಿಗಿದ್ದ ನಂಬಿಕೆ-ನ್ಯಾಯ ಪಕ್ಷಪಾತತೆಗಳು ನಮ್ಮಲ್ಲಿಲ್ಲ. ಅವರಲ್ಲಿದ್ದ ಸತ್ಯದೃಢ ವಿಶ್ವಾಸಾದಿಗಳು ನಮ್ಮಲ್ಲಿಲ್ಲ! ಈಗ ನಾವು ಶುದ್ಧ ಬೇರೆಯವರಾಗಿದ್ದೇವೆ. ನಮ್ಮ ಹಿರಿಯರು ಯಾವ ಯಾವ ನಡತೆ-ಆಚರಣೆಗಳಿಂದ ಜಗತ್ಪೂಜ್ಯರೆನಿಸಿದ್ದರೋ ಆ ನಡತೆ ಆಚರಣೆಗಳನ್ನು ಅನುಸರಿಸಲು ನಮ್ಮಲ್ಲಿ ನಂಬಿಕೆಯಾಗಲಿ, ಶ್ರದ್ಧೆಯಾಗಲಿ ಉಳಿದಿಲ್ಲ. ಈಗ ಪ್ರತಿಯೊಂದು ವಿಚಾರವೂ ವಿಮರ್ಶೆಗೊಳಪಟ್ಟು ತನ್ನ ಯೋಗ್ಯತೆಯನ್ನು ದೃಢಪಡಿಸಿಕೊಳ್ಳಬೇಕಾಗಿದೆ. ಅದೂ ಪಾಶ್ಚಾತ್ಯ ವಿಮರ್ಶೆಗೊಳಪಟ್ಟು! ಹಾಗೆ ಅವರಿಂದ ಉತ್ತಮವಾದುದೆಂದು ಸ್ವೀಕೃತವಾದೊಡನೆಯೇ-ತಕ್ಷಣವೇ, ಹಿಂದು ಮುಂದು ನೋಡದೆ, ನಾವೂ ನಂಬಿ ಆ ಮಾರ್ಗವನ್ನನುಸರಿಸುವಂತಹ ಭಾವದಾಸ್ಯವು ನಮ್ಮಲ್ಲಿ ರೂಢಮೂಲವಾಗಿದೆ. ಈ ಭಾವದಾಸ್ಯವೇ ನಮ್ಮ ಸಕಲವಿಧ ಅವನತಿಗಳಿಗೂ ಮೂಲಕಾರಣವು. ಅದೊಂದರಿಂದ ನಾವು ಬಿಡುಗಡೆಯನ್ನು ಹೊಂದಿದರೆ ಮನುಷ್ಯರೆನ್ನಿಸಿಕೊಳ್ಳಲು ಯೋಗ್ಯರಾಗುವೆವು.

ನಮ್ಮಲ್ಲಿಯ ಪೂರ್ವಿಕಾಚಾರಗಳನ್ನು ವಿಮರ್ಶಾಪೂರ್ವಕ ನೋಡದೆ, ಮೂಢನಂಬಿಕೆಯಿಂದ ಅನುಸರಿಸಬೇಕೆಂದು ನಾವಾದರೂ ಒತ್ತಾಯಪಡಿಸುವುದಿಲ್ಲ. ಆದರೆ ವಿಮರ್ಶಿಸಬೇಕಾದರೂ-ಪರರ ದೃಷ್ಟಿಯಿಂದ ಬೇಡ, ನಮ್ಮ ಸ್ವಂತ ದೃಷ್ಟಿಯಿಂದ ಎಂದು ಮಾತ್ರ ಹೇಳಿಬಿಡಲಾರೆವು. ಸದ್ಯಃ ಪ್ರಕೃತ ವಿಷಯವಾದ ಏಕಾದಶಿಯ ವಿಚಾರವನ್ನು ತೆಗೆದುಕೊಳ್ಳೋಣ ! ದಶಮಿಯ ದಿನ ಏಕಭುಕ್ತ, ಏಕಾದಶಿಯ ದಿನ ನಿರಾಹಾರ-ಜಾಗರ, ದ್ವಾದಶಿ ಪುನಃ ಏಕಭುಕ್ತ, ಇದು ಕಟ್ಟಳೆಯಲ್ಲವೆ! ಇಲ್ಲಿ ತತ್ವವಿಷ್ಟೆ! 'ಶರೀರಮಾದ್ಯಂಖಲುಧರ್ಮ ಸಾಧನಂ' ಎಂಬ ಪ್ರಾಜ್ಞೋಕ್ತಿಯು ಹೊಸದಲ್ಲವಷ್ಟೆ! ಧರ್ಮಸಾಧನೆಗಾಗಿ ಶರೀರವನ್ನು ಸರ್ವಪ್ರಯತ್ನಗಳಿಂದಲೂ ಸುಸ್ಥಿತಿಯಲ್ಲಿಟ್ಟುಕೊಳ್ಳತಕ್ಕದು ಪರಮಾವಶ್ಯಕವು. ಶರೀರವು ಸುಸ್ಥಿತಿಯಲ್ಲಿರಲು ಎಲ್ಲಕ್ಕಿಂತಲೂ ಹೆಚ್ಚಾಗಿ ನಾವು ಜಠರೇಂದ್ರಿಯವನ್ನು ಕುರಿತು ಗಮನಿಸಬೇಕಾಗಿದೆ. ಏಕೆಂದರೆ ಶರೀರದ ಸಮಸ್ತಾಂಗಗಳಿಗೂ ಬೇಕಾದ ಪೋಷಕ ಸಾಮಗ್ರಿಯನ್ನು ಒದಗಿಸತಕ್ಕದು ಜಠರೇಂದ್ರಿಯವೇ! ಅದು ಆರೋಗ್ಯದೆಸೆಯಲ್ಲಿದ್ದು ತನ್ನ ಕಾರ್ಯವನ್ನು ಯೋಗ್ಯರೀತಿಯಿಂದ ಮಾಡಬೇಕಾಗಿದ್ದರೆ ಇತರ ಅವಯವಗಳಂತೆಯೇ ಅದಕ್ಕೂ ಕೆಲಸ-ವಿಶ್ರಾಂತಿಗಳಿಗೆ ವ್ಯವಸ್ಥೆಯಿರಬೇಕು. ದೇಹದ ಬೇರೆ ಯಾವ ಅಂಗಕ್ಕೂ ಹೊರಗಿನಿಂದ ಬಂದು ಬೀಳುವ ಭಾರವಿಲ್ಲ. ಜಠರೇಂದ್ರಿಯಕ್ಕೆ ಮಾತ್ರ ಅದು ಹೊರಲಾರದಷ್ಟು-ತಡೆಯಲಾರದಷ್ಟು ಭಾರವನ್ನು ನಾವು ಹೊರಿಸುತ್ತಿದ್ದೇವೆ. ಇದರಿಂದ ಅದು ಬಹು ಶೀಘ್ರವಾಗಿ ಬಳಲಿಹೋಗುವುದು. ಬಳಲಿಹೋದ ಆ ಇಂದ್ರಿಯಕ್ಕೆ ತಕ್ಕಷ್ಟು ವಿಶ್ರಾಂತಿ ಕೊಡದೆ, ಮೇಲೆ ಮೇಲೆ ಭಾರವನ್ನು ಮಾತ್ರ ಹೊರಿಸುತ್ತಲೇ ಇದ್ದರೆ, ಅದು ಬಹು ಸ್ವಲ್ಪಕಾಲದಲ್ಲೇ ಅತೀವ ದುರ್ಬಲವಾಗಿ ಮುಂದೆ ತನ್ನ ಸ್ವಾಭಾವಿಕ ಕಾರ್ಯಗಳನ್ನು ಮಾಡಲಶಕ್ತವಾಗುವುದು. ಒಡನೆ ದೇಹವು ರೋಗಕ್ಕೆ ತೌರುಮನೆಯಾಗುವುದು. ದೇಹಕ್ಕೆ ಪ್ರಾಪ್ತವಾಗತಕ್ಕ ರೋಗಗಳಿಗೆಲ್ಲಾ ಈ ಜಠರೇಂದ್ರಿಯದ ಅವ್ಯವಸ್ಥೆಯೊಂದೇ ಪ್ರಬಲಕಾರಣವು. ಏಕೆಂದರೆ, ಹೊರಗಿನಿಂದ ಬಂದ ಆಹಾರಾದಿ ಪದಾರ್ಥಗಳು ಈ ಸ್ಥಳದಲ್ಲಿ ಯೋಗ್ಯರೀತಿಯಿಂದ ಜೀರ್ಣವಾಗಿ, ಪುಷ್ಟಿಕರವಾದ ಭಾಗವು ರಕ್ತವಾಗಿ ಮಾರ್ಪಟ್ಟು ದೇಹಪೋಷಣಾಕಾ

ರ್ಯಕ್ಕೆ ವಿನಿಯೋಗವಾದ ನಂತರ ಮಿಗುವ ಮಲಪದಾರ್ಥವು ಹೊರಕ್ಕೆ ಸಾಗಿಸಲ್ಪಡಬೇಕಲ್ಲವೆ! ಹಾಗೆ ಸಾಗದೆ ದೇಹದಲ್ಲಿ ನಿಂತಿತಾದರೆ, ಅದರಿಂದ ವಿಷಾಣುಗಳು ಹೊರಟು ರಕ್ತದೊಂದಿಗೆ ಕಲೆಯುವುವು. ಅದರಿಂದ ರಕ್ತವು ಅಶುದ್ಧವಾಗುವುದು. ಆ ಅಶುದ್ಧ ರಕ್ತವೇ ದೇಹದ ಸರ್ವಾಂಗಗಳಲ್ಲೂ ಪರಿಚಲನೆಯಾಗುವುದು. ಕಣ್ಣು ಮೂಗು ಕಿವಿ ಬಾಯಿ ನಾಲಗೆ ಮುಂತಾದ ಸಮಸ್ತ ಅಂಗಗಳೂ ಈ ಅಶುದ್ಧರಕ್ತದಿಂದಲೇ ಅವವುಗಳಿಗೆ ಬೇಕಾದ ಪೋಷಕ ಸಾಮಗ್ರಿಗಳನ್ನು ಕೊಡಲ್ಪಟ್ಟು ಬೆಳೆಯುವುವು. ಮೆದುಳೂ ಸಹ ಈ ಅಶುದ್ಧ ಸಾಮಗ್ರಿಯಿಂದಲೇ ಪರಿಪೋಷಿತವಾಗುವುದು. ಬುದ್ಧಿಯು ಕೆಟ್ಟು ದುರ್ಮಾರ್ಗಗಳಲ್ಲಿ ನಡೆಯತೊಡಗುವುದಕ್ಕೆ ಇದಕ್ಕಿಂತಲೂ ಹೊರಗಿನ ಕಾರಣವೇನು ಬೇಕು? ಮನುಷ್ಯನು ತೆಗೆದುಕೊಳ್ಳುವ ಆಹಾರಕ್ಕೆ ತಕ್ಕಂತಹ ಗುಣವುಳ್ಳ ರಕ್ತವು ದೇಹದಲ್ಲಿ ಉತ್ಪತ್ತಿಯಾಗುವುದು. ಆ ರಕ್ತದಿಂದ ಪೋಷಿತವಾದ ಮೆದುಳೂ ಅದಕ್ಕೆ ತಕ್ಕಂತಹ ಯೋಚನೆಯನ್ನೇ ಆ ವ್ಯಕ್ತಿಗೆ ಹುಟ್ಟಿಸುವುದು. ಆ ಯೋಚನೆಗೆ ತಕ್ಕಂತಹ ಕಾರ್ಯವನ್ನೇ ಅವನು ಮಾಡುವನು. ಪ್ರಪಂಚದಲ್ಲಿ ಈಗ ನಡೆಯುತ್ತಿರುವ ಅಗಾಧ ದುಷ್ಕಾರ್ಯಗಳಿಗೆ-ಮೋಸ ಕಾಪಟ್ಯಗಳಿಗೆ, ದಂಗೆ ದರೋಡೆಗಳಿಗೆ, ವ್ಯಭಿಚಾರಾದಿಗಳಿಗೆ, ನರಹತ್ಯಾದಿ ಘೋರಪಾತಕಾದಿಗಳಿಗೆ, ಬೇರೊಂದು ಕಾರಣವಿಲ್ಲ. ಜನಗಳು ಆಹಾರ ವಿಷಯದಲ್ಲಿ ನಿಯಮವನ್ನಿಟ್ಟುಕೊಳ್ಳದೆ, ಮದ್ಯಮಾಂಸಾದಿಗಳನ್ನೂ ಇತರ ಅನೇಕ ದೂಷ್ಯ ವಸ್ತುಗಳನ್ನೂ ವಿಚಾರವಿಲ್ಲದೆ ತಿನ್ನುವುದರಿಂದಲೇ, ಅವರ ದೇಹಗಳಲ್ಲಿ ಅದಕ್ಕೆ ತಕ್ಕಂತಹ ರಕ್ತವೇರ್ಪಟ್ಟು, ಅದಕ್ಕೆ ತಕ್ಕಂತಹ ಬುದ್ಧಿಯುಂಟಾಗಿ ಪರಿಣಾಮದಲ್ಲಿ ಭಯಂಕರ ಕೃತ್ಯಗಳೇ ನಡೆಯುತ್ತವೆ! ಆದಿಕಾಲದಿಂದಲೂ ಭಾರತೀಯರಲ್ಲಿ ಸಾತ್ವಿಕವೃತ್ತಿಯೂ, ದೈವಭಕ್ತಿಯೂ, ಆಧ್ಯಾತ್ಮಿಕ ವಿಚಾರದಲ್ಲಿ ನಿತ್ಯಾಸಕ್ತಿಯೂ, ಸತ್ಯ ಧರ್ಮ ಭೂತದಯೆ ಪರೋಪಕಾರಾದಿಗಳಲ್ಲಿ ನಿಷ್ಠೆಯೂ, ನೆಲೆಗೊಂಡಿದ್ದುದಕ್ಕೆ ಅವರಲ್ಲಿ ಏರ್ಪಟ್ಟಿದ್ದ ಈ ಸಾತ್ವಿಕಾಹಾರ ನಿಯಮವೇ ಕಾರಣವೆಂಬುದು ನಿರ್ವಿವಾದವಿರುವುದು. ಸಾತ್ವಿಕಾಹಾರದಿಂದ ಸಾತ್ವಿಕಗುಣವೂ, ದಿವ್ಯಾರೋಗ್ಯಭಾಗ್ಯವೂ ರಾಜಸಾಹಾರದಿಂದ ಕಾಮ ಕ್ರೋಧಾದಿ ಮನೋವಿಕಾರಗಳೂ, ತಾಮಸಾಹಾರದಿಂದ

ನಿದ್ರೆ, ಆಲಸ್ಯ ಅಜಾಗರೂಕತೆ ಮುಂತಾದುವುಗಳೂ ಪ್ರಾಪ್ತವಾಗುವುದು ತಪ್ಪದು-ತಪ್ಪದು. ಹದ್ದು ಕಾಗೆ-ಹಂದಿ ನಾಯಿಗಳೂ ಹೇಸುವಂತಹ ಪದಾರ್ಥಗಳನ್ನು ಸಹ ಹೊಟ್ಟೆಯೊಳಕ್ಕೆ ದೂರಿಸಿ, ಮನುಷ್ಯನು ಬಾಯಲ್ಲಿ ಮಾತ್ರ ತಾನು ದೈವಭಕ್ತನೂ ದೇಶಭಕ್ತನೂ ಶ್ರದ್ಧಾಭಕ್ತಿಯುಕ್ತನೂ ಆಗಿರುತ್ತೇನೆಂದರೆ ಅದು ಹೇಗೆ ಸಾಧ್ಯವಾದೀತು ! ಸದ್ಯಃ ಪ್ರಪಂಚದಲ್ಲಿ ವ್ಯಾಪಿಸಿರುವ ಅನಂತಾನಂತ ರೋಗಗಳಿಗಾದರೂ ಇದೇ ಅಲ್ಲದೆ ಬೇರೆ ಮತ್ತೊಂದು ಕಾರಣವಿಲ್ಲ; ದ್ರವ್ಯಾಸೆಯಿಂದ ಪೀಡಿತವಾದ ಸರಕಾರವು ಬೀದಿಗೆ ನಾಲ್ಕೆಂಟರಂತೆ ಮದ್ಯದ ಅಂಗಡಿಗಳನ್ನೂ ಹೊಲಸುತಿಂಡಿಯ ಅಂಗಡಿಗಳನ್ನೂ ಇಟ್ಟುಕೊಳ್ಳಲನುಮತಿಯಿತ್ತು, ಆದರಿಂದ ಮೇಲೆ ಹೇಳಿದಂತೆ ಅಮಿತವಾಗಿ ಹರಡುತ್ತಿರುವ ರೋಗಜ್ವಾಲೆಯನ್ನು, ಔಷಧದಿಂದ ಶಮನಪಡಿಸುತ್ತೇವೆಂಬ ಸಡಗರದಿಂದ ಆಸ್ಪತ್ರೆಗಳನ್ನು ಸ್ಥಾಪಿಸಿ, ನಮ್ಮಲ್ಲೂ ಇಷ್ಟುಮಟ್ಟಿನ ಧರ್ಮ ನಡೆಯುತ್ತಿದೆಯೆಂದು ಕೊಚ್ಚಿಕೊಳ್ಳುತ್ತಿರುವುದರಿಂದ ಬಂದ ಫಲವೇನು ! ಇತರ ಕಾರಣಗಳಂತಿರಲಿ ! ಆಹಾರವೊಂದರಲ್ಲಿ ಜನಗಳು ನಿಯಮಿತತನವನ್ನು ಆಚರಣೆಯಲ್ಲಿ ತರುವವಾದರೆ, ಮಿಕ್ಕ ಸಮಸ್ತ ವಿಚಾರವೂ ವ್ಯವಸ್ಥೆಗೊಳ್ಳುವುದು.

ವಾಚಕ ಮಹಾಶಯರು ಬೇಸರಗೊಳ್ಳದೆ, ಈ ಮೇಲಿನ ವಿಚಾರವನ್ನೊಂದನ್ನು ಸಾವಧಾನದಿಂದ ವಿಚಾರ ಮಾಡಿದ್ದಾದರೆ, ನಮ್ಮ ಪೂರ್ವಿಕರು, ವ್ರತಗಳು ನಿಯಮಗಳು ಉಪವಾಸಾದಿಗಳು, ಹಬ್ಬ ಪರ್ವದಿನಗಳು ಮುಂತಾದುವುಗಳನ್ನು ಏಕೆ ಏರ್ಪಡಿಸಿದ್ದರೆಂಬುದಕ್ಕೂ, ಸಿದ್ಧಪಡಿಸಿದ ಅನ್ನವನ್ನು ಏಕೆ ಭಗವನ್ನಿವೇದನ, ವೈಶ್ವದೇವ ಮುಂತಾದ ಕ್ರಿಯೆಗಳಿಂದ ಶುದ್ಧಪಡಿಸುತ್ತಿದ್ದರೆಂಬುದಕ್ಕೂ ಉತ್ತರವು ದೊರೆಯುವುದು. ಇನ್ನು ಏಕಾದಶಿಯ ಉಪವಾಸದ ವಿಚಾರದಲ್ಲಿ ಹೆಚ್ಚಾಗಿ ಹೇಳಬೇಕಾದ ಪ್ರಕೃತವಿಲ್ಲವಷ್ಟೆ ! ಹದಿನೈದು ದಿನಗಳಿಗೊಂದು ಬಾರಿ, ಶ್ರಾಂತವಾದ ಜಠರೇಂದ್ರಿಯಕ್ಕೆ ವಿರಾಮಕೊಡುವುದರಿಂದ, ಅದು ಅಷ್ಟುದಿನಗಳಿಂದ ತನ್ನಮೇಲೆ ಹೊರುತ್ತಾ ಬಂದ ಭಾರವನ್ನು ಕಳೆದುಕೊಂಡು ತನ್ನಲ್ಲಿ ತಂಗಿ ಕೊಳೆಯತೊಡಗಿದ್ದ ಆಹಾರಾಂಶಗಳನ್ನು ಹೊರಕ್ಕೆ ತಳ್ಳಿ, ಯೋಗ್ಯರೀತಿಯಿಂದ ಬಲಗೊಂಡು ಪುನಃ ಕಾರ್ಯಕ್ಕೆ ಸಿದ್ಧವಿರುವುದು ಎಂದು

ಯೋಚಿಸಲು ಅಡ್ಡಿಯೇನಿದೆ ? ಆದರೆ ಹಾಗೆ ಏಕಾದಶಿಯ ಒಂದುದಿನ ಉಪವಾಸಮಾಡಿದರೆ ಸಾಲದೆ ? ದಶಮಿ ದ್ವಾದಶಿಗಳಲ್ಲೂ ಆ ನಿಯಮವೇಕೆಂದು ಪ್ರಶ್ನೆ ಬಾರದಿರದು ! ಏಕಾದಶಿ ನಿರಾಹಾರವಿರಬೇಕೆಂಬ ಕಾಟಕ್ಕಾಗಿ, ದಶಮಿಯ ರಾತ್ರಿ ಹನ್ನೆರಡು ಗಂಟೆಯವರೆಗೆ ಜಠರ ಚೀಲವನ್ನು ವಿವಿಧ ತಿಂಡಿ ತೀರ್ಥಗಳಿಂದ ತುಂಬುತ್ತಿದ್ದರೆ, ಮಾರನೆಯ ದಿನದ ಉಪವಾಸದಿಂದ ತಾನೇ ಪ್ರಯೋಜನವೇನು ! ಏಕಾದಶಿಯೊಂದುದಿನವಲ್ಲ-ಮುಂದೆ ನಾಲ್ಕು ದಿನಗಳು ಕೆಲಸವ ಮಾಡಿದರೂ ಜೀರ್ಣಿಸದಷ್ಟು ಆಹಾರವನ್ನು ಒಂದೇ ದಿನ ಹೊಟ್ಟೆಯಲ್ಲಿ ತುಂಬುವುದರಿಂದ ಜಠರೇಂದ್ರಿಯಕ್ಕೆ ಹೆಚ್ಚು ಅಪಕಾರ ಮಾಡಿದಂತಾಯಿತಲ್ಲದೆ ಬೇರಲ್ಲ.—ಮಿತಾಹಾರನಿಯಮವು ಉಪವಾಸದ ಪೂರ್ವ ಮತ್ತು ಉಪವಾಸಾನಂತರ ಸಹ ನಿರಾಹಾರದಷ್ಟೇ ಆವಶ್ಯಕವೆಂದು ಈಗಿನ ಪಾಶ್ಚಾತ್ಯ ಉಪವಾಸ ಚಿಕಿತ್ಸಾಧುರೀಣರು ಪ್ರತಿಪಾದಿಸುತ್ತಿದ್ದಾರೆ. ಉಪವಾಸಮಾಡಬೇಕಾದ ಕಾಲದಲ್ಲಿ ಜಠರೇಂದ್ರಿಯದ ಮೇಲೆ ಭಾರ ಹೊರಿಸದಂತಿರಬೇಂಕೆಬುದು ಹೇಗೆ ಕರ್ತವ್ಯವೋ, ಉಪವಾಸಾನಂತರ ಬಳಲಿದ ಆ ಇಂದ್ರಿಯದಮೇಲೆ ಬೀಳತಕ್ಕ ಭಾರವನ್ನು ಸ್ವಲ್ಪ ಸ್ವಲ್ಪವಾಗಿಟ್ಟು ಕ್ರಮೇಣ ಹೆಚ್ಚಿಸತಕ್ಕದೂ ಹಾಗೆಯೇ ಕರ್ತವ್ಯವಾದುದರಿಂದ ದಶಮಿ ದ್ವಾದಶಿಗಳ ಏಕಭುಕ್ತವಿಚಾರವು ಹೇಳಲ್ಪಟ್ಟಿತು !

ಇನ್ನು ಏಕಾದಶಿಯದಿನ ಹರಿನಾಮಸಂಕೀರ್ತನೆ ಪೂಜಾ ಹರಿಕಥಾ ಶ್ರವಣ ಮುಂತಾದುವುಗಳಲ್ಲಿ ಕಾಲ ಕಳೆಯಬೇಕೆಂಬುದಕ್ಕೆ ಹೆಚ್ಚು ವಿವರಣೆಯೇನೂ ಆವಶ್ಯಕವಿಲ್ಲ. ಉಪವಾಸಕಾಲದಲ್ಲಿ ಜಠರೇಂದ್ರಿಯವು ನಿತ್ಯದಂತೆ ಪಚನ ಕ್ರಿಯೆಯ ದೀರ್ಘೋದ್ಯೋಗವಿಲ್ಲದೆ ಶಾಂತವಾಗಿರುವುದರಿಂದ, ಆ ದಿನ ಮನಸ್ಸೂ ಸಹ ಯಾವ ಬಗೆಯ ಉದ್ವೇಗದಿಂದಲೂ ಪೀಡಿತವಾಗದೆ ಸ್ತಿಮಿತ ಸ್ಥಿತಿಯಲ್ಲಿರುವುದು. ಆ ದಿನ ಮಿದುಳಿನಲ್ಲಿ-ಆಗತಾನೆ ಸಿದ್ಧವಾದ ಹೊಸ ಹೊಸ ರಕ್ತವಲ್ಲದೆ, ದೇಹದಲ್ಲಿ ನಿಯತವಾಗಿ ಪರಿಚಲಿಸಿ-ಶ್ವಾಸಕೋಶಗಳಿಂದ ಮೇಲೆ ಮೇಲೆ ಶುದ್ಧವಾಗುತ್ತಿರುವ ರಕ್ತವು ಹರಿಯುತ್ತಿರುವುದರಿಂದಲೂ, ಇಂದ್ರಿಯಗಳೂ ಉದ್ರೇಕಗೊಳ್ಳದೆ ಶಾಂತವಾಗಿರುವುದರಿಂದಲೂ, ಆ ಸಂದರ್ಭದಲ್ಲಿ ಭಗವತ್ಸಂಬಂಧ ಚಿಂತನೆಯಲ್ಲೂ, ಶಾಂತತೆ ವಿನಯ ದೈವಭಕ್ತಿ, ಮುಂತಾದುವು

ಗಳಿಗೆ ಸಂಬಂಧಪಟ್ಟ ಸಚ್ಚಿಂತನೆಯಲ್ಲಿ ಕಾಲಕಳೆವುದರಿಂದ, ಅವು ಶಾಂತವಾಗಿ ನಿಂತ ನೀರಿನಲ್ಲಿ ತಳಕ್ಕಿಳಿದು ಕೂಡುವ ಒಂದು ವಸ್ತುವಿನಂತೆ, ಮನಸ್ಸಮುದ್ರದ ಅಡಿಯನ್ನು ಸೇರಿ ಅಲ್ಲಿ ಶುದ್ಧ ಸಾತ್ವಿಕ ತಳಹದಿಯನ್ನು ಏರ್ಪಡಿಸುವುವು. ನಿತ್ಯದ ಪ್ರಪಂಚ ಪ್ರವಾಹವನ್ನನುಸರಿಸಿ ಓಡುತ್ತಿರುವ ಮನಸ್ಥಿತಿಯಲ್ಲಿ ಕೇಳಿ ತಿಳಿದು ಮನನಮಾಡಿ ತರುವಾಯ ಚಿಂತನೆಗಿಟ್ಟುಕೊಳ್ಳಲು ಅಸಾಧ್ಯವಾದ ಒಂದು ವಿಚಾರವನ್ನು, ಹೀಗೆ ಶಾಂತತೆಯಿಂದ ಇರುವಾಗ ಮನನಕ್ಕೆ ಇಟ್ಟುಕೊಳ್ಳಲು ಹೆಚ್ಚು ಸಾಧ್ಯವಿರುವುದು. ಈ ಕಾರಣದಿಂದಲೇ ಆದಿನವನ್ನು ಅಂತಹ ಭಗವತ್ಸಂಬಂಧ ವಿಚಾರಗಳಿಂದಲೇ ಕಳೆಯಬೇಕೆಂಬ ನಿಯಮವು ಏರ್ಪಟ್ಟಿರುವುದು.

ಇನ್ನು ಆ ದಿನ ರಾತ್ರಿಯಲ್ಲಿ ಜಾಗರವಿರಬೇಕಾದುದಕ್ಕೂ ಕಾರಣ ವಿಲ್ಲದಿಲ್ಲ. ಮೇಲ್ಕಂಡಂತೆ ಭಗವದ್ಭಕ್ತಿ ವೈರಾಗ್ಯಾದಿಗಳಿಗೆ ಪಾಠವು ಸಿದ್ಧಗೊಳ್ಳುತ್ತಿರುವಲ್ಲಿ—ಜ್ಞಾನಾಭಿವೃದ್ಧಿಯ ಕಾರ್ಯವೂ ಕ್ರಮಕ್ರಮವಾಗಿ ಸಾಗತಕ್ಕ ಆವಶ್ಯಕವಿರುವುದು. ಮುಕ್ತಿದಾಯಕವಾದ ಭಗವತ್ತತ್ವಚಿಂತನಾ ಕಾರ್ಯವು ಮನಸ್ಸು ಮೇಲ್ಕಂಡಂತೆ ಸ್ತಿಮಿತವಾಗಿ ಶಾಂತವಾಗಿ ಉದ್ವೇಗಗೊಳ್ಳದೆ ಇರುವ ಕಾಲದಲ್ಲಲ್ಲವೆ ಸಾಧ್ಯವಾದೀತು! ಆ ರೀತಿ ಹದಿನೈದು ದಿನಗಳಿಗೆ ಒಂದುಸಾರಿ ಪ್ರಾಪ್ತವಾಗಿರುವ ಆ ಒಂದುದಿನವನ್ನಾದರೂ ಉಪಯೋಗಿಸಿಕೊಳ್ಳದಿದ್ದರೆ, ಪ್ರಯೋಜನವೇನು! ಹಗಲಿನಲ್ಲಿ ಹರಿಕಥೆ ಪೂಜೆ ಸ್ತೋತ್ರಪಾಠಾದಿಗಳಿಂದ ಉನ್ನತಗೊಂಡು ಸಿದ್ಧವಾಗಿದ್ದ ಮನಸ್ಸಿಗೆ ಭಗವತ್ತತ್ವ ಚಿಂತನೆಯನ್ನಳವಡಿಸಿದರೆ, ಅದು ಶೀಘ್ರವಾಗಿ ಅಭಿವೃದ್ಧಿಯಾಗಲು ಬಹು ಸಹಾಯಕವಾಗಿರುವುದಲ್ಲವೆ! ಹಗಲಿನಲ್ಲಿ, ಪಶುಪಕ್ಷಿಮೃಗಾದಿಗಳು, ಮನುಷ್ಯರು, ಆಪ್ತೇಷ್ಟರು ಮನೆಯಲ್ಲಿ ಮಕ್ಕಳು ಮುಂತಾದವರಿಂದ ಆಗುವ ಗಲಭೆಯಿಂದ ಎಷ್ಟು ನಿವಾರಿಸಲೆತ್ನಿಸಿದರೂ ಮನಸ್ಸನ್ನು ಏಕಾಗ್ರತೆಯಿಂದಿರಿಸಲು ವಿಘ್ನವುಂಟಾಗದಿರುವುದಿಲ್ಲ. ಈವ್ರತವು, ಜನಸಂಘದಿಂದ ದೂರ ಏಕಾಂಗಿಗಳಾಗಿರುವ ಒಬ್ಬಿಬ್ಬರು ಸಾಧಕರಿಗಲ್ಲ-ಜನ ಸಂಘದಲ್ಲೂ ಸಂಸಾರಮಧ್ಯದಲ್ಲೂ ಇರುವ ಗೃಹಸ್ಥರಿಗೋಸ್ಕರವಾಗಿ ವಿಧಿಸಲ್ಪಟ್ಟಿರುವುದರಲ್ಲಿ, ಅವರೂ ಸಹ ಆ ಒಂದು ದಿನದಲ್ಲಾದರೂ ಶ್ರವಣ ಮನನ ನಿಧಿಧ್ಯಾಸಾದಿಗಳಿಂದ ಊರ್ಧ್ವ ವಿಚಾರಗಳಲ್ಲಿ ದೃಷ್ಟಿಯುಳ್ಳವರಾಗಲಿ ಎಂಬ

ಆಶಯವೇ ನಮ್ಮ ಹಿರಿಯರಿಗಿದ್ದಂತೆ ತೋರಿಬರುವುದಿಲ್ಲವೆ? ಆ ಒಂದು ದಿನದಲ್ಲಿ ಇಷ್ಟು ಮಾತ್ರ ಆಚರಿಸಿದರೆ ಅದರ ವ್ಯಾಪನೆಯು ಮಿಕ್ಕ ಹದಿನಾಲ್ಕು ದಿನಗಳ ಧಾರ್ಮಿಕ ಜೀವನಕ್ಕೆ ತಕ್ಕ ಆಹಾರವನ್ನೊದಗಿಸಲು ಸಾಕಾಗಿರುವುದು. ಹೀಗೆಯೇ ಮೇಲೆ ಮೇಲೆ ಆಚರಿಸುತ್ತಾ ಬರುವುದರಿಂದ, ಮನುಷ್ಯನಲ್ಲಿ ಭಕ್ತಿ ಜ್ಞಾನ ವೈರಾಗ್ಯಾದಿಗಳೂ ಒಂದಿಗೇ ದಿವ್ಯಾರೋಗ್ಯಭಾಗ್ಯವೂ ಪ್ರಾಪ್ತವಾಗಿ ಇಹಜೀವಿತವು ಸ್ವರ್ಗವಾಸವನ್ನು ಅನುಭವಕ್ಕೆ ತರಲು ಯೋಗ್ಯವಾಗುವುದು. ವಾಸ್ತವ, ಈ ಉಪವಾಸಾದಿ ವಿಚಾರಗಳು ಪ್ರಾರಂಭಕ್ಕೆ ಕಷ್ಟವೆನಿಸದಿರಲಾರವು. ಆದರೆ ಈ ಬಗೆಯ ಉನ್ನತ ವಿಚಾರಗಳೇ ಅಲ್ಲವೆ, ಪ್ರಾರಂಭಕ್ಕೆ ಕಾಲಕೂಟದಂತೆ ಅಸಹನೀಯ ಕಷ್ಟದಾಯಕವಾಗಿದ್ದರೂ ಅಂತ್ಯದಲ್ಲಿ ಅಮೃತ ಫಲಗಳನ್ನು ಕೊಡತಕ್ಕುವು!—

ಇಂತು ಏಕಾದಶೀ ಮಹಾವ್ರತವು, ದಶೇಂದ್ರಿಯ ನಿಯಾಮಕವೂ ಏಕಾದಶೇಂದ್ರಿಯವೂ ಆದ ಮನಸ್ಸಿಗೆ ಶಾಂತತೆಯನ್ನೂ, ಹಾಗೆ ಶಾಂತವಾಗಿರುವಾಗ ಉನ್ನತ ವಿಚಾರಗಳಲ್ಲಿ ಪ್ರವೇಶವನ್ನೂ ಉಂಟುಮಾಡಿ, ತನ್ಮೂಲಕ ಅದನ್ನು ಸಾತ್ವಿಕ ಮಯವಾದುದನ್ನಾಗಿ ಮಾಡಲು ಏರ್ಪಟ್ಟುದೆನ್ನುವುದಕ್ಕೆ ಸಂಶಯವಿಲ್ಲ. ಆದುದರಿಂದ ತಮ್ಮ ಜೀವಿತವನ್ನು ಸತ್ವಮಯವಾದುದನ್ನಾಗಿಸಿಕೊಳ್ಳಲಪೇಕ್ಷಿಸಿ, ಭಕ್ತಿ ಜ್ಞಾನ ವೈರಾಗ್ಯಾದಿಗಳನ್ನು ಅಭ್ಯಸಿಸಲಿಷ್ಟಪಡುವವರು ಯಾರಾದರೂ ಈ ಏಕಾದಶೀ ಮಹಾವ್ರತವನ್ನು ಕೈಕೊಂಡು, ಸರ್ವ ವ್ಯಾಪಿಯೂ ಸ್ಥಿತಿಕರ್ತನೂ, ಈ ವ್ರತಾಧಿದೇವನೂ ಆದ ಶ್ರೀಮನ್ನಾರಾಯಣಮೂರ್ತಿಯ ಕೃಪಾಕಟಾಕ್ಷಗಳಿಗೆ ಪಾತ್ರರಾಗಬಹುದು.



## ಅಧ್ಯಾಯ ೪ "ಮೋಹಿನೀ"

ಆಸ್ತಿಕ ಶಿರೋಮಣಿಯಾದ ರುಕ್ಮಾಂಗದ ಮಹಾರಾಜನಿಗೆ ಮಹರ್ಷಿಗಳು ಮಾಡಿದ ಬೋಧನೆಯು, ಫಲವತ್ತಾದ ಭೂಮಿಯಲ್ಲಿ ಬಿತ್ತಿದ ಬೀಜದಂತೆ ಉತ್ತಮ ರೀತಿಯಿಂದ ಮೊಳಕೆಗೊಂಡು ಬೆಳೆಯಸಾಗಿತು.

ರಾಜನು, ಏಕಾದಶೀ ಮಹಾ ವ್ರತವನ್ನು ಕೈಕೊಂಡು ದಶಮಿ ದ್ವಾದಶಿಗಳಲ್ಲಿ ಮಿತಾಹಾರದಿಂದಲೂ, ಏಕಾದಶಿಯ ದಿನ ನಿರಾಹಾರ ಶ್ರೀ ವಿಷ್ಣುಮೂರ್ತಿಯ ಪೂಜೆ ಹರಿಕಥಾ-ಪುರಾಣಾದಿಗಳ ಶ್ರವಣ, ಸ್ತೋತ್ರ ಪಾರಾಯಣ, ಶ್ರೀ ಹರಿಯ ದಿವ್ಯ ಮಹಿಮೆಗಳನ್ನು ವರ್ಣಿಸುವ ಕೀರ್ತನಾದಿಗಳಿಂದ ಯುಕ್ತವಾದ ಭಜನೆ ಮುಂತಾದುವುಗಳಿಂದಲೂ ಕಾಲಯಾಪನೆ ಮಾಡಲಾರಂಭಿಸಿದನು. ಕ್ರಮಕ್ರಮವಾಗಿ ಆತನ ಮನಸ್ಸು ಅತಿಶಯ ಪ್ರಸನ್ನವಾಯಿತು. ಕಾಲಸೂಚಕ ಯಂತ್ರದ ಆಧಾರಚಕ್ರವನ್ನು ದಿನಕ್ಕೊಂದು ಬಾರಿ ಅಥವ ಎಂಟು ದಿನಕ್ಕೊಂದುಬಾರಿ ತಿರುಗಿಸಿಬಿಟ್ಟರೆ ಮಾತ್ರವೇ, ಅದು ಆ ಎಂಟು ದಿನಗಳಲ್ಲೂ ನಿಲ್ಲದೆ ತನ್ನ ಕೆಲಸ ಮಾಡುತ್ತಿರುವುದು ಹೇಗೆ ಸಾಧ್ಯವೋ ಹಾಗೆಯೇ, ದೇಹಕ್ರಿಯೆಗಳೆಲ್ಲಕ್ಕೂ ಆಧಾರ ಚಕ್ರದಂತಿರುವ ಮನಸ್ಸನ್ನು ಮೇಲ್ಕಂಡಂತೆ ಹದಿನೈದು ದಿನಗಳಿಗೊಂದುಬಾರಿ, ತೊಳೆದು ಕಶ್ಮಲಗಳನ್ನು ಕಳೆದು ಶುದ್ಧಪಡಿಸಿ ಶ್ರೀ ಹರಿಯ ಪಾದಾಂಬುಜಗಳಲ್ಲಿ ಆಸಕ್ತವನ್ನಾಗಿಸುತ್ತಿದ್ದುದರಿಂದ ರಾಜನಲ್ಲಿ ಕ್ರಮಕ್ರಮವಾಗಿ ಭಕ್ತಿ ವೈರಾಗ್ಯಗಳು ಹೆಚ್ಚು ಹೆಚ್ಚಾಗಿ ಬೆಳೆಯಲಾರಂಭವಾದುವು. ತಮ್ಮ ಮಹಾರಾಜನು ಕೇವಲ ನಿಷ್ಠನಾಗಿ ದೈವಭಕ್ತನಾಗಿ ಶ್ರೀ ಹರಿನಾಮ ಭಜನೆ ಸಂಕೀರ್ತನೆಗಳಲ್ಲಿ ಆಸಕ್ತನಾಗಿರುವನೆಂಬ ವಾರ್ತೆಯು ಪ್ರಜೆಗಳಲ್ಲೂ ಪರಿವಾರದಲ್ಲೂ ವ್ಯಾಪಿಸಿತು. ಆತನ ಧಾರ್ಮಿಕ ನಡತೆಯು ಎಲ್ಲರಿಗೂ ಉದಾಹರಣೆಯಾಯಿತು. ಶ್ರೇಷ್ಠರು ಯಾವುದನ್ನು ಆಚರಿಸಿದರೆ ಕನಿಷ್ಟರೂ ಅವರನ್ನು ಅನುಸರಿಸಿ ಆ ಮಾರ್ಗವನ್ನೇ ಕೈಕೊಳ್ಳುವುದು ಲೋಕರೂಢಿಯಲ್ಲವೆ! ಅದರಂತೆಯೇ, ಆತನ ಆಚರಣೆಯೇ ಆದೇಶದ ಪ್ರಜೆಗಳಿಗೆ ಒಂದು ಮಾದರಿ ಪಾಠದಂತಾಗಲು, ದೇಶದಲ್ಲಿ ಸರ್ವತ್ರ ಏಕಾದಶೀ ಮಹಾವ್ರತದ ಆಚರಣೆಯು ಪ್ರಾರಂಭವಾಯಿತು. ಸರ್ವತ್ರ ಹರಿಭಜನೆ, ನಾಮ ಸಂಕೀರ್ತನೆ ದೇವತಾರಾಧನೆ ಪುರಾಣ ಪುಣ್ಯಕಥಾದಿಗಳ ಪಠನೆ, ಮುಂತಾದುವುಗಳು ಆರಂಭವಾದುವು. ಎಲ್ಲಿ ನೋಡಿದರೂ ಉತ್ಸವಾದಿಗಳು ನಡೆಯಲಾರಂಭವಾದುವು. ಎಲ್ಲೆಲ್ಲೂ ಪುಷ್ಪೋದ್ಯಾನಗಳೂ ತುಲಸೀ ವನಗಳೂ ನಿರ್ಮಿತವಾದುವು. ಪ್ರಜೆಗಳೆಲ್ಲರೂ ಸ್ನಾನ ಶುಭ್ರ ವಸ್ತ್ರಧಾರಣೆ ಮುಂತಾದುವುಗಳಿಂದ ಸರ್ವದಾ ಶುಚಿರ್ಭೂತರಾಗಿರುತ್ತಿದ್ದರು. ಪಕ್ಷದಲ್ಲಿ

ಆ ಒಂದುದಿನ ಇಟ್ಟ ಆಹಾರನಿಯಮವು, ಮಿಕ್ಕ ಹದಿನಾಲ್ಕು ದಿನಗಳಲ್ಲೂ, ಮನಸ್ಸಿಗೆ ಬಂದ ಸಿಕ್ಕ ಸಿಕ್ಕ ದುರಾಹಾರಗಳನ್ನು ಮಾಡದಂತೆ ಪ್ರಜೆಗಳ ಮನಸ್ಸನ್ನು ನಿರೋಧಿಸಲು ಶಕ್ತವಾಯಿತು. ಪ್ರಜೆಗಳೆಲ್ಲರೂ ಶುದ್ಧವಾದ ಸಾತ್ವಿಕಾಹಾರ ಗ್ರಹಣಮಾಡುತ್ತ, ಪಾಪಭೀತರಾಗಿ ಒಂದಿಗೇ ದೈವಭಕ್ತರಾಗಿ ಮಾರ್ಪಡಸಾಗಿದರು. ಮೊದಲೇ ಹಾಗೆ ದೈವಭಕ್ತರೂ ಶಾಂತರೂ ಆಗಿದ್ದವರು ಈಗ ಜ್ಞಾನಾಭಿವೃದ್ಧಿಯನ್ನುಂಟುಮಾಡಿಕೊಳ್ಳತೊಡಗಿದರು. ಹೀಗೆ ರಾಜ್ಯದಲ್ಲಿ ಸಾತ್ವಿಕ ಮನೋಭಾವವು ಆಧಿಪತ್ಯಮಾಡತೊಡಗಿದರಿಂದ, ಅಲ್ಲಿ ಕಳ್ಳತನ ದರೋಡೆ ಕೊಲೆಪಾತಕ, ವ್ಯಭಿಚಾರ ನಾಸ್ತಿಕತೆ ಮುಂತಾದ ದೋಷಗಳ ಹೆಸರೇ ಕೇಳಿಬರದಂತೆ ಹುಟ್ಟಡಗಿ ಹೋಯಿತು. ಪ್ರಜೆಗಳಲ್ಲಿ ಪರಸ್ಪರ ಪ್ರೇಮ ಸೌಹಾರ್ದಭಾವಗಳು ಬೆಳೆಗೊಂಡುವು. ಜಾತಿಮಾತ್ಸರ್ಯ ಪರಸ್ಪರ ಅಸೂಯಾಭಾವಗಳು ಇಣಿಕಿನೋಡದಂತಾದುವು. ಸಕಲರೂ ಸ್ವರ್ಗವಾಸ ಸೌಖ್ಯವನ್ನು ಅನುಭವ ಮಾಡತೊಡಗಿದರು. ರುಕ್ಮಾಂಗದ ಮಹಾರಾಜನ ರಾಜ್ಯಭಾರವು ಸರ್ವಸಂಪತ್ಪರಿಪೂರ್ಣವಾಗಿಯೂ ಧಾರ್ಮಿಕವಾದುದಾಗಿಯೂ ಇದ್ದಿತೆಂದು ಗ್ರಂಥಾರಂಭದಲ್ಲೇ ಹೇಳಲ್ಪಟ್ಟಿತಲ್ಲವೆ! ಆಗ ರಾಜನೀತಿ ದೃಷ್ಟ್ಯಾ ಉತ್ತಮ ರೀತಿಯ ಪಾಲನೆಗೊಳಪಟ್ಟಿದ್ದ ಆ ರಾಜ್ಯವು, ಈಗ ಭಗವತ್ಸೇವಾ ದೃಷ್ಟಿಯಿಂದ ಸತ್ವಮಯ ಪಾಲನೆಗೆ ಒಳಪಟ್ಟು ಶೋಭಿಸತೊಡಗಿತು.

ಪಾಶ್ಚಾತ್ಯ ನಾಗರೀಕತೆಯ ಸಂಸರ್ಗದಿಂದ ದೂಷಿತವಾಗಿರುವ ನಮ್ಮ ದೃಷ್ಟಿಗೆ ಮೇಲ್ಕಂಡ ಈ ವಿಚಾರಗಳು ಪೊಳ್ಳುಕಥೆಗಳೆಂಬ ಭಾವನೆಯನ್ನು ಉಂಟುಮಾಡದಿರವು. ಈಗಿನ ನಮ್ಮ ರಾಜಕೀಯ ಗದ್ದಲದ ವಾತಾವರಣದಲ್ಲಿ ಬೆಳೆದ ನಮಗೆ ಮೇಲೆ ಹೇಳಿದ ಆದ್ಯಂತ ಜನಾಂಗ ಸುಧಾರಣೆಯು ಕನಸಿನ ಸ್ವರ್ಗವಾಸವೆಂಬಂತೆ ತೋರೀತು? ಏಕೆಂದರೆ, ಪ್ರಕೃತ ರಾಜ್ಯಾಂಗಕ್ಕೆ ಮದ್ಯದ ಪೀಪಾಯಿಯಲ್ಲಿರುವಷ್ಟು ನಂಬಿಕೆಯು ಹಾಲಿನ ಕೊಡದಲ್ಲಿಲ್ಲ-ಕೋವಿಯ ಮದ್ದಿನಲ್ಲಿರುವಷ್ಟು ವಿಶ್ವಾಸವು, ಪ್ರಜಾಹೃದಯದ ತೃಪ್ತಿ ಶಾಂತತೆಗಳಲ್ಲಿಲ್ಲ; ಧನ ದೇವತೆಯಲ್ಲಿರುವಷ್ಟು ಭಕ್ತಿಯು ಭಗವಾನನಲ್ಲಿಲ್ಲ! ಅದಕ್ಕೆ ಆತ್ಮಬಲದ ಪರಿಚಯವಿಲ್ಲ. ಊರ್ಧ್ವವಿಚಾರಗಳಲ್ಲಿ ಪ್ರವೇಶವಿಲ್ಲ. ಸತ್ಯ ಧರ್ಮಗಳಲ್ಲಿ ನಂಬಿಕೆಯಿಲ್ಲ. ಬಲವೆಂದರೆ

ದೇಹಬಲ. ಪಶುಬಲ! ಆ ದೇಹಬಲವನ್ನು ಹೆಚ್ಚಿಸಿಕೊಳ್ಳಲು ಸಹಕಾರಿಗಳು, ಮದ್ಯ ಮಾಂಸಗಳು. ಅದನ್ನು ಕಾಪಾಡಿಕೊಳ್ಳುವುದಕ್ಕೆ ಕೋವಿಯು ಮದ್ದು, ಅದರ ಸಂಗ್ರಹಣಕ್ಕೆ ದ್ರವ್ಯಶೇಖರಣ! ಆ ದ್ರವ್ಯದಿಂದ ಇಂದ್ರಿಯತೃಪ್ತಿಯನ್ನುಂಟುಮಾಡುವ ವಿವಿಧ ವಿಷಯಭೋಗಗಳು! ಈ ಧ್ಯೇಯಕ್ಕೂ ನಾವು ಮೇಲೆ ಪ್ರತಿಪಾದಿಸುವ ಧ್ಯೇಯಕ್ಕೂ ಉತ್ತರದಕ್ಷಿಣ ಧ್ರುವಗಳಿರುವಷ್ಟು ಅಂತರವುಂಟು! ಕತ್ತಲೆ ಬೆಳಕುಗಳಿಗಿರುವಷ್ಟು ಭೇದವುಂಟು. ಆದುದರಿಂದ ಒಂದೊಂದನ್ನೂ ಅದಕ್ಕೆ ಸ್ವಾಭಾವಿಕವಿರುವ ದೃಷ್ಟಿಕೋಣದಿಂದಲೇ ನೋಡಬೇಕಾಗಿದೆ. ಮಹಾರಾಜ ರುಕ್ಮಾಂಗದನ ರಾಜ್ಯದಲ್ಲಿ ಉಂಟಾಯಿತೆಂದು ಹೇಳಿರುವಂತಹ ಸಾರ್ವತ್ರಿಕ ಜನಾಂಗ ಸುಧಾರಣೆಯು ಅಸಾಧ್ಯವೆನ್ನುವಂತಿಲ್ಲ! ಪ್ರಾರಂಭಕ್ಕೆ, ರಾಜ್ಯಾಂಗವು, ಸಾವಿರಗಟ್ಟಲೆಯಾಗಿ ನಮ್ಮ ದೇಶೀಯರ ಗಂಟಲೊಳಕ್ಕೆ ಧುಮುಕುತ್ತಿರುವ ಮದ್ಯದ ಪೀಪಾಯಿಗಳ ಪ್ರವಾಹವನ್ನೊಂದನ್ನು ನಿಲ್ಲಿಸಲಿ! ಧೈರ್ಯವಿದ್ದರೆ-ಎದೆನಡುಗದಿದ್ದರೆ, ಪಶುವಧೆಯನ್ನು ನಿಲ್ಲಿಸಿ ಮಾಂಸಾಹಾರವನ್ನೊಂದನ್ನು ತಡೆಗಟ್ಟಲಿ! ಆಗ ಇಷ್ಟು ವೈದ್ಯಶಾಲೆಗಳೇಕೆ, ವೈದ್ಯರೇಕೆ, ರಕ್ಷಕದಳ (ಪೋಲೀಸುಖಾತೆ) ವೇಕೆ, ನ್ಯಾಯಾಸ್ಥಾನಗಳೇಕೆ, ನ್ಯಾಯವಾದಿಗಳೇಕೆ. ವ್ಯಾಜ್ಯವ್ಯವಹಾರಗಳೆಲ್ಲಿರುವುವು! ದಂಗೆದರೋಡೆಗಳೇಕೆ ಇಷ್ಟುಮಟ್ಟಿಗೆ ವೃದ್ಧಿಯಾಗುವುವು! ಪ್ರಜೆಗಳಿಂದ ವ್ಯರ್ಥವ್ಯಯವಾಗುವ ಎಷ್ಟೋ ದ್ರವ್ಯವು ಅವರಲ್ಲೇ ಉಳಿದು ಅವರ ಅನ್ನವಸ್ತ್ರಗಳಿಗೆ ಉಪಯೋಗವಾಗುವುದಲ್ಲವೆ! ಇದರಿಂದ ಅವರ ಸ್ಥಿತಿಗತಿಗಳು ಎಷ್ಟುಮಟ್ಟಿಗೆ ಸುಧಾರಿಸುವುವು! ದೇಶದಲ್ಲಿ ಎಷ್ಟುಮಟ್ಟಿನ ಶಾಂತತೆ ಸಮಾಧಾನಗಳು-ಸುಭಿಕ್ಷತೆಗಳು ಏರ್ಪಡುವುವು. ಇದು ಅಸಾಧ್ಯವೆ? ಅಲ್ಲ-ಆದರೆ ಕಷ್ಟಸಾಧ್ಯವೆನ್ನುವುದಕ್ಕೆ ಅಡ್ಡಿಯಿಲ್ಲ. ಮೊದಲು ರಾಜ್ಯಾಂಗವು ಶುದ್ಧವಾಗಬೇಕು. ಸತ್ವಮಯವಾಗಬೇಕು! ಆದರೆ — ರೆ? ಮುಂದೆ ಎಲ್ಲವೂ ಸಾಧ್ಯವು! ಅಲ್ಲವೆ!—ಕೃತಯುಗವು ಬರಲಿ!

ರುಕ್ಮಾಂಗದ ಮಹಾರಾಜನ ಪವಿತ್ರ ಚರಿತ್ರೆಯು ಮುಂದೆ ಸಾಗುತ್ತಿದೆ. ಆತನ ರಾಜ್ಯದಲ್ಲಿ ಪಾಪಕಾರ್ಯಗಳು ಬೇರೊಂದಿಗೇ ನಾಶವಾಗಿ ಅವುಗಳ ಸ್ಥಾನದಲ್ಲಿ ಹರಿಭಜನೆ-ಕೀರ್ತನೆ ದಾನ ಧರ್ಮ ಪರೋಪಕಾರಾದಿ

ಗಳು ಸ್ಥಾಪಿತವಾದುವಷ್ಟೆ! ಆದರಿಂದ ರೋಗರುಜಿನೆಗಳು ಹುಟ್ಟಡಗಿಹೋದುವು. ಅಕಾಲಮರಣಗಳು ಕಣ್ಣಿಗೆ ಬೀಳದಾದುವು. ದೇಶದಲ್ಲಿ ಮಾಸಕ್ಕೆ ಮೂರುವೇಳೆ ಮಳೆಸುರಿದು, ಪೈರುಪಚ್ಚೆಗಳು ಸಮೃದ್ಧಿಯಾಗಿ ಬೆಳೆದು ಪ್ರಜೆಗಳೂ ಪಶುಪಕ್ಷಿಗಳೂ ಸುರಕ್ಷಿತವಾಗಿ ಸಂತೋಷದಿಂದ ಕಾಲಯಾಪನೆ ಮಾಡಿಕೊಂಡಿದ್ದುವು. ಹೀಗೆ ಕೆಲಕಾಲ ಕಳೆಯಿತು.

ಸ್ವರ್ಗ ನರಕಗಳೆಂಬಿವೆರಡು ಅದೃಶ್ಯಲೋಕಗಳು ಹೇಳಲ್ಪಟ್ಟಿವೆಯಷ್ಟೆ! ಇವುಗಳೆರಡೂ, ಭೂಲೋಕದಿಂದಲೇ ವೃದ್ಧಿ-ಕ್ಷಯಗಳನ್ನು ಹೊಂದತಕ್ಕವಾಗಿವೆ. ಭೂಲೋಕದಲ್ಲ ಪುಣ್ಯಕಾರ್ಯಗಳು ಹೆಚ್ಚಿ ಪ್ರಜೆಗಳು ಸಾತ್ವಿಕರೂ ಶಾಂತರೂ ಸತ್ಯಧರ್ಮನ್ಯಾಯವಿಚಾರಗಳಲ್ಲಾಸಕ್ತರೂ, ಅಹಿಂಸಾಪರರೂ, ದೈವಭಕ್ತರೂ ಪರೋಪಕಾರಿಗಳೂ ಆಗಿದ್ದರೆ, ಮರಣಾನಂತರ ಅವರ ಆತ್ಮಗಳು ಸ್ವರ್ಗವನ್ನು ಕುರಿತು ಗಮಿಸುವುವು. ಅವರು ಮದ್ಯಮಾಂಸಾಹಾರಿಗಳೂ ದುರ್ವೃತ್ತರೂ, ನಾಸ್ತಿಕರೂ, ಸುಳ್ಳು ಕಳ್ಳತನ, ಮೋಸ ಕಾಪಟ್ಯ, ಪರನಿಂದೆ ಅಹಿಂಸಾಕೃತ್ಯ ಮುಂತಾದುವುಗಳಲ್ಲಿ ನಿರತರೂ ಆಗಿದ್ದರೆ ಅವರು ಸತ್ತನಂತರ ಅವರ ಆತ್ಮಗಳು ನರಕಕ್ಕೆ ಸೆಳೆಯಲ್ಪಡುವುವು. ಸ್ವರ್ಗಲೋಕಕ್ಕೆ ಹೋದವರು, ಸದಾ ಪ್ರಿಯವಸ್ತುಗಳನ್ನೇ ನೋಡುತ್ತ ಪ್ರಿಯಭಾಷಣಗಳನ್ನು ಕೇಳುತ್ತ, ಉತ್ತಮ ವಿಚಾರಗಳಲ್ಲೇ ಅನುಭವಗೊಳ್ಳುತ್ತ ಸಂತೋಷಚಿತ್ತರಾಗಿರುವರು. ಅವರಿಗೆ ದೇವತೆಗಳ ಉತ್ತಮಸಹವಾಸವು ದೊರೆತು ಅವರು ಇನ್ನೂ ಅನೇಕ ಲೋಕೋಪಕಾರ ವಿಚಾರಗಳಲ್ಲಿ ಅನುಭವಗೊಳ್ಳುವರು. ಮಾನವದೃಷ್ಟಿಗೆ ಅಗೋಚರವಾದ ಅನೇಕ ವಿಚಾರಗಳನ್ನು ತಿಳಿದುಕೊಂಡು, ತಮ್ಮ ಪುಣ್ಯಾನುಭವ ಕಾಲವು ತೀರಿದ ತರುವಾಯ ಪುನಃ ಭೂಮಿಯಲ್ಲಿ-ಉನ್ನತಕುಲದಲ್ಲಿ ಜನ್ಮಿಸುವರು. ಮನಸ್ಸು ತೃಪ್ತಿಯಾಗುವಂತೆ ಸತ್ಕಾರ್ಯಗಳನ್ನು ಮಾಡಲು ವಿಶೇಷಾನುಕೂಲತೆಯುನ್ನುಂಟಾಗಿರುವುದರಿಂದ ಮೇಲೆ ಮೇಲೆ ಸತ್ಕಾರ್ಯಗಳನ್ನೇ ಮಾಡುತ್ತಾ ಉತ್ತಮೋತ್ತಮ ಗತಿಗಳನ್ನು ಹೊಂದುತ್ತಾ, ಭಗವತ್ಪ್ರೀತಿಗೆ ಪಾತ್ರರಾಗಿ ಕಾಲಕ್ರಮದಲ್ಲಿ ಪರಮಪದವನ್ನು ಹೊಂದುವರು. ಆದರೆ, ನರಕಕ್ಕೆ ಹೋದವರಾದರೋ, ಅಲ್ಲಿ ಯಮದೂತರಿಂದ ವಿವಿಧ ಕಷ್ಟಗಳಿಗೆ ಒಳಗಾಗುವರು. ತಾವು ಭೂಲೋಕದಲ್ಲಿ ಮಾಡಿದ, ಪರ

ಹಿಂಸೆ ಪರದೂಷಣೆ, ಸುಳ್ಳು ಕಳ್ಳತನ ಮೋಸಗಳಿಗೆ ತಕ್ಕಂತಹ ಭಯಂಕರ ಶಿಕ್ಷೆಗಳನ್ನು ಒಂದಕ್ಕೆ ಹತ್ತರಷ್ಟು ನೂರರಷ್ಟು ಪ್ರಮಾಣದಿಂದ ಅನುಭವಿಸುವರು. ಮಾತಾಪಿತೃದ್ರೋಹ, ಬ್ರಾಹ್ಮಣಾಪಮಾನ, ಸಜ್ಜನರಿಗೆ ಉಂಟುಮಾಡಿದ ಕಿರುಕುಳ, ಮದ್ಯಮಾಂಸ ಸೇವನೆ, ಸುಳ್ಳು ಸಾಕ್ಷ್ಯ, ಪರಸ್ತ್ರೀಗಮನ, ಪರಸ್ವಾಪಹರಣ ಮುಂತಾದ ದುಷ್ಕಾರ್ಯಗಳಿಗೆ ತಕ್ಕಂತಹ ರೌರವ, ಅಸಿಪತ್ರವನ, ಕುಂಭೀಪಾಕ, ಅಂಧತಾಮಿಸ್ರ, ಕಾಲಸೂತ್ರ, ಕ್ರಿಮಿಭೋಜನ, ತಪ್ತಸೂರ್ಮಿ, ವಜ್ರಕಂಟಕ-ಶಾಲ್ಮಲೀ, ವೈತರಣೀ ಮುಂತಾದ ಅನೇಕಾನೇಕ ನರಕ ವಿಶೇಷಗಳಲ್ಲಿ ಬಾಯಿಂದ ಹೇಳಲಾಗದ-ಮನಸ್ಸಿನಿಂದ ಊಹಿಸಲಾಗದ ವಿಚಿತ್ರ ಹಿಂಸೆಗಳನ್ನು ಅನುಭವಿಸುವರು. ಯಾವ ಯಾವ ಪಾಪಕಾರ್ಯಗಳಿಗೆ ಯಾವ ಯಾವ ನರಕಗಳು, ಸೃಷ್ಟಿಸಲ್ಪಟ್ಟಿವೆ! ಅಲ್ಲಿ ಏನೇನು ಶಿಕ್ಷಾವಿಶೇಷಗಳು ವಿಧಿಸಲ್ಪಟ್ಟಿವೆಯೆಂಬುದನ್ನು ವಿವರಿಸಲು ಇಲ್ಲಿ ಸ್ಥಳಭಾವದಿಂದ ಸಾಧ್ಯವಿಲ್ಲ! ಕೇವಲ ಪ್ರತ್ಯಕ್ಷ ಪ್ರಮಾಣವನ್ನು ಮಾತ್ರ ನಂಬುವ ನಮ್ಮ ಆಧುನಿಕ ವಿದ್ಯಾಪಕ್ಷಪಾತಿಗಳನ್ನು ಮೇಲ್ಕಂಡ ಸ್ಥಳಗಳಿಗೆ ಕರೆದೊಯ್ದು ಅವುಗಳನ್ನು ತೋರಿಸಲಂತೂ ಪ್ರಕೃತ ಯತ್ನವಿಲ್ಲವಷ್ಟೆ! ಎಂತೂ ಒಂದು ವಿಷಯವನ್ನು ಅವರಾದರೂ ಒಪ್ಪಲೇಬೇಕಾಗಿದೆ! ಆಂಗ್ಲೇಯ ಭಾಷೆಯಲ್ಲಿ ಯಾವುದಕ್ಕೆ 'ಎನರ್ಜಿ' ಎಂದು ಹೇಳಲ್ಪಟ್ಟಿದೆಯೋ ಆ 'ಪರಿಶ್ರಮ' ವು ಎಂತೂ ವ್ಯರ್ಥವಾಗಿದೆ, ಅದಕ್ಕೆ ತಕ್ಕಂತಹ ಪ್ರತಿಫಲವು ಎಂದಿದ್ದರೊಂದು ದಿವಸ ತಪ್ಪದೆ ದೊರಕಲೇಬೇಕಲ್ಲವೆ! ಆ ಪರಿಶ್ರಮವು ಸತ್ಕಾರ್ಯಗಳಲ್ಲಿ ಉಪಯೋಗವಾಗಿದ್ದರೆ, ಅದಕ್ಕೆ ಬರುವ ಪ್ರತಿಫಲವು ಕರ್ತೃವಿಗೆ ಸಂತೋಷ ಸಮಾಧಾನ ಶಾಂತತೆಗಳನ್ನು ತರುವುದು. ಯಾವನೊಬ್ಬನ ಪರಿಶ್ರಮವು, ಪರರನ್ನು ಹಿಂಸೆಗೊಳಿಸುವುದರಲ್ಲಿ-ಸಂಕಟಪಡಿಸುವುದರಲ್ಲಿ-ಮೋಸಪಡಿಸುವುದರಲ್ಲಿಯಾಗಲಿ, ಪರರನ್ನು ವಂಚಿಸಿ ತನ್ನ ಸ್ವಾರ್ಥತೆಯನ್ನು ಸಾಧಿಸಿಕೊಳ್ಳುವುದರಲ್ಲಾಗಲೀ ವಿನಿಯೋಗವಾಗಿದ್ದರೆ, ಅದಕ್ಕೆ ತಕ್ಕಂತಹ ಪ್ರತಿಫಲವೇ, ದಶಾಂಶ ಶತಾಂಶ ಅಧಿಕವಾಗಿ ಅವನ ಪಾಲಿಗೆ ಬರುವುದು. ದೇಹದಿಂದ ಮಾಡಿದ ಪಾಪಕ್ಕೆ ದೇಹಕ್ಕೂ-ಮನಸ್ಸಿನಿಂದ ಮಾಡಿದ ಪಾಪಕ್ಕೆ ಮನಸ್ಸಿಗೂ ಬುದ್ಧಿಯಿಂದ ಮಾಡಿದ ಪಾಪಕ್ಕೆ ಬುದ್ಧಿಗೂ

ಆ ಪಾಪ ಫಲವು ಸಂಘಟಿಸುವುದು ತಪ್ಪದು. ಇಂತು ಆ ಜೀತನನು ತನ್ನ ಪಾಪಕರ್ಮಕ್ಕೆ ತಕ್ಕಂತೆ ಅಗಾಧ ಯಾತನೆಗಳನ್ನು ಅನುಭವಿಸಿ, ಪುನಃ ಭೂಮಿಯಲ್ಲಿ ಪಾಪಯೋನಿಯಲ್ಲೇ ಎಂದರೆ, ತನ್ನ ಹಿಂದಿನ ಕೃತ್ಯಗಳಿಗೆ ಸಂಬಂಧಪಟ್ಟಂತಹ ಕಳ್ಳಕಾಕರು, ಹೆಂಡಗುಡುಕರು, ಸ್ವಾರ್ಥಿಗಳು, ದಂಗೆ-ದರೋಡೆಕೋರರು ನಾಸ್ತಿಕರು ಪಾಪಿಗಳು ಮುಂತಾದವರ ಉದರದಲ್ಲೇ ಹುಟ್ಟುವನು. ಪುನಃ ಒಂದಕ್ಕೆ ಹತ್ತಾಗಿ ಪಾಪಕಾರ್ಯ ಗಳನ್ನು ಮಾಡುವನು. ಪುನಃ ನರಕಯಾತ್ರೆ, ಪುನಃ ಜನ್ಮ, ಪುನಃ ಮರಣ, ಪುನಃ ಯಾತನಾನುಭವ! ಹೀಗೆಯೇ—ತೊಳಲಿ, ಗತಿಗಾಣದೆ, ಹೋಗುವನು.

ರುಕ್ಮಾಂಗದ ಮಹಾರಾಜನ ಧರ್ಮ ರಾಜ್ಯಪರಿಪಾಲನೆಯಲ್ಲಿ ಇಂತಹ ಪಾಪಿಗಳೇ ಇಲ್ಲವಿದ್ದುದರಿಂದ ಅವರಿಂದ ಪಾಪಕೃತ್ಯಗಳು ನಡೆದು, ಅವು ಗಳ ಫಲವಾದ ನರಕಯಾತನೆಯನ್ನು ಅನುಭವಿಸುವುದಕ್ಕಾಗಿ ನರಕಕ್ಕೆ ಹೋಗುವವರೂ ಯಾರೂ ಇರದಂತಾಯಿತು. ನರಕದಲ್ಲಿ ಮೊದಲಿದ್ದ ಜೀವಿಗಳೆಲ್ಲ, ತಮ್ಮ ಕಾಲಾವಧಿಯವರೆಗೂ ಶಿಕ್ಷೆಗಳನ್ನು ಅನುಭವಿಸಿ ಪುನಃ ಜನನಕ್ಕಾಗಿ ಭೂಲೋಕವನ್ನು ಕುರಿತು ಹೊರಟರುವಾಯು, ಭೂ ಲೋಕದಿಂದ ಹೊಸದಾಗಿ ಯಾರೂ ಬಾರದಿದ್ದುದರಿಂದ ನರಕದ ವಿವಿಧ ಪ್ರದೇಶಗಳು ಬರಿಯವಾದುವು. ಯಮದೂತರು ಕೆಲಸವಿಲ್ಲದೆ ತೂಗಡಿಸ ತೊಡಗಿದರು. ಇದರ ಕಾರಣವನ್ನು ತಿಳಿಯದೆ ಯಮನು ವಿಚಾರ ಗ್ರಸ್ತನಾದನು. ತನ್ನ ಲೋಕವು ಬರಿದಾಗಿ, ತನ್ನ ಸೇವಕರ ಕೈಗಳು ಕಟ್ಟಿದಂತಾದುವಲ್ಲಾ ಎಂಬ ಯೋಚನೆಯಿಂದ, ಆತನು ಒಡನೆ ತನ್ನ ವಾಹನಾರೂಢನಾಗಿ, ಜಗತ್ಕರ್ತನಾದ ಬ್ರಹ್ಮದೇವನಲ್ಲಿಗೆ ನಡೆದು, ತನ್ನ ಪ್ರಭುತ್ವಕ್ಕೆ ಪ್ರಾಪ್ತವಾದ ಕುಂದಕವನ್ನು ಕುರಿತು ವಿಜ್ಞಾಪಿಸಿಕೊಂ ಡನು. ಬ್ರಹ್ಮನು ಜ್ಞಾನದೃಷ್ಟಿಯಿಂದ ತಿಳಿದುನೋಡಿ—''ಯಮರಾಜಾ ಯೋಚಿಸದಿರು. ಭೂಲೋಕದಲ್ಲಿ ರುಕ್ಮಾಂಗದ ಮಹಾರಾಜನು ಹರಿ ಭಕ್ತಿ ಪಾರಾಯಣನಾಗಿ ಸತ್ಯಸಂಧನಾಗಿ, ಏಕಾದಶೀವ್ರತನಿಷ್ಠನಾಗಿ ಅಷ್ಟುಮಾತ್ರವಲ್ಲದೆ, ತನ್ನ ಆದ್ಯಂತ ಪ್ರಜಾವರ್ಗದಲ್ಲೂ ಸತ್ಯಧರ್ಮ ಪರೋಪಕಾರ-ಶ್ರೀ ವಿಷ್ಣುಭಕ್ತಿಗಳನ್ನು ಸ್ಥಾಪಿಸಿರುವುದರಿಂದ ಪ್ರಜೆಗಳೆಲ್ಲರೂ

ಸನ್ಮಾರ್ಗತತ್ಪರರಾಗಿ ನಿನ್ನ ರಾಜ್ಯಕ್ಕೆ ಯಾರೂ ಬಾರದಂತಾಯಿತು. ಇದರಿಂದ ನಷ್ಟವೇನು! ಲೋಕಕ್ಷೇಮವೇ ಕರ್ತವ್ಯವಲ್ಲವೆ? ಇದರಿಂದ ಸಂತೋಷಪಡಬೇಕಲ್ಲದೆ, ವ್ಯಸನಪಡಲೇಕೆ?' ಎಂದು ನುಡಿದನು.

ಅದನ್ನು ಕೇಳಿದ ಯಮರಾಜನು,—'ಪಿತಾಮಹ, ರುಕ್ಮಾಂಗದನ ಸತ್ಯ ರಾಜ್ಯಭಾರದಿಂದ ಪುಣ್ಯವಂತರ ಸಂಖ್ಯೆಯೇ ಬೆಳೆದುದರಿಂದ ನರಕಕ್ಕೆ ಯಾರೂ ಬಾರದಂತಾದ ವಿಷಯದಲ್ಲಿ ಒಂದು ಭಾಗದಿಂದ ಸಂತೋಷಪಡಬಹುದಾದರೂ, ನನ್ನ ರಾಜ್ಯವು ಹಾಳುಬಿತ್ತೆಂಬ ಯೋಚನೆಯೊಂದು ಸ್ವಾಭಾವಿಕವಾಗಿ ನನಗೆ ಇರಲೇಬೇಕಲ್ಲವೆ! ತನ್ನ ಅಧಿಕಾರಕ್ಕೆ ಬಂದ ಸ್ವರ್ಗವು ವೃದ್ಧಿಗೊಂಡುದಕ್ಕಾಗಿ ದೇವೇಂದ್ರನು ಸಂತೋಷಪಡಬಹುದಾದರೂ, ನನ್ನ ಪಾಲಿಗೆ ಬಂದ ನರಕವು ನಾಶವಾದುದಕ್ಕಾಗಿ ನಾನು ಚಿಂತಿಸಲೇಬೇಕಲ್ಲವೆ! ಅದಿರಲಿ,—ಪ್ರಭೋ ಸರ್ವಜ್ಞಚಿತ್ತಕ್ಕೆ ಒಂದು ವಿಚಾರವು ವೇದ್ಯವಿರಬೇಕು! ರುಕ್ಮಾಂಗದ ಮಹಾರಾಜನು ಕೈಕೊಂಡು ನಡೆಯಿಸುತ್ತಿರುವ ಸತ್ಕಾರ್ಯದ ವಿಷಯದಲ್ಲಾಗಲೀ, ಆತನು ಸ್ಥಾಪಿಸುತ್ತಿರುವ ವಿಷ್ಣುಭಕ್ತಿ ಸಾಮ್ರಾಜ್ಯದ ವಿಷಯದಲ್ಲಾಗಲೀ ನನಗೆ ಅಸೂಯೆಯಿಲ್ಲ. ಆದರೆ, ನನ್ನ ಆಶಯವೊಂದುಂಟು. ಅದನ್ನು ವಿಜ್ಞಾಪಿಸುತ್ತೇನೆ. ಪ್ರಜಾವರ್ಗದ ಕಣ್ಣೆದುರಿನಲ್ಲಿ ಉದಾಹರಣಸ್ವರೂಪನಾಗಿ ರಾಜನಿದ್ದು, ಆತನ ಆಚರಣೆಯನ್ನು ತಾವೂ ಅನುಸರಿಸಬೇಕೆಂಬ ಕೇವಲ ಉತ್ಸಾಹದಿಂದ ಪ್ರಜೆಗಳೂ ಆತನಂತೆಯೇ ಆಚರಿಸುತ್ತಿರುವುದರಿಂದ ಪ್ರಜಾವರ್ಗದ ಮನಸ್ಸಿನಲ್ಲಿ ಮೇಲ್ಕಂಡ ಉನ್ನತವಿಚಾರಗಳು ರೂಢಮೂಲವಾಗಿ ನೆಲೆಗೊಳ್ಳಲಾರವು, ಅವು ಹಾಗೆ ನೆಲೆಗೊಳ್ಳುವಂತೆ ಮಾಡಬೇಕಾದರೆ, ಆತನ ಆಚರಣೆಯು ಯಾವುದಾದರೊಂದು ಅಗಾಧ ಪರೀಕ್ಷೆಯಿಂದ ವಿಶುದ್ಧವಾದುವೆನ್ನಿಸಲ್ಪಡಬೇಕು. ಅಂತಾದರೆ ಮಾತ್ರ, ಅದು ಪ್ರಪಂಚಕ್ಕೊಂದು ಶಾಶ್ವತ ಉದಾಹರಣೆಯಾಗಿ ನಿಂತುಹೋಗುವುದು. ಸತ್ವಶಾಲಿಗಳ ಸತ್ವವು ಕೇವಲ ತೋರಿಕೆಯ ಆಚರಣೆಯಿಂದ ಮಾತ್ರವಲ್ಲ! ಅವು ಅಸಾಧಾರಣವಾದ ಪರೀಕ್ಷೆಗಳಿಗೆ ಒಳಪಟ್ಟು ತಮ್ಮ ದಾರ್ಢ್ಯವನ್ನು ಕಾಪಾಡಿಕೊಳ್ಳಬೇಕಾಗಿದೆ. ಈ ವಿಷಯವು ಪ್ರಭುಚಿತ್ತಕ್ಕೆ ವೇದ್ಯವಿರಬೇಕು' ಎಂದನು.

ಯಮಧರ್ಮರಾಜನಾಡಿದ ಮಾತುಗಳು ಉಚಿತವೆಂದು ಯೋಚಿಸಿ, ಬ್ರಹ್ಮದೇವನು, ಆತನನ್ನು ಅಪ್ಪಣೆಕೊಟ್ಟು ಕಳುಹಿಸಿ, ತರುವಾಯ ತಾನು ಹೀಗೆ ಯೋಚಿಸಲಾರಂಭಿಸಿದನು. ರುಕ್ಮಾಂಗದನ ಧಾರ್ಮಿಕಾಚರಣೆಗಳಲ್ಲೆಲ್ಲ ಏಕಾದಶೀ ವ್ರತವೇ ಮುಖ್ಯವಾದುದು. ಅದರಲ್ಲೂ ಮಹಾರಾಜನಾದ ಆತನು ಆ ದಿನಗಳಲ್ಲಿ ವಿಷಯೇಂದ್ರಿಯಗಳ ಉಲ್ಬಣತೆಗೆ ಒಳಪಡದಿರ ತಕ್ಕುದೇ ಮುಖ್ಯವಾದುದು. ಈ ಒಂದುಭಾಗದಲ್ಲಿ ಆತನನ್ನು ಪರೀಕ್ಷಿಸಿ ಬಿಟ್ಟರೆ ಸಾಕು. ಇದೊಂದರಲ್ಲಿ ಗೆದ್ದು, ಆತನು ತನ್ನ ಸತ್ಯವನ್ನು ಕಾಯ್ದು ಕೊಂಡುಬಿಟ್ಟರೆ ಮಿಕ್ಕುವೆಲ್ಲವೂ ಅಲ್ಪವಿಚಾರಗಳು. ಈ ಕಾರ್ಯವನ್ನು ನೆರವೇರಿಸಲು, ತ್ರಿಲೋಕಮೋಹಕ ಸ್ತ್ರೀವ್ಯಕ್ತಿಯಲ್ಲದೆ, ಇತರರಿಂದ ಸಾಧ್ಯವಿಲ್ಲ. ಸ್ತ್ರೀ ಮೋಹಿತನಾದವನು ಯುಕ್ತಾಯುಕ್ತವಿಚಾರ ವಿಹೀನನಾಗುವುದು ತಪ್ಪದು. ರುಕ್ಮಾಂಗದನು ಆ ಸ್ತ್ರೀಗೆ ಮೋಹಿತನಾದಾಗಲೂ, ವಿಚಾರವಂತನಾಗಿ ತನ್ನ ವ್ರತನಿಷ್ಠೆಯನ್ನೂ, ಸತ್ಯವನ್ನೂ ಕಾಯ್ದುಕೊಳ್ಳುವನಾದರೆ, ಅವನು ಲೋಕಕ್ಕೇ ಉದಾಹರಣಸ್ವರೂಪನಾಗಲು ಅರ್ಹನಾದಂತಾಗುವುದು.' ಎಂದು ಭಾವಿಸಿ, ಸಂಕಲ್ಪಮಾತ್ರದಿಂದ, ಒಂದು ಸ್ತ್ರೀ ಪ್ರತಿಮೆಯನ್ನು ಸೃಷ್ಟಿಸಿದನು. ಅವಳು, ರಂಭೆ ಊರ್ವಶಿ ಮೇನಕೆ ತಿಲೋತ್ತಮೆಯರೆಂಬ ಅಪ್ಸರೆಯರೆಲ್ಲರ ಸೌಂದರ್ಯವೂ ಏಕತ್ರ ಸೇರಿದಂತಹ ಅನುಪಮ ರೂಪಲಾವಣ್ಯಗಳಿಂದ ತ್ರಿಲೋಕವನ್ನು ಮೋಹಗೊಳಿಸುತ್ತಾ-ಅಂದ ಚಂದಗಳಿಂದ ಪುರುಷರ ಮನಸ್ಸನ್ನು ಭ್ರಾಂತಿಗೊಳಿಸುವಂತೆ ಇದ್ದಳು. ಬ್ರಹ್ಮದೇವನು, ಅವಳನ್ನು 'ಮೋಹಿನೀ' ಎಂಬ ಸಾರ್ಥಕನಾಮದಿಂದ ಸಂಬೋಧಿಸಿ— 'ಎಲೌ ನೀನು ಭೂಲೋಕಕ್ಕೆ ಹೋಗಿ ಅಯೋಧ್ಯಾ ನಗರಾಧಿಪತಿಯಾದ ರುಕ್ಮಾಂಗದ ರಾಜನ ಏಕಾದಶೀ ವ್ರತನಿಷ್ಠೆಯನ್ನು ಪರೀಕ್ಷಿಸು. ಸಕಲ ವಿಧಗಳಿಂದಲೂ, ಆತನನ್ನು ನಿನ್ನ ಮೋಹಪಾಶಕ್ಕೆಳೆದುಕೊಳ್ಳಲು ಪ್ರಯತ್ನಿಸು. ಇದು ದೇವಕಾರ್ಯವು. ಇದರಿಂದ ನಿನಗೆ ಪಾಪ ಲೇಪವಿಲ್ಲ. ಹೊರಡು' ಎಂದು ಆಜ್ಞಾಪಿಸಿದನು.

ಅಧ್ಯಾಯ ೫ "ಮೋಹಪಾಶ"

---

ಬ್ರಹ್ಮದೇವನ ಮಾತುಗಳನ್ನು ಕೇಳಿದ್ದ ಮೋಹಿನಿಯು—'ಪಿತಾಮಹ, ನನ್ನನ್ನು ಸತ್ಯಶೀಲನಾದ ಆ ಮಹಾರಾಜನ ವ್ರತಭಂಗಕ್ಕಾಗಿಯೇ ಸೃಷ್ಟಿಸಿದೆಯಾ! ಹರಿಭಕ್ತನಾದ ಆತನ ಜೀವಿತವನ್ನು ಭ್ರಷ್ಟಗೊಳಿಸಲಿಕ್ಕಾಗಿ ಇಷ್ಟು ಸೌಂದರ್ಯ ಚಾತುರ್ಯಗಳನ್ನು ನನಗಿತ್ತೆಯಾ! ಮೋಕ್ಷಾಪೇಕ್ಷಿಯೂ, ಧರ್ಮಪರಾಯಣನೂ ಆದ ಆ ರಾಜೋತ್ತಮನ ಸತ್ಯವ್ರತನಿಷ್ಠೆಯನ್ನು ಕಳೆಯಲು ಕೇವಲ ಸ್ತ್ರೀಮಾತ್ರಳಾದ ನನ್ನಿಂದ ಸಾಧ್ಯವೇ? ಅಬಲೆಯಾದ ನನಗೆ ಇಂತಹ ಅಸಾಧ್ಯ ಕಾರ್ಯವನ್ನು ನಿಯಮಿಸಿದರೆ ನಾನದನ್ನು ನೆರವೇರಿಸುವ ಬಗೆಯಾವುದು! ದೇವಾ ಕನಿಕರಿಸು. ನನ್ನನ್ನು ಇಂಥಾ ದುರಂತಕಾರ್ಯದಲ್ಲಿ ಯೋಜಿಸಿ ಲಜ್ಜೆಗೀಡುಮಾಡಬೇಡ' ಎಂದು ಬೇಡಿಕೊಂಡಳು. ಆಗ ಬ್ರಹ್ಮದೇವನು—'ಮೋಹಿನೀ ಏನು ನೀನು ಕೇವಲ ಸ್ತ್ರೀ ಮಾತ್ರಳು ಎಂದು ಬೆದರುವೆಯಾ, ಅಬಲೆ ಎಂದು ಅಂಜುವೆಯಾ! ಸ್ತ್ರೀಯು ಮನ್ಮಥನ ಮದಗಜವೆಂಬುದನ್ನರಿಯೆಯಾ! ಅಬಲೆಯಾಗಿರುವುದರಲ್ಲೇ ಸ್ತ್ರೀಯ ಅಜೇಯ ಸತ್ವವು ಅಡಗಿರುವುದು! ಸ್ತ್ರೀಯ ಕಟಾಕ್ಷವೆಂಬ ಸಮ್ಮೋಹನಾಸ್ತ್ರಕ್ಕೆ ವಶನಾಗದಿರುವ ಪುರುಷನಾವನು ಭೂಮಿಯಲ್ಲಿರುವನು? ಪುರುಷನು ಬಲವಂತನಾಗಿರಬಹುದು, ವಿದ್ಯಾವಂತನಾಗಿರಬಹುದು—ಕವಿಶ್ರೇಷ್ಠನಾಗಿರಬಹುದು, ಮಹಾಪ್ರಾಜ್ಞನೆನಿಸಿರಬಹುದು! ಆದರೆ ಒಂದು ಸಾರಿ ಅವನು ಸ್ತ್ರೀ ಕಟಾಕ್ಷವೆಂಬ ಬಲೆಗೆ ಸಿಕ್ಕುಬಿದ್ದನೆಂದರೆ, ಅವನ ಬಲ ವಿದ್ಯೆ ಪ್ರಜ್ಞೆಗಳೆಲ್ಲವೂ ಅನುಪಯೋಗವೇ ಸರಿ! ಯೋಚಿಸಬೇಡ. ನೀನು ನಿಸ್ಸಹಾಯಕಳೇ! ಪುರುಷವಶೀಕರಣ ಸಾಧನಗಳಾದ ಮಂದಹಾಸ, ಕಡೆಗಣ್ಣ ಚಂಚಲನೋಟ, ಶುಷ್ಕಕೋಪ, ಮಂದಗಮನ—ಇವೆಲ್ಲಕ್ಕೂ ಹೆಚ್ಚಾಗಿ ಅನುಪಮ ದೇಹಸೌಂದರ್ಯ ಇವುಗಳಿರುವಾಗಲೂ ನೀನು ನಿಸ್ಸಹಾಯಕಳೆಂತಾಗುವೆ! ಯೋಚಿಸಬೇಡ. ಇನ್ನು ಹೊರಡು, ಕಾರ್ಯಸಾಧನೆಮಾಡಿಕೊಂಡುಬಾ' ಎಂದು ನುಡಿದನು.

ಪಿತಾಮಹನಾಡಿದ ಮಾತುಗಳಿಗೆ ಪ್ರತಿಹೇಳಲಾರದೆ, ಮೋಹಿನಿಯು ಆತನಿಗೆ ನಮಸ್ಕರಿಸಿ ಹೊರಟು, ಮಂದರಪರ್ವತದ ತಪ್ಪಲುಪ್ರದೇಶದಲ್ಲಿದ್ದ ಒಂದು ಉಪವನ ಸಮೀಪಕ್ಕೆ ಬಂದು, ಮುಂದೆ ಅಯೋಧ್ಯೆಯನ್ನು ಹೊಕ್ಕು, ರಾಜನನ್ನು ಸಂದರ್ಶಿಸುವ ಉಪಾಯವಾವುದೆಂದು ಯೋಚಿಸತೊಡಗಿದಳು. ಅಷ್ಟರಲ್ಲಿ ದೈವಿಕವಾಗಿಯೇ, ಒಂದು ಸುಯೋಗವೊದಗಿತು. ತನ್ನ ರಾಜ್ಯದ ಸರಹದ್ದಿನ ಪ್ರಾಂತದಲ್ಲಿ ದುಷ್ಟಮೃಗಗಳು ಹೆಚ್ಚಿ ಪ್ರಜೆಗಳಿಗೂ ಪಶುಗಳಿಗೂ ಹಿಂಸೆಮಾಡುತ್ತಿದ್ದುವೆಂಬ ತನ್ನ ಹಳ್ಳಿಗರ ಮೊರೆಯನ್ನು ಕೇಳಿ ರುಕ್ಮಾಂಗದನು, ಜೇಡಪಡೆಯೊಂದಿಗೆ ಬೇಟೆಗೆ ಬಂದು, ತೀಕ್ಷ್ಣಾಯುಧ ಪ್ರಹಾರಗಳಿಂದ ಹುಲಿ ಕರಡಿ ಸಿಹ್ಮ ಶಾರ್ದೂಲಾದಿ ನಾನಾ ಹಿಂಸ್ರಜಂತುಗಳನ್ನು ವಧಿಸಿ ಶ್ರಾಂತನಾಗಿ, ಬಾಯಾರಿಕೆಯಿಂದ ಪೀಡಿತನಾಗಿ, ನೀರನ್ನು ಹುಡುಕುತ್ತಾ, ಮೋಹಿನಿಯಿದ್ದ ಆ ವನದ ಸಮೀಪಕ್ಕೇ ಬಂದನು. ಅಷ್ಟರಲ್ಲಿ ಇತ್ತ ಏಕಾಂಗಿಯಾಗಿದ್ದು ಬೇಸತ್ತಿದ್ದ ಮೋಹಿನಿಯು ವಿನೋದಿಸಲಿಚ್ಛಿಸಿ, ಅಲ್ಲೇ ಇದ್ದ ಒಂದು ಉನ್ನತ ವೃಕ್ಷಕ್ಕೆ ಕಟ್ಟಲ್ಪಟ್ಟಿದ್ದ ಒಂದು ತೂಗುಮಂಚದಮೇಲೆ ಕುಳಿತು, ತೂಗಿಕೊಳ್ಳುತ್ತಿದ್ದಳು. ಮೃದುವಾಗಿ ಮಾಂಸುಲವಾಗಿ ವಸ್ತ್ರಹೀನವಾಗಿದ್ದ ತನ್ನೆರಡು ನಳಿತೋಳುಗಳಿಂದಲೂ ಎರಡು ಕಡೆಯ ಪುಷ್ಪಹಾರಗಳಿಂದ ಸುತ್ತಲ್ಪಟ್ಟಿದ್ದ ಹಗ್ಗಗಳನ್ನೂ ಹಿಡಿದು, ಪಾದಗಳಿಂದ ಭೂಮಿಯನ್ನು ಮೀಟುತ್ತಾ, ಆ ಬಲದಿಂದ ಬಹುವೇಗವಾಗಿ ಹಿಂದಕ್ಕೂ ಮುಂದಕ್ಕೂ ತೂಗಾಡುತ್ತಿರುವ ಆ ತೂಗುಮಂಚದಮೇಲೆ ಕುಳಿತು ವನದೇವತೆಯೋ ಎಂಬಂತೆ ವಿನೋದಗೊಳ್ಳುತ್ತಿದ್ದಳು. ಹಿಂದು ಮುಂದಕ್ಕೆ ಆಡುತ್ತಿರುವಾಗ ರಭಸದಿಂದ ವಾಯುವಿನ ತೆರೆಗಳು ಭೇದಿಸಲು, ಸ್ವಾಭಾವಿಕವಾಗಿಯೇ ಉಂಟಾಗುತ್ತಿದ್ದ ತಂಗಾಳಿಯು ಹೃದಯಕ್ಕೆ ಸೋಕಿ ಮಧ್ಯಾಹ್ನದ ಬಿಸಿಲಿನ ತಾಪವನ್ನು ಶಾಂತಗೊಳಿಸುತ್ತಿರಲು, ಆಕೆಯ ಮನಸ್ಸಿನಲ್ಲುಂಟಾದ ಉಲ್ಲಾಸವು ಬಾಯಿಂದ ಕೋಕಿಲಾಲಾಪವನ್ನು ಮೀರಿಸುವಂತಹ ದಿವ್ಯಗಾನವನ್ನೊಂದನ್ನು ಹೊರಡಿಸಿತು. ನಿರಾತಂಕವಾಗಿ ಪಕ್ಷಗಳನ್ನು ಪ್ರಸರಿಸಿಕೊಂಡು ಕೇಕೆ ಹಾಕುತ್ತಿರುವ ವಿಹಂಗಮದಂತೆ, ಮೋಹಿನಿಯೂ ನಿರಾತಂಕಳಾಗಿ, ದೇಹದ ಅಂಗಾಂಗಗಳನ್ನು ಸಡಿಲ

ಬಿಟ್ಟು ಧಾರಾಳವಾಗಿ ತೂಗಿಕೊಳ್ಳುತ್ತಾ, ಕಂಠಧ್ವನಿಯು ಉನ್ನತಿಯಿದ್ದಷ್ಟೂ ಉಚ್ಚಸ್ವರದಿಂದ ಗಾನವನ್ನು ಮಾಡುತ್ತಾ, ಆ ವನಭೂಮಿಯನ್ನೇ ಪ್ರತಿಧ್ವನಿಗೊಳಿಸುತ್ತಿರಲು, ಆ ದಿವ್ಯಗಾನವು ಅಲ್ಲೇ ಪಕ್ಕದಲ್ಲೇ ಸಂಚರಿಸುತ್ತಿದ್ದ ರುಕ್ಮಾಂಗದನಿಗೂ ಕೇಳಿಸಿತು. ಸ್ವಲ್ಪಹೊತ್ತು ಅಲ್ಲೇ ನಿಂತು ಕೇಳಿದ ಆತನಿಗೆ ಅದು ಒಬ್ಬ ತರುಣಿಯ ಕಂಠಧ್ವನಿಯೆಂಬಂತೆ ಬೋಧವಾಗದಿರಲಿಲ್ಲ. ಶ್ರವಣೇಂದ್ರಿಯಕ್ಕೆ ವಶವಾದ ಮನಸ್ಸು ಶಬ್ದದಕೇಂದ್ರಸ್ಥಾನವಾವುದೆಂಬುದನ್ನು ತಿಳಿಯಲಪೇಕ್ಷಿಸಿತು. ಪಾದಗಳು ಅನುಪಾಯವಾಗಿ ದೇಹವನ್ನು ಮುಂದಕ್ಕೆ ಸಾಗಿಸಿದುವು. ರಾಜನು, ದಿಣ್ಣೆಯನ್ನು ಹತ್ತಿ ಕೆಳಕ್ಕಿಳಿದು ಮುಂದಕ್ಕೆ ಬಂದನು. ಅಲ್ಲಿ ನೋಡುತ್ತಾನೇನು ದೃಶ್ಯವನ್ನು ! ಪಾದದ ಮಿಾಟುವಿಕೆಯಿಂದ ಮೇಲಕ್ಕೇರಿ ಬಹುದೂರ ಹಿಂದಕ್ಕೂ-ಪುನಃ ಆ ವೇಗಬಲದಿಂದ ಮುಂದಕ್ಕೂ ತೂಗುತ್ತಿರುವ ತೂಗುಮಣೆಯಮೇಲೆ, ಸುಮಾರು ಇಪ್ಪತ್ತು ವಸಂತಗಳ ಪ್ರಾಯ ಕಳೆದ ಒಬ್ಬ ರಮಣಿ! ಸ್ವರ್ಗೀಯಸೌಂದರ್ಯ. ಮಂದಹಾಸ, ಕಾಮನ ಬಿಲ್ಲನ್ನು ಹೋಲುವ ಕುಡಿಹುಬ್ಬುಗಳು, ಪೂರ್ಣಚಂದ್ರನಂತಹ-ಆದರೆ ಕೆಂದಾವರೆ ಬಿಳಿದಾವರೆಗಳು ಬೆರೆದಂತಹ ವರ್ಣದ ಮುಖಕಾಂತಿ, ಸಂಪಗೆಯ ಮೊಗ್ಗನ್ನು ಹೀಯಾಳಿಸುವಂತಹ ಮೂಗು, ತೊಂಡೆಯಹಣ್ಣನ್ನು ಧಿಕ್ಕರಿಸುವಂತಹ-ರಕ್ತವರ್ಣಶೋಭಿತ ತುಟಿಗಳು, ಒಂದೇಸಾಲಾದ ಮುತ್ತುಗಳಂತೆ ಸ್ವಚ್ಛವಾದ ದಂತಗಳು, ಹಿಂದೆ ಗಾಳಿಗೆತ್ತಿ ಹಿಡಿದ ಚೌರಿಯ ಕುಚ್ಚಿನಂತೆ ಬೆನ್ನನ್ನು ಬಿಟ್ಟು ಹಿಂದಕ್ಕೆ ಹಾರಿದ ವಿಸ್ತಾರವಾದ ದೀರ್ಘವಾದ-ಕಾರುಮೇಘವನ್ನು ಹೋಲುತ್ತಿದ್ದ ಘನವಾದ ಕೇಶರಾಶಿ, ಕಂಚುಕವಿಹೀನವಾದ ತನುಲತೆ, ನಿಂಬೆಯಹಣ್ಣನ್ನು ಹೋಲುತ್ತಿದ್ದ ವರ್ಣಶೋಭಿತವಾದ ಪುಷ್ಟದೇಹ! ಇಷ್ಟರಮೇಲೆ, ಉಟ್ಟಿದ್ದುದೋ ತೆಳುವಾದ ಗುಲಾಬಿ ಬಣ್ಣದ ಪಟ್ಟೆವಸ್ತ್ರ-ಇಂತಹ ಸ್ತ್ರೀವ್ಯಕ್ತಿಯೊಂದು ಕಾಲುಗಳೆರಡನ್ನೂ ದೀರ್ಘವಾಗಿ ನೀಡಿ, ಪಾದಾಂಗುಟಗಳಿಂದ ಭೂಮಿಯನ್ನು ಮಿಾಟುತ್ತಾ, ತೂಗಿಕೊಳ್ಳುತ್ತಾ ವಿನೋದಗೊಳ್ಳುತ್ತಿದ್ದುದನ್ನು ರಾಜನು ನೋಡಿದನು. ಆ ಭವ್ಯದೃಶ್ಯವು ಕಣ್ಣಿಗೆ ಬಿದ್ದುದೇ ಸಾವಕಾಶವು. ಒಡನೆ ಮಿಂಚಿನ ವೇಗದಿಂದ, ಆಕೆಯ ಆ ಸೌಂದರ್ಯವು, ಆತನ ನೋಟವನ್ನೂ, ನೋ

ಟವು ಚಿತ್ತವನ್ನೂ, ಚಿತ್ತವು ಬುದ್ಧಿಯನ್ನೂ, ಬುದ್ಧಿಯು ವಿವೇಕವನ್ನೂ ಅಪಹರಿಸಿಬಿಟ್ಟುವು. ಹೀಗೆ ಕ್ಷಣಮಾತ್ರದಲ್ಲಿ ಆಕೆಯು ಸೌಂದರ್ಯದಿಂದ ವಿವೇಕವು ಅಪಹೃತವಾದೊಡನೆಯೇ-ರಾಜನ ಭಗವತ್ಪರವಾಗಿದ್ದ ನಿರ್ಮಲಮನಸ್ಸು ಮೇಲೆ ಮೇಲೆ ಆ ದೃಶ್ಯವನ್ನೇ ನೋಡಲು ಹೆಚ್ಚು ಹೆಚ್ಚು ಅಪೇಕ್ಷಿಸತೊಡಗಿತು. ನೋಡಿ ನೋಡಿದಂತೆ ಆಕೆಯ ದೇಹದ ಬೇರೆಬೇರೆ ಭಾಗಗಳು ದೃಷ್ಟಿಗೋಚರವಾದುವು. ಒಂದು ಸಾರಿ ಆಕೆಯ ಅಂಗಾಂಗಗಳಲ್ಲಿ ಪ್ರವೇಶಿಸಿ ನಾಟಿಕೊಂಡ ದೃಷ್ಟಿಯನ್ನು ಹಿಂದಿರುಗಿಸಲು ಆತನಿಗೆ ಸಾಧ್ಯವಾಗದಂತಾಯಿತು. ರಾಜನು ಚಿತ್ರಪ್ರತಿಮೆಯಂತೆಯೂ-ಶಿಲಾವಿಗ್ರಹದಂತೆಯೂ ಅಲ್ಲೇ ನಿಂತುಬಿಟ್ಟನು. ಆತನ ಬಾಯಾರಿಕೆಯು ಅಣಗಿಹೋಯಿತು. ತಾಪವು ಶಮನವಾಯಿತು. ಆಯಾಸವು ಕುಂದಿಹೋಯಿತು. ಹೀಗೆ ಪರಮಾಶ್ಚರ್ಯಪಟ್ಟವನಂತೆ ತನ್ನಕಡೆಗೇ ನೋಡುತ್ತಾ ನಿಂತ ಆ ಪುರುಷನ ಕಡೆಗೆ ಮೋಹಿನಿಯು ಅಕಸ್ಮಾತ್ತಾಗಿ ಒಂದುಸಾರಿ ತಿರುಗಿನೋಡಿದಳು. ದಿವ್ಯಸುಂದರ ವಿಗ್ರಹದ - ಭವ್ಯದೇಹದ - ಕಾಮದೇವನನ್ನು ಹೋಲುತ್ತಿದ್ದ ಆತನ ಆ ಕೃತಿಯಾದರೂ ಮೋಹಕವಿಲ್ಲದಿರಲಿಲ್ಲ. ನಟ್ಟದೃಷ್ಟಿಯಿಂದ ತನ್ನನ್ನೇ ನೋಡುತ್ತಾ ನಿಂತ-ಅಜಾನುಬಾಹುವೂ ಭವ್ಯಮೂರ್ತಿಯೂ ಆದ ಆತನನ್ನು ಕಂಡೊಡನೆಯೇ ಮೋಹಿನಿಯ ಮುಖದಲ್ಲಿ ಮಂದಹಾಸವು ಮೊಳೆದೋರಿತು. ಆಕೆಯ ಕೋಲುಮಿಂಚಿನಂತಹ ಒಂದು ಚಂಚಲನೋಟವು ಕ್ಷಣಮಾತ್ರದಲ್ಲಿ ಆತನ ಹೃದಯವನ್ನು ಹೊಕ್ಕು ಅಂತರಾಶಯವನ್ನು ಪರೀಕ್ಷಿಸಿಬಿಟ್ಟಿತು. ಅದೊಂದು ನೋಟದೊಂದಿಗೇ ಅಲ್ಪಸ್ವಲ್ಪವಾಗಿ ಉಳಿದಿದ್ದ ರಾಜನ ಚಿತ್ತಸ್ವಾಧೀನತೆಯೂ ಸಂಪೂರ್ಣ ಅಪಹಾರವಾಗಿಹೋಯಿತು. ಮುಂದೆ ಆತನಿಗೆ ತಾನು, ತನ್ನ ರಾಜ್ಯ, ತನ್ನ ಕಾರ್ಯಕರ್ತೃತ್ವಗಳು, ರಾಜನಾದ ತನ್ನ ಗೌರವ ಇವುಗಳೊಂದರ ಗಮನವೂ ಉಳಿಯಲಿಲ್ಲ. ತನ್ನ ಚಿತ್ತಾಪಹಾರಕವಾದ ಆ ಸೌಂದರ್ಯದ ಕೇಂದ್ರಸ್ಥಾನವನ್ನು ಸಮೀಪಿಸಲು ದೇಹದ ಪಂಚೇಂದ್ರಿಯಗಳೂ ಚಡಪಡಿಸತೊಡಗಿದುವು. ಪಂಚೇಂದ್ರಿಯಗಳೂ ಏಕಕಾಲದಲ್ಲಿ ಉದ್ರೇಕಗೊಂಡುದರಿಂದ ರಾಜನು ಉಪಾಯತೋರದವನಾದನು. ಪಾದಗಳು ಕೊಂಡೊಯ್ದೆಡೆಗೆ ದೇಹವು ಸಾಗತೊಡಗಿತು. ಮೋಹಿನಿಯೂ ಆತನ

ಚರ್ಯೆಯನ್ನು ಕಂಡು, ಆಗಾಗ ಮುಖವೆತ್ತಿ ಓರೆಗಣ್ಣಿನಿಂದ ನೋಡು ತ್ತಾ, ಮಂದಹಾಸದಿಂದ ನೋಡಿ ಮುಖ ತಿರುಗಿಸಿಕೊಳ್ಳುತ್ತಾ, ಭುಜಗಳ ಮೇಲೆ ಅಸ್ತವ್ಯಸ್ತವಾಗಿ ಬಿದ್ದ ಕೇಶಗಳನ್ನು ಸರಿಪಡಿಸಿಕೊಳ್ಳಲೆಳಸಿ ತಲೆ ಯನ್ನಾಡಿಸುತ್ತಾ ಇಂತು ವಿನೋದಿಸುತ್ತಿರಲು-ರಾಜನು ಮೆಲ್ಲಮೆಲ್ಲನೆ ನಡೆದು ಸಮೀಪಕ್ಕೆ ಬಂದನು. ಆ ವೇಳೆಗೆ ಮೋಹಿನಿಯೂ, ವೇಗವನ್ನು ಕಡಮೆಮಾಡಿ ತೂಗುವಿಕೆಯನ್ನು ನಿಲ್ಲಿಸುವ ಸನ್ನಾಹದಲ್ಲಿದ್ದಳು. ಸಾಕಷ್ಟು ಸಮೀಪಕ್ಕೆ ಬಂದು ನಿಂತ ರಾಜನು—'ಎಲೌ ಸ್ತ್ರೀಶಿರೋಮಣಿಯೇ ನೀನಾರು ದೇವತಾಯುವತಿಯೋ ಗಂಧರ್ವ ಸುಂದರಿಯೋ ಅಥವಾ ಮಾನವ ಭಾಮಿನಿಯೋ? ಏಕಾಂಗಿಯಾಗಿ ಇಲ್ಲಿ ಕುಳಿತಿರುವೆಯೇಕೆ?' ಎಂದು ಪ್ರಶ್ನಿಸಿದನು.

ಕಾಮುಕ ದೃಷ್ಟಿಯಿಂದ ತನ್ನನ್ನು ನೋಡುತ್ತಾ, ಪ್ರಶ್ನಿಸುತ್ತಿದ್ದ ರಾಜನನ್ನು ಕುರಿತು, ಮೋಹಿನಿಯು, ಮಂದಹಾಸವನ್ನು ಸೂಸಿ—'ಮೋಹ ನಾಂಗ, ನಾನು ಮೋಹಿನಿಯು. ವಿಲಾಸಾರ್ಥವಾಗಿ ಇಲ್ಲಿದ್ದೇನೆ' ಎಂದು ಸೂಕ್ಷ್ಮವಾಗಿ ಹೇಳಿದಳು.—'ಮೋಹಿನೀ, ನಿನ್ನದಿದು ಸಾರ್ಥಕನಾಮವು. ನನ್ನ ಮನಸ್ಸು ನಿನ್ನೀ ಸೌಂದರ್ಯದಿಂದ ಅಪಹೃತವಾಗಿರುವುದು. ಸುಂದರೀ, ಕಾಮಜ್ವರವನ್ನು ತಾಳಲಾರದೆ ತಪಿಸುತ್ತಿರುವ ನನಗೆ ನಿನ್ನ ತಣುವಾದ ಹೃದಯಪ್ರದೇಶದಲ್ಲಿ ಎಡೆಯಿತ್ತು ರಕ್ಷಿಸು.'—'ಪುರುಷಶ್ರೇಷ್ಠ. ನೀನಾರೆಂಬ ಪರಿಚಯವಿಲ್ಲ. ಹೆಸರುದೆಸೆಗಳನ್ನರಿಯೆ............' ಎನ್ನು ತ್ತಿರುವಷ್ಟರಲ್ಲಿಯೇ—' ಮನಮೋಹಿನೀ, ನಾನು ರುಕ್ಮಾಂಗದ ನರೇಶನು. ಸೂರ್ಯವಂಶೋದ್ಭವನು ಅಯೋಧ್ಯಾನಗರಾಧಿಪತಿ. ಸಂದೇಹಿಸದಿರು' 'ಎಲೆ ಕಾಮದೇವ, ನಿನ್ನಮಾತು ಸತ್ಯವಿರಬಹುದು. ಆದರೆ ನೀನು ಈವರೆಗೆ ಅವಿವಾಹಿತನಲ್ಲವಷ್ಟೆ! ಸಾಪತ್ನಿಯೊಂದಿಗಿದ್ದು ಬಾಳುವುದು ನನ್ನಿಂದ ಆಗದ ಕಾರ್ಯವು. ಇದಕ್ಕೇನುಮಾಡುವೆ?' 'ಸುಂದರೀ ನೀನು ಹೇಳಿದ ಮಾತು ವಾಸ್ತವ. ನಾನು ಸುಳ್ಳನ್ನಾಡಲಾರೆನು. ನನಗೆ ಪಟ್ಟಮಹಿಷಿಯಲ್ಲದೆ, ಅನೇಕ ಭಾರ್ಯೆಯರಿರುವರು ನಿಜ. ಪಟ್ಟಮ ಹಿಷಿಯಲ್ಲಿ ಒಬ್ಬ ಪುತ್ರನೂ ಇರುವನು. ಆದರೇನು? ನಿನಗವರ ಪ್ರಕೃತ

ಬೇಡ, ಇನ್ನು ಮುಂದೆ, ಅವರಲ್ಲೊಬ್ಬರನ್ನೂ ದೇಹದಿಂದ ಸ್ಪರ್ಶಿಸೆನೆಂದು ನಿನಗೆ ಆಣೆಮಾಡಿಕೊಡುತ್ತೇನೆ. ಇದು ಸತ್ಯವು.' 'ರಾಜನೇ ಇದು ಸತ್ಯವೋ, ಮುಂದೆ ನನ್ನ ವಿನಹ ಅನ್ಯತ್ರ ಗಮಿಸುವುದಿಲ್ಲವೋ'—'ಮೋಹಿನೀ, ಏನೆಂಬೆ? ನನ್ನೀ ನಾಲಿಗೆಯು ಸುಳ್ಳಾಪತಕ್ಕುದಲ್ಲವೆಂದು ನಂಬು.' ಇಷ್ಟುಮಾತ್ರ ಸಂಭಾಷಣೆ ನಡೆವವೇಳೆಗೆ ತೂಗುಮಂಚವು ನಿಶ್ಚಲವಾಗಿ ನಿಂತಿತು. ರಾಜನು ಮುಂದಕ್ಕೆ ನಾಲ್ಕು ಹೆಜ್ಜೆ ಇಟ್ಟು ಬಂದು, ಮೋಹಿನಿಯನ್ನು ಕೆಳಕ್ಕಿಳಿಸಿಕೊಂಡನು. ಆಕೆಯು ರಾಜನನ್ನು ಆಶ್ರಯಿಸಿ ಆತನನ್ನು ಪರಾಜಯಗೊಳಿಸಬೇಕೆಂದೇ ಬಂದವಳಾದುದರಿಂದ, ಪ್ರಾರಂಭದಿಂದಲೇ ಸಂಕೋಚ ಸಂದೇಹಗಳನ್ನು ದೂರೀಕರಿಸಿ, ಬಹುಮಟ್ಟಿನ ಸರಳತೆ ಸಮುಖತೆಗಳಿಂದ ಆತನೊಂದಿಗೆ ಬೆರೆಯುತ್ತಾ, ಸರ್ವವಿಧಗಳಿಂದಲೂ ಆತನನ್ನು ತನ್ನ ಸಂಪೂರ್ಣ ಸ್ವಾತಂತ್ರ್ಯಕ್ಕೆ ಒಳಪಡಿಸಿಕೊಳ್ಳಯತ್ನಮಾಡತೊಡಗಿದಳು. ಇಷ್ಟು ನಡೆದು ಸ್ವಲ್ಪಹೊತ್ತಿನೊಳಗಾಗಿಯೇ ಅಲ್ಲಲ್ಲಿ ಚದರಿದ್ದ ಆತನ ಪರಿವಾರದವರೆಲ್ಲರೂ, ತಮ್ಮ ಪ್ರಭುವನ್ನು ಹುಡುಕುತ್ತಾ ಅಲ್ಲಿಗೆ ಬಂದುಸೇರಲು, ರುಕ್ಮಾಂಗದ ಮೋಹಿನಿಯರು ಅವರು ತಂದ ತಮ್ಮ ರಥಾರೂಢರಾಗಿ ಶೀಘ್ರವಾಗಿ ನಗರಾಭಿಮುಖರಾಗಿ ಪ್ರಯಾಣಮಾಡಿದರು. ಮೋಹಿನಿಗೆ ಸಕಲವೈಭವ ಸಮನ್ವಿತವಾದ ಒಂದು ಅರಮನೆಯು ನಿರ್ಮಿತವಾಯಿತು. ಅಲ್ಲಿ ಯಾವವಿಧ ವಿಷಯಸುಖವನ್ನು ಎಷ್ಟುಮಟ್ಟಿಗೆ ಎಷ್ಟುಬಗೆಗಳಿಂದ ಅನುಭವಿಸಬೇಕೆಂದರೂ ಸಮಸ್ತ ವಿಧವಾದ ಸಾಧನ ಸಾಮಗ್ರಿಗಳೂ ಸದಾಕಾಲದಲ್ಲೂ ಸಿದ್ಧವಿರುವಂತೆ ಏರ್ಪಾಡಾಯಿತು. ಮುಂದೆ ರಾಜನು, ತನ್ನ ಇತರ ರಾಣಿಯರ ಅರಮನೆಗಳ ಕಡೆ ಸುಳಿವುದೇ ತಪ್ಪಿಹೋಯಿತು. ರಾಜನು ಕೇವಲ ಮೋಹಿನಿಯ ಮೋಹಪಾಶಕ್ಕೆ ಬದ್ಧನಾಗಿ, ಮತ್ತೊಂದನ್ನರಿಯದೆ, ಸದಾ ಆಕೆಯಲ್ಲೇ ಅನುರಕ್ತನಾಗಿ ಆ ಅರಮನೆಯಲ್ಲೇ ನಿಂತು ಭೋಗತತ್ಪರ ಮನಸ್ಕನಾಗಿದ್ದುಬಿಟ್ಟನು.



ಅಧ್ಯಾಯ ೬ "ಪುತ್ರಯಜ್ಞ"

ಬೇಟೆಯಿಂದ ಹಿಂದಿರುಗಿ ರಾಜಧಾನಿಗೆ ಬಂದ ತಮ್ಮರಸನು, ರಾಜಸಭೆಗೆ ಬಾರದೆಯೂ ಮಂತ್ರಿ ಸಾಮಂತರಿಗೆ ದರ್ಶನಕೊಡದೆಯೂ, ರಾಜ್ಯವಿಚಾರಗಳನ್ನು ಗಮನಿಸದೆಯೂ, ಯಾವಳೋ ಒಬ್ಬ ಅಪರಿಚಿತ ಸುಂದರಿಯೊಂದಿಗೆ ಬೆರೆದು ಭೋಗಾಸಕ್ತನಾಗಿದ್ದ ವಿಚಾರವು ಸಕಲರಿಗೂ ಕಳವಳವನ್ನುಂಟುಮಾಡಿತು. ಮುಖ್ಯ ಪ್ರಧಾನನು, ರಾಜ್ಯಾಂಗ ನೀತಿಯಲ್ಲಿ ನಿಷ್ಣಾತನಾದುದರಿಂದ ರಾಜನು ರಾಜ್ಯವಿಚಾರವನ್ನು ಗಮನಿಸುವುದಿಲ್ಲವೆಂಬ ಸಂಗತಿಯನ್ನು ಪ್ರಸಿದ್ಧಪಡಿಸದೆ, ಎಂದಿನಂತೆ ತಮ್ಮ ರಾಜನು ರಾಜಕಾರ್ಯಗಳಲ್ಲಿ ಆಸಕ್ತನಾಗುವಂತೆ ಮಾಡಲು ಉಪಾಯವೇನೆಂದು ಯೋಚಿಸುತ್ತಿದ್ದನು. ಇತ್ತ ಸಂಧ್ಯಾವಳೀದೇವಿಯೂ ಇತರ ರಾಜಸ್ತ್ರೀಯರೂ, ಧರ್ಮಾತ್ಮನೂ ವಿಷ್ಣುಭಕ್ತನೂ ಮಹಾ ವ್ರತನಿಷ್ಠನೂ ಆದ ತಮ್ಮ ರಮಣನು, ಯಾವಳೋ ಒಬ್ಬ ಸ್ತ್ರೀಯ ವ್ಯಾಮೋಹಕ್ಕೊಳಪಟ್ಟು ಯುಕ್ತಾಯುಕ್ತ ವಿಚಾರವಿಹೀನನಾಗಿ ಸದಾ ಭೋಗಲಾಲಸಚಿತ್ತವೃತ್ತಿಯಿಂದ ಕುಳಿತ ಪರಿಯನ್ನು ಕುರಿತು ಅತಿಶಯ ಚಿಂತೆಗೀಡಾದರು. ಒಂದೆರಡು ದಿನಗಳು ಹೀಗೆ ಕಳೆದಮೇಲೆ, ಸಾಧ್ವೀ ಸಂಧ್ಯಾವಳೀದೇವಿಯು ತನ್ನ ಭರ್ತನ ಹಿತವನ್ನು ಚಿಂತಿಸಿ, ಧೈರ್ಯಮಾಡಿ ಆತನಿದ್ದಲ್ಲಿಗೆ ಬಂದು, —'ಮನೋವಲ್ಲಭ, ಮಂತ್ರಿ ಸಾಮಂತರು ರಾಜ್ಯಾಂಗ ವಿಚಾರಗಳಲ್ಲಿ ಸನ್ನಿಧಾನದ ಸಲಹೆ-ಆಜ್ಞೆಗಳನ್ನು ಎದುರುನೋಡುತ್ತಾ ಪಾದದರ್ಶನಕ್ಕೆಂದು ಕಾದಿರುವರು. ಪೂಜಾವ್ರತಾದಿಗಳ ಆಚರಣೆಗೆಂದು ಸಿದ್ಧಪಡಿಸಿಟ್ಟ ಪದಾರ್ಥಗಳು ಬಾಡಿ-ಒಣಗತೊಡಗಿವೆ. ಸ್ನಾನ-ಸಂಧ್ಯಾದಿ ನಿತ್ಯಕರ್ಮಗಳು ಲೋಪಮಾಡತಕ್ಕುವಲ್ಲವೆಂಬುದು ತಮಗೆ ಗೋಚರವಿಲ್ಲವೆ? ಮನುಷ್ಯನು ಗೃಹಸ್ಥನೇ ಆದರೂ, ಕಾಮಾಸಕ್ತನಾಗಿ ವಿಷಯ ಭೋಗವನ್ನನುಭವಿಸುವುದಕ್ಕೆ ಹೊತ್ತು ವೇಳೆಗಳ ನಿಯಮವಿಲ್ಲವೆ! ಇದೇನು! ತಮ್ಮ ಅಂತಃಪುರದಲ್ಲಿ ನಾನು ಮೊದಲಾಗಿ ತಮ್ಮ ಪಾದಸೇವೆಗೆ ಸರ್ವದಾ ಸಿದ್ಧರಿರುವ ನೂರಾರು ಮಂದಿ ಸ್ತ್ರೀಯರಿದ್ದೇವೆಯಲ್ಲ! ..........."ಎನ್ನುತ್ತಿರುವ ವೇಳೆಗೆ, ರಾತ್ರಿ ನಿದ್ರೆಯಿಲ್ಲದಿದ್ದುದರಿಂದಲೂ, ಕಾಮವಿಕಾರವ್ಯಾಪ್ತನಾಗಿ

ಇತರ ಯುಕ್ತಾಯುಕ್ತ ವಿಚಾರಗಳಲ್ಲಿ ಪ್ರಜ್ಞೆ ಇಲ್ಲದವನಾಗಿದ್ದುದರಿಂದಲೂ ರುಕ್ಮಾಂಗದನು ಕೆಂಪಾದ ಕಣ್ಣುಗಳಿಂದ ತನ್ನ ರಾಣಿಯನ್ನು ನೋಡುತ್ತಾ, ಗೊಗ್ಗರ ಧ್ವನಿಯಿಂದ—'ಸಂಧ್ಯಾವಳೀ ನೀನಿಲ್ಲಿಗೆ ಬಂದೆಯೇಕೆ? ನಾನು ಈ ಸ್ವರ್ಗಲೋಕದ ಅಪ್ಸರ ಸುಂದರಿಯಲ್ಲಲ್ಲದೆ ಅನ್ಯರಲ್ಲಿ ಭೋಗವನ್ನು ಬಯಸೆನು. ಈ ಸಂಗತಿಯನ್ನು ಎಲ್ಲಾ ಸ್ತ್ರೀಯರಿಗೂ ತಿಳಿಸಿಬಿಡು. ಮಂತ್ರಿಗೆ ರಾಜ್ಯ ವಿಚಾರವನ್ನು ಗಮನಿಸುವಂತೆ ಹೇಳಿ ಕಳುಹಿಸು.' ಎಂದು ನುಡಿದು ಪುನಃ ಮದನಬಾಣ ಪೀಡಿತನಾಗಿ ಶಯನ ಗೃಹವನ್ನು ಹೊಕ್ಕು ಮೋಹಿನಿಯ ಸುಂದರ ತನುಲತೆಯ ಆಲಿಂಗನ-ಚುಂಬನಾದಿ ಕ್ರಿಯೆಗಳಲ್ಲಿ ಮಗ್ನನಾಗಿದ್ದುಬಿಟ್ಟನು.

ತಮ್ಮ ರಾಜನ ಈ ಚರ್ಯೆಯು, ಒಂದುಕಡೆ ಮಂತ್ರಿ ಸಾಮಂತರಿಗೂ - ಆ ಸಂಗತಿಯನ್ನು ಕರ್ಣಾಕರ್ಣಿಕೆಯಾಗಿ ಕೇಳಿದ ಪ್ರಜೆ ಪರಿವಾರಗಳಿಗೂ, ಮತ್ತೊಂದುಕಡೆ ಅಂತಃಪುರದಲ್ಲಿನ ಸ್ತ್ರೀಜನಕ್ಕೂ ಅತಿಶಯ ಚಿಂತೆಗೆ ಕಾರಣವನ್ನುಂಟುಮಾಡಿತು. ಎಲ್ಲರೂ ತಮ್ಮ ರಾಜನು ಆ ಸ್ತ್ರೀಭೂತದ ಮೋಹಪಾಶದಿಂದ ಬಿಡುಗಡೆಯಾಗಲು ಏನುಮಾಡಬೇಕೆಂದು ಯೋಚಿಸತೊಡಗಿದರು. ಎಷ್ಟು ಯೋಚಿಸಿದರೂ-ಪ್ರತೀಕಾರವೇನೆಂಬುದು ತೋರದಂತಾಯಿತು. ಆಗ ಸಂಧ್ಯಾವಳೀದೇವಿಯು ಪುನಃ ಪ್ರಯತ್ನಿಸೋಣವೆಂದು, ರಾಜನಿದ್ದ ಮೋಹಿನಿಯ ಅರಮನೆಗೆ ನಡೆದು, ಧೈರ್ಯಗೊಂಡು—'ಪ್ರಾಣೇಶ್ವರಾ ಶ್ರೀ ವಿಷ್ಣುಪಾದ ಸೇವಾಸಕ್ತರಾದ ತಮ್ಮ ಚಿತ್ತವು ಹೀಗೇಕೆ ಭ್ರಾಂತವಾಯಿತು! ವಿಷಯವಸ್ತುಗಳೊಂದಿಗೆ ಉಂಟಾಗುವ ಸಂಗವು ಕಾಮವನ್ನೂ ಆ ಕಾಮವು ತನ್ನ ಪರಂಪರೆಯಲ್ಲಿ ಕ್ರೋಧ ದುರ್ಮೋಹ ಸ್ಮೃತಿ ವಿಭ್ರಮಾದಿಗಳನ್ನೂ ಉಂಟುಮಾಡುವುದೆಂಬುದೂ-ಅದರಿಂದ ಬುದ್ಧಿನಾಶವೂ ಬುದ್ಧಿನಾಶದಿಂದ ಸರ್ವನಾಶವೂ ಉಂಟಾಗುವುದೆಂಬುದೂ ತಮಗೆ ಗೋಚರವಿಲ್ಲವೆ! ಅನುಪಮ ಪವಿತ್ರವಾದುದೆನಿಸಿ ಶ್ರೀ ವಿಷ್ಣುಪಾದಾಸಕ್ತವಾಗಿದ್ದ ತಮ್ಮ ಚಿತ್ತವೃತ್ತಿಯು ಇಷ್ಟು ವಿಪರೀತಾವಸ್ಥೆಗೆ ಈಡಾಗಬಹುದೆ? ಕಾಮಕ್ಕೆ ದಾಸರಾಗಿ ಹಿಂದೆ ರಾವಣ-ನಹುಷ ರಾಜ ಮುಂತಾದವರ ಗತಿಯೇನಾಯಿತೆಂಬ ಸಂಗತಿಯು ತಮಗೇನು ತಿಳಿಯದೆ! ಇನ್ನಿದನ್ನು ಸಾಕುಮಾಡಿ, ರಾಜ್ಯವಿಚಾರಗಳಲ್ಲಾಸಕ್ತರಾಗಿ

ಒಂದು ದಿನವಾದರೂ ತಪ್ಪದಿದ್ದ ನಿತ್ಯಕರ್ಮಾನುಷ್ಠಾನಗಳನ್ನು ನೆರವೇರಿಸಿರಿ.' ಎಂದು ಪತ್ನೀಧರ್ಮವನ್ನನುಸರಿಸಿ ಹಲವು ಬಗೆಯಲ್ಲಿ ಹಿತಬೋಧನೆ ಮಾಡಿದಳು. ಆದರೆ ಆ ಮಾತುಗಳೆಲ್ಲವೂ ರಾಜನ ಕಿವಿಗೆ ಕೇಳಿಸಿದುವು ಅಥವ ಕೇಳಿಸಿದ ಆ ಮಾತುಗಳು ಮೆದುಳಿಗೇರಿದುವು ಎಂಬುದಕ್ಕೆ ಸೂಚನೆ ಬೇನೂ ತೋರಲಿಲ್ಲ. ತನ್ನ ಪ್ರಯತ್ನವು ಇಂತಾಗಲು ಸಂಧ್ಯಾವಳೀ ದೇವಿಯು ಹತಾಶಳಾದಂತಾಗಿ ಮುಂದೇನುಮಾಡಬೇಕೆಂದು ಯೋಚಿಸ ತೊಡಗಿದಳು.

ಆ ವೇಳೆಗೆ ಶರದೃತುಪಿನ ಕಾರ್ತೀಕಮಾಸವು ಪ್ರಾಪ್ತವಾಯಿತು. ಕಾರ್ತೀಕ ಶುದ್ಧ ದ್ವಾದಶಿಯು ವಿಷ್ಣುಭಕ್ತರಿಗೆ ಮಹಾವ್ರತವು. ಆ ದಿನ ಶ್ರೀಮನ್ಮಹಾವಿಷ್ಣುಮೂರ್ತಿಯು ಶೇಷತಲ್ಪದಿಂದ ಜಗದುದ್ಧಾರಕ್ಕಾಗಿ ಯೋಗನಿದ್ರೆಯಿಂದ ಎಚ್ಚರಗೊಳ್ಳುವನೆಂಬ ಐತಿಹ್ಯವುಂಟು. ಆದುದರಿಂದಲೇ ಅದಕ್ಕೆ ಉತ್ಥಾನದ್ವಾದಶಿಯೆಂಬ ಪ್ರಸಿದ್ಧನಾಮವು ಪ್ರಾಪ್ತವಾಗಿದೆ. ಆ ದಿನದಲ್ಲಿ ಪ್ರತಿವರ್ಷವೂ ರುಕ್ಮಾಂಗದ ಮಹಾರಾಜನ ರಾಜ್ಯದಲ್ಲಿ ಅತಿಶಯ ವಿಜೃಂಭಣೆಯಿಂದ ಶ್ರೀ ವಿಷ್ಣುಮೂರ್ತಿಯ ಪೂಜೆ ಭಜನೆ ಉತ್ಸವಾದಿಗಳು ನಡೆವ ಪದ್ಧತಿಯಿತ್ತು. ರಾಜನು ಬಹು ಉತ್ಸಾಹದಿಂದಲೂ ಶ್ರದ್ಧಾಭಕ್ತಿಗಳಿಂದಲೂ ಆ ಉತ್ಸವಾದಿಗಳಲ್ಲಿ ಬೆರೆಯುತ್ತಿದ್ದನು. ಸಂಧ್ಯಾವಳೀದೇವಿಯೂ, ಮಂತ್ರಿಯೂ ಅದರ ಸುಯೋಗವನ್ನು ಯಾವ ರೀತಿಯಿಂದ ಉಪಯೋಗಿಸಿಕೊಂಡು ತಮ್ಮ ಪ್ರಭುವಿನ ಮನಸ್ಸನ್ನು ಆ ಮಾರ್ಗದಿಂದ ತಿರುಗಿಸಬಹುದೆಂಬುದನ್ನು ಕುರಿತು ಬಹು ದೀರ್ಘವಾಗಿ ಯೋಚಿಸಿ ಕಾರ್ಯಕ್ರಮಗಳನ್ನು ನಿರ್ಧರಿಸಿದರು.

ರುಕ್ಮಾಂಗದ ಮಹಾರಾಜನು ಮೋಹಿನಿಯೊಂದಿಗೆ ವಿಷಯಭೋಗಗಳನ್ನನುಭವಿಸುತ್ತಾ ಮಿಕ್ಕ ಸಕಲ ವಿಚಾರಗಳನ್ನೂ ಮರೆತುಬಿಟ್ಟನು. ರಾಜ್ಯದ, ತನ್ನ ಪೂಜಾಪುರಸ್ಕಾರಾದಿಗಳ, ನಿತ್ಯ ನೈಮಿತ್ತಿಕಾದಿ ವ್ರತಗಳ, ಸ್ನಾನಸಂಧ್ಯಾನುಷ್ಠಾನಾದಿಗಳ, ದಾನ ಯಜ್ಞ ಜಪಾದಿ ವಿಧಿಗಳ ಹೀಗೆ ಯಾವುದರಗೊಡವೆಯೂ ಆತನಿಗೆ ಬೇಕಾಗಲಿಲ್ಲ. ಪ್ರಾತಃಕಾಲ ಮಧ್ಯಾಹ್ನ ಸಂಧ್ಯಾಕಾಲ ರಾತ್ರೆ ಹೀಗೆ ಸರ್ವ ಕಾಲದಲ್ಲೂ, ಆ ಮೋಹಿನಿಯೊಂದಿಗೆ

ಬೆರೆದು, ಉದ್ಯಾನಸಂಚಾರ ಜಲಕೇಳೀವಿಹಾರ ಚಂದ್ರಿಕಾವಿಹಾರ ಗಳಲ್ಲೂ, ಶಯನ ಗೃಹದಲ್ಲಿ ಗಾಢಾಲಿಂಗನ ಅಧರಾಮೃತಪಾನ ಮುಂತಾದ ವಿವಿಧ ರತಿಕೇಳಿಗಳಲ್ಲೂ ಮಗ್ನನಾಗಿ ಬಾಹ್ಯ ಪ್ರಪಂಚದ ವಿಚಾರವನ್ನು ಶುದ್ಧವಾಗಿ ಮರೆತುಬಿಟ್ಟನು. ಹೀಗಿರುತ್ತಿರುವಲ್ಲಿ ಮೋಕ್ಷಕಾಂತ ಕಾರ್ತೀಕ ಶುದ್ಧದ್ವಾದಶಿ ಮಹಾ ಪುಣ್ಯತಿಥಿಯು ಪ್ರಾಪ್ತವಾಗುತ್ತಿರಲು, ವ್ರತನಿಷ್ಠ ರಾದ ಆ ರಾಜ್ಯದ ಪ್ರಜೆಗಳು ವೃಂದಾವನಾಧಿಪನಾದ ಶ್ರೀ ಕೃಷ್ಣ ಮೂರ್ತಿಯ ಮಹೋತ್ಸವಕ್ಕಾಗಿ. ತಮ್ಮ ತಮ್ಮ ಮನೆಗಳನ್ನು ಬಗೆಬಗೆ ಯಲ್ಲಿ ಸಿಂಗರಿಸತೊಡಗಿದರು. ಮನೆಗಳನ್ನೂ ವೃಂದಾವನಗಳನ್ನೂ ಸುಣ್ಣ ಕಾರಣೆಗಳಿಂದ ಅಲಂಕರಿಸಿದರು. ತಳಿರುತೋರಣಾದಿಗಳನ್ನು ಕಟ್ಟಿದರು. ಹೂ ಮಾಲೆಗಳಿಂದ ಸಿಂಗರಿಸಿದರು. ದಶಮಿಯ ಪ್ರಾತಃಕಾಲದಲ್ಲಿ ರಾಜ ದೂತರು ನಗರದ ನಾಲ್ಕು ಭಾಗದಲ್ಲೂ ತಮ್ಮಟೆ ಕಹಳೆಗಳನ್ನು ಮೊಳಗಿ ಸುತ್ತಾ ಸುತ್ತತೊಡಗಿ ಪ್ರಜೆಗಳಿಗೆ ಎಚ್ಚರ ಕೊಡಬೇಕೆಂಬ ಉದ್ದೇಶದಿಂದ —'ಎಲೈ ಪ್ರಜೆಗಳಿರಾ ಈ ದಿನ ದಶಮಿ. ಶ್ರೀ ಹರಿದಿನದ ಮಹಾ ವ್ರತ ವನ್ನು ಮರೆಯದಿರಿ. ಈ ದಿನ ದಶಮೀ ಏಕಭುಕ್ತ-ನಾಳೆ ಏಕಾದಶಿ ನಿರ್ಜ ಲೋಪವಾಸ-ಜಾಗರ, ನಾಡಿದ್ದು ದ್ವಾದಶಿ ಪಾರಣೆ-ಏಕಭುಕ್ತಾದಿಗಳ ನಿಯ ಮವನ್ನು ಮರೆಯದೆ ಆಚರಿಸಿರಿ. ಶ್ರೀ ವಿಷ್ಣು ಪೂಜೆ ಭಜನೆ, ಹರಿಕಥಾ ಶ್ರವಣಾದಿಗಳಲ್ಲಿ ಬೆರೆಯಿರಿ" ಎಂದು ಡಂಗೂರ ಹೊಡೆದು ಕೂಗುತ್ತಾ ತಿರುಗಿದರು. ರಾಜನೂ ಮೋಹಿನಿಯೂ ಇದ್ದ ಪ್ರಾಸಾದದ ಬಳಿಗೆ ಬಂ ದಾಗ ಮಂತ್ರಿ-ಮಹಾರಾಣಿಯರಿಂದ ಆಜ್ಞಪ್ತರಾಗಿದ್ದ ಆ ದೂತರು ಮೇಲ್ಕಂ ಡಂತೆ ಕೂಗಿ ಸಾರಿ ಹೇಳಿದುದು ಮಾತ್ರವಲ್ಲದೆ—'............ವಿಷಯೇಂದ್ರಿ ಯಗಳ ಉಲ್ಬಣತೆಗೆ ಒಳಗಾಗಿ ಈ ಮಹಾ ವ್ರತವನ್ನು ಮರೆತು ಜನ ವನ್ನು ಅಸಾರ್ಥಕ ಪಡಿಸಿಕೊಳ್ಳಬೇಡಿ. ಎಚ್ಚರ' ಎಂಬ ಮಾತನ್ನೂ ಸೇರಿಸಿ, ನಾಲ್ಕಾರು ಸಾರಿ ಗಟ್ಟಿಯಾಗಿ ಕೂಗಿ ಹೇಳಿದರು.

ಆ ವೇಳೆಯಲ್ಲಿ ರಾಜನು ಪ್ರಾತಃಕಾಲ ಸೂರ್ಯೋದಯವಾಗಿ ನಾಲ್ಕು ಗಳಿಗೆ ಹೊತ್ತು ಏರಿದ್ದರೂ ಶಯ್ಯಾಸಕ್ತನಾಗಿ ಮೋಹಿನಿಯೊಂದಿಗೆ ಸರಸ ಸಲ್ಲಾಪಗಳನ್ನಾಡುತ್ತಾ, ಹುಸಿನಗುವನ್ನು ನಗುತ್ತಾ, ಇನ್ನೂ ಹಾಸಿಗೆ ಯಲ್ಲೇ ಇದ್ದನು. ಡಮರು ತಮ್ಮಟೆ ಕಹಳೆಗಳ ವಿಶೇಷ ವಾದ್ಯಗಳಾಗು

ತ್ತಿದ್ದುದನ್ನು ಕೇಳಿ ಅದೇನೆಂದು ನೋಡಲು ಮುಹಡಿಯ ಕಿಟಕಿಯ ಬಳಿಗೆ ಬಂದನು. ರಾಜದೂತರು ಪುನಃ ಪುನಃ ಮೇಲ್ಕಂಡ ಮಾತುಗಳನ್ನು ಒತ್ತಿ ಒತ್ತಿ ಹೇಳುತ್ತಿದ್ದುದು ಕೇಳಿಸಿತು. ಆ ದಿನ ದಶಮಿ - ಮಾರನೆಯ ದಿನವೇ ಏಕಾದಶಿ-ಮೂರನೆಯ ದಿನ ದ್ವಾದಶಿ ಈ ಮೂರು ದಿನಗಳಲ್ಲೂ ನಿಯಮ ಬದ್ಧನಾಗಿರಬೇಕೆಂದುಕೊಂಡನು. ಸಂಸ್ಕಾರ ಬಲೀಯದಿಂದ ಮನಸ್ಸು ಆ ಕಡೆಗೆ ಹೊರಳಿತು. ಅಲ್ಲಿಂದ ಒಳಕ್ಕೆ ಬಂದು, ಒಡನೆಯೇ ವಸ್ತ್ರಾದಿಗಳನ್ನು ಕಳೆದು ಸ್ನಾನ ಗೃಹಕ್ಕೆ ನಡೆದು ಶುಚಿರ್ಭೂತನಾಗಿ ಮಡಿ ವಸ್ತ್ರಗಳನ್ನುಟ್ಟು, ದೇವ ಗೃಹವನ್ನು ಹೊಕ್ಕು ಪೂಜಾ ಕಾರ್ಯವನ್ನು ಸಾಂಗವಾಗಿ ನೆರವೇರಿಸಿ ಧ್ಯಾನಾಸಕ್ತನಾಗಿ ಕುಳಿತನು. ತನ್ನ ರಮಣನು ಬರುತ್ತಾನೆ-ಬರುತ್ತಾನೆಂದು ಕ್ಷಣ ನಿಮಿಷ ಗಳಿಗೆ-ಗಂಟೆಗಳಾಗಿ ಕಾಯ್ದು ಬೇಸತ್ತ ಮೋಹಿನಿಯು ಆತನನ್ನು ಹುಡುಕಿಕೊಂಡು ಆ ಮಹಾ ಪ್ರಾಸಾದವನ್ನೆಲ್ಲ ಸುತ್ತ ತೊಡಗಿದಳು. ಕೊನೆಗೆ ದೇವತಾ ಗೃಹದಲ್ಲಿ ಸ್ನಾನ ಮಾಡಿ ಮಡಿ ವಸ್ತ್ರವನ್ನುಟ್ಟು, ದ್ವಾದಶ ನಾಮಗಳು, ಕೊರಳಲ್ಲಿ ತುಲಸೀ ಮಾಲೆಗಳು, ಹಸ್ತದಲ್ಲಿ ಜಪಸರ ಮುಂತಾದುವುಗಳಿಂದ ಧ್ಯಾನಾಸಕ್ತನಾಗಿ ಕುಳಿತಿದ್ದ ತನ್ನಾಪ್ರಿಯನನ್ನು ಕಂಡು ಆ ಪರಿಸ್ಥಿತಿಗಾಗಿ ಕೊಂಚ ಬೆದರಿದಳು—'ಆಹಾ ನಾನು ಈತನ ಚಿತ್ತವೃತ್ತಿಯನ್ನು ಎಷ್ಟೋ ಮಟ್ಟಿಗೆ ತಿರುಗಿಸಿದ್ದರೂ ಈಗ ಪುನಃ ಹಿಂದಿನ ತನ್ನ ಅಭ್ಯಾಸವನ್ನು ಬಿಡದೆ ಸ್ನಾನ ಜಪಾದಿಗಳಲ್ಲಿ ಆಸಕ್ತನಾದನಲ್ಲಾ-ಮುಂದೇನು ಗತಿ' ಎಂದುಕೊಂಡು, ಸಾವಕಾಶಮಾಡದೆ ಒಡನೆ, ಶುಚಿರ್ಭೂತನಾಗಿ ದೇವಗೃಹದಲ್ಲಿದ್ದಾನೆಂಬುದನ್ನೂ ಗಮನಿಸದೆ, ಆತನ ಬಳಿಗೆ ನಡೆದು, ತೊಡೆಗೆ ಹೊಂದಿಕುಳಿತು, ಕತ್ತಿನ ಸುತ್ತಲೂ ತನ್ನ ನಳಿತೋಳನ್ನು ಸುತ್ತಿ ಮುಖಕ್ಕೆ ಮುಖವನ್ನು ಹೊಂದಿಸಿ—'ಪ್ರಿಯಾ ಮನೋಹರಾ, ಮೋಹನಾಂಗ ಇದೇನು ನಿನ್ನೀ ಆಚರಣೆಯು! ಈ ವೇಷವೇನು, ಕೈಯಲ್ಲಿ ಈ ಕಟ್ಟಿಗೆಯ ಮಣಿಗಳೇನು ? ಪುನುಗು ಕಸ್ತೂರಿಗಳೊಂದಿಗೆ ಬೆರೆದು ಸುವಾಸಿತವಾದ ದಿವ್ಯ ಗಂಧವಿರಲು ಮೈಗೆ ಇದೇನು ಈ ಹೊಲಸನ್ನು ಬಳಿದುಕೊಂಡಿರುವೆ?' ಎಂದು ನುಡಿದಳು. ತನ್ನ ಧ್ಯಾನಕ್ಕೆ ವಿಘ್ನಕಾರಿಯಾಗಿ ಬಂದವರಾರೆಂದು ಕಣ್ಣು ತೆಗೆದು ನೋಡಿದ ರುಕ್ಮಾಂಗದನು, ಮೋಹಿನಿಯು, ರಾತ್ರಿಯ ತಾಂಬೂಲಚರ್ವಣಾದಿಗಳಿಂದ

ಅಶುದ್ಧವಾಗಿದ್ದ ಮುಖವನ್ನೂ ತೊಳೆಯದೆ ಶುಚಿರ್ಭೂತನಾಗಿದ್ದ ತನ್ನನ್ನು ಅಪ್ಪಿ ಕುಳಿತಿದ್ದುದಕ್ಕಾಗಿ ಬಹು ಬೇಸರಗೊಂಡು—'ಮೋಹಿನೀ ಇದೇನು ಮಾಡಿದೆ? ಸ್ನಾನದಿಂದ ಶುಚಿಯಾಗಿ ಮಡಿ ವಸ್ತ್ರಗಳನ್ನುಟ್ಟು ಶುದ್ಧನಾಗಿ ಕುಳಿತಿದ್ದ ನನ್ನನ್ನು ಮುಟ್ಟಿದೆಯೇಕೆ? ಈ ದಿನ ದಶಮಿ. ನಾಳೆ ಏಕಾದಶಿ, ನಾಡಿದ್ದು ದ್ವಾದಶಿ ಈ ಮೂರು ದಿನಗಳಲ್ಲಿ ನನ್ನಗೊಡವೆಗೆ ಬಾರದಿರು. ಇಂದು ಏಕಭುಕ್ತ ನಾಳೆ ನಿರಾಹಾರ ನಾಡಿದ್ದು ಏಕಭುಕ್ತ ಇದು ನನ್ನ ವ್ರತವು. ಈ ಮೂರು ದಿನಗಳು ಕಳೆದ ತರುವಾಯ ಪುನಃ ನಿನ್ನೊಂದಿಗೆ ಎಂದಿನಂತೆಯೇ ಬೆರೆದು ವಿಹರಿಸುವೆನು. ಈ ಮೂರು ದಿನಗಳಲ್ಲೂ ನನ್ನನ್ನು ನೋಕದಿರು. ನನಗೆ ತೊಂದರೆ ಕೊಡದಿರು' ಎಂದನು. ರಾಜನ ಆ ಮಾತುಗಳನ್ನು ಕೇಳಿದೊಡನೆಯೇ ಮೋಹಿನಿಯು, ಓಹೋ ಮೋಸ ವಾಯಿತು. ಈ ವೇಳೆಯಲ್ಲಿ ನಾನು ಸುಮ್ಮನಿದ್ದು ಸಡಿಲ ಬಿಟ್ಟೆನಾದರೆ ಮುಂದೆ ಕೆಲಸ ಕೆಡುವುದೆಂದು ತಿಳಿದು—'ರಾಜೇಂದ್ರಾ, ಇದು ನಿನಗೆ ತಕ್ಕುದಲ್ಲ. ಸರ್ವದಾ ನನ್ನೊಂದಿಗಿದ್ದು ವಿಹರಿಸುತ್ತೇನೆಂದು ನುಡಿದ ನೀನು ಇಂದು ವ್ರತ ನಾಳೆ ಹರಿದಿನ ಮತ್ತೊಂದುದಿನ ಉಪವಾಸ ಎಂದು ಕುಳಿತರೆ ನನ್ನ ಪಾಡೇನು? ಈ ಶುಷ್ಕ ವ್ರತಾದಿಗಳಿಂದ ಪ್ರಯೋಜನವಾದರೂ ಏನು? ಪಂಚೇಂದ್ರಿಯಗಳಿಗೂ ಮಹದಾನಂದವನ್ನುಂಟುಮಾಡಿ ಮನಸ್ಸನ್ನು ಉಲ್ಲಾಸಗೊಳಿಸುವ ವಿಷಯ ಸುಖಗಳಿರುತ್ತಿರಲು, ಇಂದ್ರಿಯಗಳನ್ನು ಶುಷ್ಕ ಗೊಳಿಸುತ್ತಿರುವ-ಕೆಲಸಕ್ಕೆ ಬಾರದ ಈ ಕಾಡು ಕಸಗಳಿಂದ ಬಳಲೆಂದು ನಿನಗಾರು ಬೋಧಿಸಿದರು! ಏಳು, ರಮಣಾ ನಾನೀ ಕಾಮಜ್ವರದ ತಾಪವನ್ನು ತಡೆಯಲಾರೆ. ಏಳು ಶಯ್ಯಾಗೃಹಕ್ಕೆ ಹೋಗಿ ಅಲ್ಲಿ ನನ್ನೊಂದಿಗೆ ಹಂಸತೂಲಿಕಾತಲ್ಪವೆಂಬ ಕೊಳಕ್ಕಿಳಿದು, ವಿಷಯೇಚ್ಛೆಯೆಂಬ ಜಲಸ್ನಾನ ಮಾಡಿ, ಗಾಢಾಲಿಂಗನವೆಂಬ ವಸ್ತ್ರವನ್ನು ಧರಿಸಿ, ದಿವ್ಯ ಪರಿಮಳ ಸುಗಂಧಾನು ಲೇಪನವೆಂಬ ದ್ವಾದಶ ನಾಮಗಳನ್ನು ಹಚ್ಚಿಕೊಂಡು, ಜಾಜಿ ಮಲ್ಲಿಗೆಗಳ ಸುಗಂಧ ಹಾರಗಳೆಂಬ ಮಣಿ ಹಾರಗಳಿಂದ ಅಲಂಕೃತನಾಗಿ, ನನ್ನ ತೊಡೆಯೆಂಬ ಈ ಪೀಠದಲ್ಲಿ ಕುಳಿತು, ಸರಸಸಲ್ಲಾಪಗಳೆಂಬ ಮಂತ್ರ ಪಠನೆಗಳಿಂದ, ಅವಿರಳ ಚುಂಬನ ಕಚಕುಚಗ್ರಹಣಾದಿಗಳೆಂಬ ಅಂಗವಿನ್ಯಾಸಗಳಿಂದ-ಮನೋಹರಾ, ಬಹು ವಿಧ ರತಿಬಂಧಗಳೆಂಬ ಯೋಗಾಸನಗಳಿಂದ,

ನನ್ನೊಂದಿಗೆ ಅನುಭವಿಸುವ ರತಿಕೇಳಿಯೆಂಬ ಇಷ್ಟಿಯನ್ನಾಚರಿಸಿ, ಪಂಚೇಂದ್ರಿಯ ಸುಖಪ್ರದಾಯಕನಾದ ಕಾಮದೇವನನ್ನಾರಾಧಿಸುವೆಯಂತೆ,-ಧ್ಯಾನಿಸುವೆಯಂತೆ-ಪೂಜಿಸುವೆಯಂತೆ! ಏಳು, ನಾನಿನ್ನು ತಾಳಲಾರೆ' ಎಂದು ನುಡಿಯುತ್ತಾ ಬಹು ಬಗೆಯ ಲಲ್ಲೆ ಮಾತುಗಳಿಂದ ಮೋಹರಸವನ್ನು ಸೂಸುತ್ತ, ಮೇಲಡರಿ ಬಂದು ತಬ್ಬಿಕೊಂಡಳು. ರಾಜನ ಕೈಯಲಿದ್ದ ಜಪ ಸರವನ್ನು ಕಿತ್ತು ದೂರಕ್ಕೆಸೆದಳು. ಕೊರಳಲ್ಲಿದ್ದ ತುಲಸೀಮಣಿಯ ಹಾರಗಳನ್ನು ಕಿತ್ತೆಸೆದಳು. ಪೂಜಾ ಸಾಮಗ್ರಿಗಳನ್ನೀಡಾಡಿ ಹಾವಳಿ ಮಾಡಿಬಿಟ್ಟಳು. ರಾಜನು ಆ ದುಷ್ಟ ಹೆಂಗಸಿನ ಆ ಬಗೆಯ ಚೇಷ್ಟೆಗಳಿಗಾಗಿ ಅಸಹ್ಯ ಪಟ್ಟನಾದರೂ, ಕೋಪವನ್ನು ತೋರಿಸಿಕೊಳ್ಳದೆ,—'ಮೋಹಿನೀ ನನ್ನ ಕಾರ್ಯಗಳಿಗೆ ವಿಘ್ನವನ್ನುಂಟುಮಾಡಬೇಡ. ಈ ಮೂರು ದಿನಗಳು ಸ್ಥಿರ ಚಿತ್ತತೆಯಿಂದ ತಡೆದುಕೊಂಡಿರು. ತರುವಾಯ ಎಂದಿನಂತೆ ನಿನ್ನೊಂದಿಗಿರುವೆನು' ಎಂದು ಎಷ್ಟೋ ಬಗೆಯಲ್ಲಿ ಹೇಳಿ ನೋಡಿದನು. ಏನೂ ಪ್ರಯೋಜನವಾಗಲಿಲ್ಲ. ಮೋಹಿನಿಯು ಶಾಂತಳಾಗಲಿಲ್ಲ. ತನ್ನ ಮಾರ್ಗಕ್ಕೆ ಬಾರದ ರಾಜನ ತಾಟಸ್ಥ್ಯ ಭಾವವನ್ನು ಕಂಡು ಬೇಸತ್ತು-ಬರುಬರುತ್ತಾ, ಭೀಕರ ಸ್ವಭಾವವನ್ನು ತಳೆದಳು. ತಲೆಯ ಕೂದಲನ್ನು ಬಿಚ್ಚಿ ಹರಹಿಕೊಂಡಳು. ತನ್ನನ್ನು ನಂಬಿಸಿ ಕರೆತಂದು, ಇಂದು ಹತಾಶಳನ್ನಾಗಿ ಮಾಡಿದನೆಂದು ರೋದಿಸಿದಳು. ಮರುಗಿದಳು. ಕಿರಿಚಿಕೊಂಡಳು. ಎದೆಎದೆ ಬಡಿದುಕೊಂಡಳು. ನೆಲದ ಮೇಲೆ ಬಿದ್ದು ಹೊರಳಿದಳು. ರಾಜನು ಆ ಹೆಂಗಸಿನ ಚರ್ಯೆಗಳನ್ನೆಲ್ಲ ಕಂಡು—'ಎಲೆ ದುಷ್ಟ ಸ್ತ್ರೀಯೇ, ಈ ಆರ್ಭಟಗಳಿಂದ ನನ್ನನ್ನು ಬೆದರಿಸಬಹುದೆಂದು ಯೋಚಿಸಬೇಡ. ವ್ರತನಿಷ್ಠನಾದ ರುಕ್ಮಾಂಗದನು ತನ್ನ ಪ್ರಾಣಗಳನ್ನಾದರೂ ತೊರೆಯಬಲ್ಲನು, ರಾಜ್ಯೈಶ್ವರ್ಯಾದಿಗಳನ್ನಾದರೂ ತ್ಯಜಿಸಬಲ್ಲನು, ಧರ್ಮಪತ್ನಿಯನ್ನಾದರೂ ಬಿಡಬಲ್ಲನು, ಹೆಚ್ಚೇನು ಕೇಳು, ಏಕಮಾತ್ರ ಪುತ್ರನನ್ನಾದರೂ ಬಲಿ ಕೊಡಬಲ್ಲನು. ಆದರೆ ತನ್ನ ಸತ್ಯಪಥದಿಂದ ಚಲಿಸಲಾರನು. ಸದ್ಗತಿದಾಯಕವಾದ, ಮುಕ್ತಿಕಾಂತಾಸಂಗ ಸುಖವನ್ನೀಯುವುದಾದ ಈ ಪರಮ ಪವಿತ್ರವ್ರತವನ್ನು ಮಾತ್ರ ಭ್ರಷ್ಟಗೊಳಿಸಲಾರನು! ಏಕೆ ಗೋಳಿಡುವೆ. ಇದರಿಂದ ಏನೂ ಪ್ರಯೋಜನವಾಗಲಾರದು' ಎಂದು ನುಡಿದುಬಿಟ್ಟನು.

ರುಕ್ಮಾಂಗದನ ಆ ಮಾತುಗಳನ್ನು ಕಿವಿಗೊಟ್ಟು ಕೇಳಿಕೊಂಡಿದ್ದ ಆ ಭ್ರಷ್ಟ ಸ್ತ್ರೀಯು, ಒಡನೆ ಆತನನ್ನು ಚುರುಚುರನೆ ನೋಡಿ, ಚೂರಿ ಯಂತೆ ಹದವಾದ ಧ್ವನಿಯಿಂದ—'ಇದು ಸತ್ಯವೋ, ನಿಶ್ಚಯವೋ, ಈ ಮಾತಿಗೆ ತಪ್ಪುವುದಿಲ್ಲವೋ? ಸತ್ಯವಾಗಿ ಈ ಪ್ರಕಾರ ನಡೆಯುವೆನೆಂದು ಪ್ರಮಾಣ ಮಾಡಿ ಕೊಡುವೆಯೋ!' ಎಂದು ಪುನಃ ಯೋಚಿಸಲವಕಾಶವಿಲ್ಲ ದಂತೆ ಕೇಳಿದಳು. ರಾಜನೂ ತಾನಾಡಿದ ಮಾತುಗಳಿಂದ ಆಗುಹೋಗುವ ಪ್ರಮಾದಗಳೇನೆಂಬುದನ್ನು ತಿಳಿಯಲಾರದೆ—'ಎಲೆ ಸ್ತ್ರೀಯೆ ಇದು ನಿಶ್ಚ ಯವು-ಸತ್ಯವು. ಕೇಳು ನನ್ನ ಪತ್ನಿಯನ್ನಾದರೂ ಬಿಡುವೆನು-ಪುತ್ರನನ್ನಾ ದರೂ ಬಲಿ ಕೊಡುವೆನಲ್ಲದೆ, ಈ ಮಹಾ ವ್ರತವನ್ನು ಭಂಗಗೊಳಿಸಿ ನಿನ್ನನ್ನು ಕೂಡಲಾರೆನು' ಎಂದನು. ಅಷ್ಟು ಮಾತುಗಳು ಆತನ ಬಾಯಿಂದ ಹೊರಬಿದ್ದೊಡನೆಯೇ, ನೆಲದಲ್ಲಿ ಬಿದ್ದು ಹೊರಳಿಕೊಂಡಿದ್ದ ಮೋಹಿನಿಯು, ಒಡನೆ ಈದ ಹುಲಿಯಂತೆ ಕೊಡಹಿಕೊಂಡೆದ್ದು ನಿಂತು,—'ರಾಜಾ ರುಕ್ಮಾಂಗದ ನರೇಂದ್ರಾ, ವ್ರತನಿಷ್ಠಾ, ಸತ್ಯಸಂಧಾ ಈಗೊಂದು ಮಾತು! ಒಂದನೆಯದಾಗಿ ನೀನು ಈ ವ್ರತ ಗಿತಾದಿಗಳನ್ನು ಮೂಲೆಗೊತ್ತಿ ನನ್ನೊಂ ದಿಗೆ ಬೆರೆದು ಕಾಮಕೇಳಿಯನ್ನನುಭವಿಸಬೇಕು. ಅಥವ ನೀನೀಗ ನುಡಿ ದಂತೆ ನಿನ್ನ ಆ ಏಕಮಾತ್ರ ಪುತ್ರನನ್ನು ಬಲಿ ಕೊಡಲು ಸಿದ್ಧನಾಗಬೇಕು ಇವೆರಡರಲ್ಲಿ ನಿನಗಾವುದಿಷ್ಟವೋ ಅದನ್ನು ಮಾಡಲೊಪ್ಪಿ ನಿನ್ನ ಸತ್ಯಸಂಧತೆ ಯನ್ನು ಕಾಪಾಡಿಕೊಳ್ಳಬಹುದು' ಎಂದು ನುಡಿದಳು.

ಕೆರಳಿದ ಹೆಣ್ಣು ಹುಲಿಯಂತೆ ಕಣ್ಣುಗಳನ್ನು ಕೆಂಪು ಮಾಡಿಕೊಂಡು, ಅಧಿಕಾರ ವಾಣಿಯಿಂದ ಆಡಿದ ಮೋಹಿನಿಯ ಆ ಮಾತುಗಳು ರಾಜನಿಗೆ ಬಹು ಆಶ್ಚರ್ಯವನ್ನೂ ಒಂದಿಗೇ ಗಾಬರಿಯನ್ನೂ ಉಂಟುಮಾಡಿದುವು. ತಾನು ಲೋಕ ಸಾಮಾನ್ಯವೆಂಬಂತೆ-ತನ್ನ ನಿಶ್ಚಯ ಪ್ರಕೃತಿಯನ್ನು ತಿಳಿಸಲಿ ಕ್ಕೆಂದು ಆಡಿದಮಾತು ಅಂತಹ ದುರಂತ ಪರಿಣಾಮವನ್ನು ತಂದಿಡುವು ದೆಂದು ಆತನು ಭಾವಿಸಿರಲಿಲ್ಲ. ಮುಂದೆ ಮಾಡುವ ಉಪಾಯ ತೋರಲಿಲ್ಲ. ಮಾರ್ಗವೇನೆಂಬುದು ಕಾಣಿಸಲಿಲ್ಲ.—'ನಿನ್ನ ವ್ರತಪಾಲನೆ ಮಾಡಿಕೊಳ್ಳು ವಂತಿದ್ದರೆ ಪುತ್ರನನ್ನು ಬಲಿ ಕೊಡು. ಪುತ್ರ ಮೋಹದಿಂದ ಅವನನ್ನು ಉಳಿಸಿಕೊಳ್ಳಲಪೇಕ್ಷಿಸಿದೆಯಾದರೆ ನನ್ನನ್ನು ಕೂಡು' ಎಂದು ಮೋಹಿನಿಯು

ಮೇಲೆ ಮೇಲೆ ನಿರ್ಬಂಧಪಡಿಸತೊಡಗಿದಳು. ರಾಜನು, ಹತಾಶನಂತಾಗಿ ಸುಮ್ಮನೆ ನಿಂತುಬಿಟ್ಟನು.

ಆ ವೇಳೆಗೆ ಆ ವಾರ್ತೆಯು ಅರಮನೆಯಲ್ಲೆಲ್ಲಾ ಹರಡಿತು. —ಮಾತ್ರವಲ್ಲ, ರಾಜಧಾನಿಯಲ್ಲೆಲ್ಲ ಕಾಳ್ಗಿಚ್ಚಿನಂತೆ ಹಬ್ಬಿಹೋಯಿತು. ತಮ್ಮ ಏಕಮಾತ್ರ ರಾಜಕುವರನು ಆ ರಾಕ್ಷಸಿಗೆ ಬಲಿ ಬೀಳುವನೆಂಬ ಭಯಂಕರ ವಾರ್ತೆಯನ್ನು ಕೇಳಿದ ಪುರಜನರು ಅತಿಶಯ ಮರುಗಿದರು— ಗೋಳಿಟ್ಟರು. ರಾಜಸ್ತ್ರೀಯರ ವ್ಯಸನವನ್ನಂತೂ ಹೇಳತೀರದು. ಅವರೆಲ್ಲರೂ ದುರ್ದೈವಿಯಾದ ಸಂಧ್ಯಾವಳೀ ದೇವಿಯನ್ನು ಮುಂದಿಟ್ಟು ಕೊಂಡು, ರಾಜಸಿದ್ಧ ಮೋಹಿನಿಯ ಅರಮನೆಗೆ ಬಂದರು. ಅಲ್ಲಿಗೆ ಬಂದೊಡನೆಯೇ ಎಲ್ಲರ ದೃಷ್ಟಿಗಳೂ ರಾಜನ ಕಡೆಗೆ ತಿರುಗಿದುವು. ರಾಜನಾದರೋ ಮಂತ್ರ ಮುಗ್ಧವಾದ ಸರ್ಪದಂತೆ ನಿಟ್ಟುಸಿರುಬಿಡುತ್ತಾ ಉಪಾಯತೋರದೆ ಶೂನ್ಯದೃಷ್ಟಿಯಿಂದ ಭೂಮ್ಯಂತರಿಕ್ಷಗಳನ್ನು ನೋಡುತ್ತಾ ನಿಂತುಬಿಟ್ಟಿದ್ದಾನೆ. ಅಷ್ಟರಲ್ಲಿ ಅಲ್ಲಲ್ಲಿ ಆಡಿಕೊಂಡಿದ್ದ ಆರು ವರ್ಷದ ಮಗು ಧರ್ಮಾಂಗದನೂ ತನ್ನ ತಾಯಿಯನ್ನು ಅಂತಃಪುರದಲ್ಲಿ ಕಾಣದೆ ಎಲ್ಲರೂ ಗುಂಪುಕೂಡಿ ಗೋಳಿಟ್ಟುಕೊಂಡಿದ್ದ ಆ ಸ್ಥಳಕ್ಕೇ ಬಂದನು. ಧರ್ಮಾಂಗದನನ್ನು ಕಂಡೊಡನೆಯೇ ಸಂಧ್ಯಾವಳೀ ದೇವಿಯು, ಒಟ್ಟುಗೂಡಿದ್ದ ಪ್ರವಾಹದ ಒಡ್ಡು ಒಡೆದಂತಾಗಲು, ತಡೆಯಲಾರದ ಮಹ ದ್ವ್ಯಸನದಿಂದ ಮುಂಗಾಣದೆ—'ಹಾ ಪುತ್ರಾ' ಎಂದರಚಿ ಅವನನ್ನು ಬಾಚಿ ತಬ್ಬಿಕೊಂಡು ಬಿದ್ದು ಮೂರ್ಛೆಹೋದಳು. ಈ ವಿಚಿತ್ರ ವ್ಯಾಪಾರವು ಆ ಬಾಲಕನಿಗೆ ಅತಿಶಯ ಗಾಬರಿಯನ್ನುಂಟುಮಾಡದಿರಲಿಲ್ಲ. ತಮ್ಮ ತಾಯಿಯು ತನ್ನನ್ನು ಕಂಡೊಡನೆಯೇ ಎತ್ತಿ ಮುದ್ದಿಸಿ ತೊಡೆಯಲ್ಲಿಟ್ಟು ಆದರಿಸುವುದಕ್ಕೆ ಬದಲಾಗಿ ಆ ದಿನ ಹಾಗೇಕೆ ಮಾಡಿದಳೆಂಬುದನ್ನು ತಿಳಿಯ ಲಾರದೆ ಭ್ರಾಂತನಂತಾದನು. ಅಷ್ಟರಲ್ಲಿ ಎಚ್ಚತ್ತ ಆಕೆಯು ತನ್ನ ದುಸ್ಥಿ ತಿಯನ್ನು ಕುರಿತು ಪರಿಪರಿಯಿಂದ ಹಲುಬಿಕೊಳ್ಳತೊಡಗಿದಳು. ಬಾಲಕನಿಗೆ ಸುತ್ತುಮುತ್ತಣವರಿಂದ ತಾಯಿಯ ವ್ಯಸನಕ್ಕೆ ಕಾರಣವೂ ತಿಳಿಯಿತು.

ತನ್ನ ಪತಿಯ ವ್ರತಪಾಲನೆ ಅಥವ ಪುತ್ರನ ಬಲಿದಾನ ಈ ಎರಡು ಕಾಳ್ಗಿಚ್ಚುಗಳ ಮಧ್ಯೆ ಸಿಕ್ಕು ಬೇಯುತ್ತಿದ್ದ ತನ್ನ ತಾಯಿಯನ್ನು ಕುರಿತು

ಧರ್ಮಾಂಗದ ಬಾಲಕನು—'ತಾಯೇ ಶೋಕಿಸದಿರು. ಈ ದೇಹವು ಯಾರದು, ಯಾರಿಂದ ಬಂದುದು? ಈ ತಂದೆಯಿಂದಲೇ ಅಲ್ಲವೆ! ಆತನ ಸತ್ಯವ್ರತಪಾಲನೆಗಾಗಿ ಈ ತನುವು ಉಪಯೋಗವಾಗುವಂತಿದ್ದರೆ ಅದರ ಸಾರ್ಥಕತೆಗಾಗಿ ಸಂತೋಷಿಸಬೇಕಲ್ಲದೆ, ವ್ಯಸನಪಡಲೇಕೆ? ಪಂಚಭೂತಾತ್ಮಕವಾದ ಈ ದೇಹವು ಎಂದಿದ್ದರೂ ನಾಶವಾಗತಕ್ಕುದೇ ಅಲ್ಲವೆ! ಮಾತೆಯೇ ತಂದೆಯು ತನ್ನ ವ್ರತಪಾಲನೆ ಮಾಡಿಕೊಳ್ಳಲು ಸಮ್ಮತಿಸು' ಎಂದು ನುಡಿದನು. ಮತ್ತು ರುಕ್ಮಾಂಗದನ ಕಡೆಗೆ ತಿರುಗಿ—'ತಂದೆಯೇ, ಸಾವಕಾಶಬೇಡ. ಇದೋ ಸಿದ್ಧನಾಗಿರುವೆನು. ನಿನ್ನ ಕೈಕತ್ತಿಯಿಂದ ನನ್ನೀ ಶಿರವನ್ನು ಛೇದಿಸಿ ಬಲಿಕೊಟ್ಟು ನಿನ್ನ ಸತ್ಯ ವಚನವನ್ನೂ ಈ ಮಹಾವ್ರತವನ್ನೂ ಪಾಲಿಸಿಕೋ!' ಎಂದನು. ಬಾಲಭಾಷೆಯಿಂದ ತನ್ನ ಮಗನಾಡುತ್ತಿದ್ದ ಆ ಮಾತುಗಳು ರಾಜನಿಗೆ ಅತಿಶಯ ಸಂತಾಪವನ್ನುಂಟುಮಾಡುತ್ತಿರಲು, ಉಪಾಯ ತೋರದೆ—'ಹಾ ಪುತ್ರಾ, ತಂದೆಯಾದ ನಾನೇ ನಿನಗೆ ಮೃತ್ಯುವಾಗಿ ಪರ್ಯಟ್ಟೆನಲ್ಲಾ-ಅಕಟಾ ಈ ವಿಧಿಯನ್ನು ಮೀರಲೆಂತು?' ಎಂದು ಹತಾಶನಾಗಿ ನಿಂತನು. ಆಗ ಧರ್ಮಾಂಗದನು—'ಜನಕನೇ, ಲೋಕದಲ್ಲಿ ಪತ್ನಿ ಪುತ್ರ ರಾಜ್ಯ ಐಶ್ವರ್ಯ ಯೌವನಾದಿಗಳಲ್ಲೊಂದೂ ಶಾಶ್ವತವಾದುದಲ್ಲ. ಶಾಶ್ವತವಾದುದು ಕೀರ್ತಿಯೊಂದೆ! ಮನುಷ್ಯನು ಇವುಗಳಲ್ಲಾವುದನ್ನಾದರೂ ಅಥವ ಈ ಎಲ್ಲವನ್ನೂ ಆದರೂ ತ್ಯಜಿಸಿ ಕೀರ್ತಿಯನ್ನು ಕಾಪಾಡಿಕೊಳ್ಳತಕ್ಕುದು ಧರ್ಮವು. ಅದರಲ್ಲೂ ಸೂರ್ಯವಂಶಶ್ರೇಷ್ಠನಾದ ನೀನು ಹಾಗೆ ಆಚರಿಸತಕ್ಕುದು ಕರ್ತವ್ಯವೇ ಅಲ್ಲವೆ! ಸಾವಕಾಶ ಮಾಡಲೇಕೆ! ನನ್ನೀ ದೇಹವೂ ಜನ್ಮವೂ ಸಾರ್ಥಕವಾದುವು. ಬೇಗನೆ ಕೆಲಸವನ್ನು ತೀರಿಸು' ಎಂದು ನುಡಿದನು.

ತೀರ್ವ ವಿರಾಗಿಯಂತೆ ಕೇವಲ ದೇಹಾಭಿಮಾನವನ್ನು ತೊರೆದು ನಿರ್ಭಯದಿಂದ ನುಡಿಯುತ್ತಿದ್ದ ಆ ಹಸುಳೆಯ ಭಾಷಿತವು ಅಲ್ಲಿ ನೆರೆದ ಸಮಸ್ತರಿಗೂ ಹೃದಯದ್ರಾವಕವಾಗಿದ್ದಿತು. ಎಲ್ಲರ ಕಣ್ಣುಗಳಿಂದಲೂ ಅಶ್ರುಧಾರೆಗಳು ಸಾರೋದ್ಧಾರವಾಗಿ ಸುರಿಯತೊಡಗಿದುವು. ರಾಜನೂ ಕಣ್ಣೀರಿನಿಂದ ದೃಷ್ಟಿಯು ಮುಚ್ಚಿ ಹೋಗುತ್ತಿರಲು ವಸ್ತ್ರಗಳಿಂದ ಒರೆಸಿಕೊಳ್ಳುತ್ತ, ಬಿಕ್ಕಿಬಿಕ್ಕಿ ಅಳುತ್ತ ಉಪಾಯ ತೋರದೆ ನಿಂತನು. ಅತ್ತ ರಾಣಿಯು ಮೂರ್ಛೆ ಹೋಗಿ ಬಿದ್ದಿರುವಳು. ಆ ಸ್ಥಿತಿಯಲ್ಲಿ ಅಲ್ಲಿ ಎಚ್ಚರಿದ್ದ ವ್ಯಸನ

ಷಡದೆ ನಿಂತಿದ್ದವಳೆಂದರೆ, ಆ ಕಟುಕ ಮನಸ್ಸಿನ ಮೋಹಿನಿಯೊಬ್ಬಳೇ! ಆವಳು ಈ ಪರಿಯನ್ನು ಕಂಡು—'ರಾಜೇಂದ್ರಾ ಸತ್ಯಸಂಧಾ, ಈಗಲೂ ಚಿಂತಿಸಬೇಕಾದುದಿಲ್ಲ. ಮಗನನ್ನು ಬಲಿ ಕೊಡುವುದೆಂದರೇನು ! ವ್ರತ ವೆಂದರೇನು, ಇದರಿಂದ ಮೋಕ್ಷ ಸಿಗುವುದೆಂದರೇನು ! ಇದೆಲ್ಲ ಭ್ರಾಂತಿ ಯಲ್ಲವೆ! ಚಿಂತಿಸುವೆಯೇಕೆ? ಎಲ್ಲರಿಗೂ ಅಭಯಕೊಟ್ಟು ಕಳುಹಿಸು. ಏಳು ಶಯ್ಯಾಗೃಹಕ್ಕೆ ಹೋಗೋಣ!' ಎಂದು ಮೂದಲಿಸತೊಡಗಿದಳು. ತನ್ನ ಜಳ್ಳು ಮನಸ್ಸನ್ನು ಹಂಗಿಸುವಂತಿದ್ದ ಆ ಮಾತುಗಳು ರಾಜನ ಹೃದ ಯವನ್ನು ಹರಿತವಾದ ಚೂರಿಗಳಂತೆ ಕೊರೆಯತೊಡಗಿದುವು. ಒಡನೆ ರಾಜನು ಎಷ್ಟು ಕ್ಷತ್ರವನಂತೆ ಧೈರ್ಯ ತಾದುಕೊಂಡು, ಮನಸ್ಸನ್ನು ಗಟ್ಟಿ ಮಾಡಿಕೊಂಡು ಕೈಯಲ್ಲಿ ಚಂದ್ರಾಯುಧವನ್ನು ಧರಿಸಿ ಮೋಹಿನಿಯನ್ನು ಕುರಿತು—'ಎಲೆ ತೊತ್ತೆ ಏನೆಂದು ಬೊಗಳುವೆ? ರುಕ್ಮಾಂಗದನು ಹಂದೆ ಯಲ್ಲ. ಚಂದ್ರಸೂರ್ಯರಗತಿ ತಪ್ಪಿದರೂ, ಅಗ್ನಿಗೆ ಶೈತ್ಯತೆಯುಂಟಾದರೂ ನಾನು ಮೋಹಪಾಶ ಬದ್ಧನಾಗಿ ಈ ಮಹಾವ್ರತವನ್ನು ತ್ಯಜಿಸತಕ್ಕವನಲ್ಲ.' ಎಂದು ನುಡಿದು-ಮಗನನ್ನು ಕುರಿತು—'ಪುತ್ರಾ ಧರ್ಮಾಂಗದಾ ಸಿದ್ಧ ನಾಗು. ನಿನ್ನ ಪಿತನಾದ ರುಕ್ಮಾಂಗದನು ಸತ್ಯವಾಕ್ಪಾಲನೆಗಾಗಿ ಈ ದಿನ ನಿನ್ನೀ ತನುವನ್ನು ವಧಿಸಲು ಸಿದ್ಧನಿರುವನು' ಎಂದು ನುಡಿದು ಕತ್ತಿಯನ್ನು ಝಳಪಿಸಿದನು. ಅದರ ಹೊಳಪು ಆ ಸಭೆಯಲ್ಲಿದ್ದ ಎಲ್ಲರ ಕಣ್ಣುಗಳಿಗೂ ಕತ್ತಲೆಯನ್ನುಂಟುಮಾಡಿತು. ಆ ಭಯಂಕರ ನೋಟವನ್ನು ನೋಡಲಾ ರದೆ ಎಲ್ಲರೂ ಕಣ್ಣು ಮುಚ್ಚಿದರು. ಧರ್ಮಾಂಗದನು ವಿನೀತನಾಗಿ ತಲೆ ಬೊಗ್ಗಿ, ಮನಸ್ಸಿನಲ್ಲಿ ಹರಿಧ್ಯಾನ ಮಾಡುತ್ತಾ ಕುಳಿತನು. ರುಕ್ಮಾಂಗದನು ಸ್ಥಿರ ಮನಸ್ಕನಾಗಿ ದೃಢ ಹಸ್ತದಿಂದ, ಶ್ರೀ ಹರಿ ಪ್ರೀತಿಯಾಗಲೆಂದು ನುಡಿದು, ಕತ್ತಿಯನ್ನೆತ್ತಿ ಕುವರನ ಕತ್ತಿನಮೇಲೆ ಪ್ರಯೋಗಿಸಿದನು. ಅಲ್ಲಿದ್ದ ಸ್ತ್ರೀಯರೆಲ್ಲರೂ ಒಂದೇಸಾರಿಗೆ 'ಹೊ' ಎಂದು ಅರಚಿ ಗೋಳಿ ಟ್ಟರು. ಪುನಃ ತಾವು ಕಣ್ದೆರೆದು ನೋಡುವುದರೊಳಗೆ ತಮ್ಮಾ ರಾಜ ಪುತ್ರನ ರುಂಡವು ಮುಂಡದಿಂದ ಪ್ರತ್ಯೇಕವಾಗಿ ರಕ್ತದ ಕುಳಿಯಲ್ಲಿ ಉರುಳುತ್ತಿರಬಹುದೆಂದು ಭಾವಿಸಿ ಕಣ್ಣು ಬಿಡಲು ಅರಜುತ್ತಿರಲು, ಇತ್ತ ರಾಜನು ತಾನು ಸರ್ವಶಕ್ತಿಯಿಂದಲೂ ಗುರಿನೋಡಿ ಪ್ರಯೋಗಿಸಿದ್ದರೂ

ಕಠಿಣಶಿಲೆಯನ್ನಾದರೂ ಭೇದಿಸಿಬಿಡುವಂತಹ ತನ್ನ ಕರಕೃಪಾಣವು ಮೃದುವಾದ ಬಾಲಕನ ಕತ್ತನ್ನು ಸಹ ಕತ್ತರಿಸದಿದ್ದ ಪರಿಯನ್ನು ಕಂಡು ಪರಮಾಶ್ಚರ್ಯಪಟ್ಟನು. ಆ ದೃಶ್ಯವನ್ನು ಎವೆಯಿಕ್ಕದೆ ನೋಡಿಕೊಂಡಿದ್ದ ಮೋಹಿನಿಗಾದರೂ ಅದು ಆಶ್ಚರ್ಯವೆನಿಸದಿರಲಿಲ್ಲ. ರಾಜನು ದೃಢವಾಗಿ ನಿಂತುಕೊಂಡು ಮತ್ತೊಂದುಸಾರಿ ಪ್ರಯೋಗಿಸಿದನು. ಆಗಲೂ ವ್ಯರ್ಥವಾಯಿತು. ರಾಜನು ಕಾರಣತಿಳಿಯದೆ ಭ್ರಾಂತನಂತಾದನು. ಎಲ್ಲರೂ ಕೌತುಕಗೊಂಡು ನೋಡುತ್ತಿದ್ದರು ಇತ್ತ ಮೋಹಿನಿಯಾದರೋ—'ರಾಜಾ ಈ ಇಂದ್ರಜಾಲ ವಿದ್ಯೆಗಳಿಂದ ಈ ಮೋಹಿನಿಯು ಮೋಸ ಹೋಗತಕ್ಕವಳಲ್ಲ. ಹೃದಯದಲ್ಲಿ ಪುತ್ರ ಮೋಹವನ್ನಿಟ್ಟುಕೊಂಡು, ಹೊರಗೆ ತೋರುವ ಈ ವೇಷವೇಕೆ! ಈಗ ಪುತ್ರವಧೆಯನ್ನು ಮಾಡಿಯೇ ತೀರಬೇಕೆಂಬ ಅಂತಹ ನಿರ್ಬಂಧವಾದರೂ ಏನು! ಏಕೆ ಆ ಮಾರ್ಗವನ್ನು ಬಿಟ್ಟು ನನ್ನನ್ನು ಕೂಡಿ ಸುಖಿಸಲಾಗದು? ಪ್ರತ್ಯಕ್ಷ ಸುಖಸಾಧನವು ಹಸ್ತಗತವಾಗಿರಲಿಕ್ಕಾಗಿ-ನಿಶ್ಚಿತವಲ್ಲದ ಪರೋಕ್ಷ ಸುಖವನ್ನಪೇಕ್ಷಿಸಿ ಇಷ್ಟು ಪ್ರಯಾಸಪಡಬೇಕೆ!' ಎನ್ನುತ್ತಿದ್ದಳು. ರಾಜನು ಅದನ್ನು ಕೇಳಿ—'ಮೋಹಿನೀ ನಾನು ನಿಶ್ಚಯವಾಗಿಯೂ ವಿನೋದ ಮಾಡುತ್ತಿಲ್ಲ. ಎಂದೂ ವ್ಯರ್ಥವಾಗದ ನನ್ನ ಚಂದ್ರಾಯುಧದ ಗತಿಯು ಇಂದೇಕೆ ಹೀಗಾಗುತ್ತಿರುವುದೋ ತಿಳಿಯಲಾರೆನು! ಆದರೇನು ಚಿಂತೆಯಿಲ್ಲ. ಈ ಸಾರಿ ನೋಡು.' ಎಂದು ನುಡಿದು, ---'ಶ್ರೀ ಹರೇ ನನ್ನನ್ನು ವಚನ ಭ್ರಷ್ಟನನ್ನಾಗಿಸದೆ ಕಾಪಾಡು' ಎಂದು ತನ್ನ ಸರ್ವಶಕ್ತಿಯನ್ನೂ ಉಪಯೋಗಿಸಿ, ಆ ಶಿಶುವಿನ ಕತ್ತಿನಮೇಲೆ ಪ್ರಯೋಗಿಸಿದನು. ಆಶ್ಚರ್ಯವಾಶ್ಚರ್ಯವು! ಆಗ ತೀಕ್ಷ್ಣವಾದ ಉಕ್ಕಿನಿಂದ ಮಾಡಿದ ಆ ಕತ್ತಿಯೇ ಅದೃಶ್ಯವಾಗಿ ಅದರ ಸ್ಥಾನದಲ್ಲಿ ದಿವ್ಯ ಮಲ್ಲಿಕಾ ಪುಷ್ಪದ ಹಾರವೊಂದು ರಾಜಕುಮಾರನ ಕತ್ತಿನಲ್ಲಿ ಶೋಭಿಸಿತು. ಧರ್ಮಾಂಗದನು ಎಂದಿನಂತೆ ಕ್ಷೇಮವಾಗಿಯೇ ಇದ್ದನು.

ಮೂರನೆಯ ಆ ಬಾರಿಯ ಖಡ್ಗಹತಿಯೊಂದಿಗೆ ರಾಜಪುತ್ರನು ನಿಶ್ಚಯವಾಗಿ ಸಾಯುವನೆಂದು ತಿಳಿದು ಆ ದೃಶ್ಯವನ್ನು ನೋಡಲಾರದೆ ಕಣ್ಣು ಮುಚ್ಚಿದ್ದವರೆಲ್ಲರೂ ಕಣ್ತೆರೆದು ನೋಡುವವೇಳೆಗೆ ಆ ರಾಜಪ್ರಾಸಾದವೆಲ್ಲವೂ ಮಾನುಷ ಲೋಕಕ್ಕೇ ಅಪೂರ್ವವೆನಿಸುವ ಒಂದು ದಿವ್ಯ ಕಾಂತಿ

ಯಿಂದ ಪ್ರಕಾಶಿಸಿತ್ತು. ಅದನ್ನು ಕಂಡು ಎಲ್ಲರೂ ಪರಮಾಶ್ಚರ್ಯಮಗ್ನರಾಗಿರುತ್ತಿರಲು, ರುಕ್ಮಾಂಗದ ಸಂಧ್ಯಾವಳೀ ಧರ್ಮಾಂಗದರು ಮಾತ್ರ ಶ್ರೀದೇವಿ ಭೂದೇವಿಯರಿಂದ ಸಹಿತನಾಗಿ ಗರುಡಾರೂಢನಾಗಿ ಬಂದ ನೀಲಮೇಘಶ್ಯಾಮ ಸುಂದರನಾದ ಶ್ರೀ ಮಹಾವಿಷ್ಣುವಿನ ಮೋಹನ ಮೂರ್ತಿಯನ್ನು ಪ್ರತ್ಯಕ್ಷ ಕಂಡು ಸಾಷ್ಟಾಂಗದಂಡಪ್ರಣಾಮಮಾಡಿ ಪರಿಪರಿಯಿಂದ ಸ್ತೋತ್ರ ಮಾಡುತ್ತಿದ್ದರು. ವಿಷ್ಣುಮೂರ್ತಿಯು—'ರುಕ್ಮಾಂಗದಾ, ನಿನ್ನ ಸತ್ಯಸಂಧತೆಗೂ ವ್ರತನಿಷ್ಠೆಗೂ ನಿಸ್ಪೃಹತೆಗೂ ಮೆಚ್ಚಿದೆನು. ವಂಶೋದ್ಧಾರಕನಾದ ಏಕಮಾತ್ರ ಪುತ್ರನನ್ನಾದರೂ ಬಲಿಯಿತ್ತು, ಈ 'ಹರಿದಿನ'ದ ವ್ರತವನ್ನು ಸಾಧಿಸಲು ಹಿಂಜರಿಯದ ನಿನ್ನಂತೆ ಯಾರು ಮನೋವಾಕ್ಕಾಯಗಳಿಂದ ವ್ರತನಿಷ್ಠರಾಗಿರುವರೋ ಅವರು ನನ್ನ ಕೃಪೆಗೆ ಪಾತ್ರರಾಗಿ ಅಂತ್ಯದಲ್ಲಿ ವಿಷ್ಣುಸಾಯುಜ್ಯವನ್ನು ಹೊಂದುವರು. ಇದರಲ್ಲಿ ಸಂಶಯವಿಲ್ಲ. ಈ ಮೋಹಿನಿಯೂ ನಿನ್ನ ಪರೀಕ್ಷೆಗಾಗಿಯೇ ಬ್ರಹ್ಮದೇವನಿಂದ ಸೃಷ್ಟಳಾಗಿ ಕಳುಹಿಸಲ್ಪಟ್ಟವಳಾದುದರಿಂದ—ಈ ದೇವತಾಕಾರ್ಯವನ್ನು ಸಾಂಗವಾಗಿ ನೆರವೇರಿಸಿರುವ ಅವಳನ್ನಾದರೂ ದ್ವೇಷಿಸಬೇಡಿರಿ. ಮಹಾವ್ರತನಿಷ್ಠರಾದ ನೀನೂ ಸಂಧ್ಯಾವಳಿಯೂ ವೈಕುಂಠವನ್ನು ಕುರಿತು ಪ್ರಯಾಣಮಾಡಿರಿ. ನಿಮ್ಮ ಪುತ್ರನೂ ಧರ್ಮಾತ್ಮನೆನಿಸಿ ಜೀವಿಸಿ ಅಗಾಧ ಯಶಸ್ಸನ್ನು ಸಂಪಾದಿಸಿ, ದೇಹಾವಸಾನದಲ್ಲಿ ವೈಕುಂಠ ಲೋಕವನ್ನೈದುವನು' ಎಂದು ನುಡಿದನು. ಆಗ ಮೋಹಿನಿಯು—'ದೇವಾ ನನ್ನ ಗತಿಯೇನು' ಎನ್ನಲು,—'ಎಲೌ ಯಾರು ಏಕಾದಶಿಯ ಉಪವಾಸ ಜಾಗರಗಳನ್ನು ಮಾಡಿ ದ್ವಾದಶಿಯ ಪಾರಣೆಯನಂತರ ಹಗಲು ನಿದ್ರಿಸುವರೋ ಅವರ ಏಕಾದಶೀ ವ್ರತಪುಣ್ಯವು ನಿನಗೆ ಸೇರುವುದು. ಇಂತು ಅದೃಶ್ಯಳಾಗಿ ಭೂಮಿಯಲ್ಲಿ ವಾಸಿಸಿರು' ಎಂದು ನುಡಿದು, ಧರ್ಮಾಂಗದನಿಗೆ ಪಟ್ಟಾಭಿಷೇಕಮಾಡಿ ಗರುಡಗಮನನಾಗಿ ಅಂತರ್ಹಿತನಾದನು. ರುಕ್ಮಾಂಗದ ಸಂಧ್ಯಾವಳಿಯರು ವಿಮಾನದಲ್ಲಿ ಕುಳಿತು ವೈಕುಂಠವನ್ನು ಕುರಿತು ನಡೆದರು. ಧರ್ಮಾಂಗದನು ಧರ್ಮದಿಂದ ರಾಜ್ಯವಾಳತೊಡಗಿದನು.



# ಉ ಪ ಸಂ ಹಾ ರ

ರುಕ್ಮಾಂಗದಮಹಾರಾಜನು ಹೀಗೆ ಅಗಾಧ ಧರ್ಮಪರೀಕ್ಷೆಗೆ ಒಳಪಟ್ಟರೂ ತನ್ನ ಸತ್ಯಸಂಧತೆಯನ್ನು ಕಾಯ್ದುಕೊಂಡು ಶ್ರೀ ವಿಷ್ಣುಮೂರ್ತಿಯ ಕೃಪೆಗೆ ಪಾತ್ರನಾಗಲು ಆತನಿಗೆ ಯಾವ ವ್ರತನಿಷ್ಠೆಯು ಸಹಾಯಕವಾಯಿತೋ ಆ ವ್ರತನಿಷ್ಠೆಯು, ಸದ್ಯಃ ವಿಕಲಿತಾಂಗರೂ ವಿಕಲಿತೇಂದ್ರಿಯರೂ ಆಗಿರುವ ಭಾರತೀಯರ ಕಣ್ಣೆದುರಿನಲ್ಲಿದ್ದು ಅವರಲ್ಲಿ ದೃಢನಿಶ್ಚಯ ತ್ರಿಕರಣಶುದ್ಧಿ, ಸತ್ಯ ಧರ್ಮಾನುಷ್ಠಾನಗಳಲ್ಲಿ ನಂಬಿಕೆ, ಧೈರ್ಯಸಾಹಸಾದಿಗಳು, ನಿರ್ಭೀತಿ ಮುಂತಾದ ಸುಗುಣಗಳನ್ನು ಉಂಟುಮಾಡಲಿ.

ಭಾರತಸ್ತ್ರೀಯರು ಸಂಧ್ಯಾವಳೀದೇವಿಯಂತೆ ಪತಿಭಕ್ತಿ ಪಾರಾಯಣರೂ-ಪತಿಗಳು ಒಂದು ವೇಳೆ ದುರ್ದೈವದಿಂದ ದುಷ್ಪಥಗಾಮಿಗಳಾಗಿರುವ ಸಂದರ್ಭದಲ್ಲೂ ಆರ್ಷೇಯ ಆರ್ಯಧರ್ಮಗಳನ್ನು ಬೋಧಿಸಿ ಸನ್ಮಾರ್ಗದಲ್ಲಿ ಪ್ರೇರಿಸತಕ್ಕವರೂ ಆಗಿರಲಿ.

ಭಾರತಬಾಲಕರು, ತಮ್ಮ ತಾಯಿತಂದೆಗಳು ಅನುಸರಿಸುವ ಸತ್ಯಪಥ ಪಲಾನೆಗಾಗಿ ತಮ್ಮ ದೇಹವನ್ನಾದರೂ ತೆತ್ತು ಸಹಕರಿಸುವಂತಹ ಮನೋದಾರ್ಢ್ಯ, ಸಾಹಸ, ನಿರ್ಭಯತ್ವಗಳನ್ನು ಗಳಿಸಲಿ.

ಸರ್ವೇಶನು ಭಾರತೀಯರಲ್ಲಿ ದುರ್ದೈವದಿಂದ ಬಂದು ನೆಲೆಸಿರುವ ಆಲಸ್ಯತೆ ಅಶಕ್ತತೆ ಅಯೋಗ್ಯತೆಗಳನ್ನು ನೀಗಿಸಿ, ಅವರೂ ಮನುಷ್ಯರಾಗಿ ಭಾರತೀಯೋದ್ಧಾರಕ್ಕಾಗಿ ಶ್ರಮಿಸಲು ಆವಶ್ಯಕವಾದ ಶಕ್ತಿ ಸಾಮರ್ಥ್ಯಗಳನ್ನು ಅನುಗ್ರಹಿಸಿ ರಕ್ಷಿಸಲಿ.

ತಥಾಸ್ತು.



—॰ ಶ್ರೀರಾಮಸಹಾಯಂ ॰—

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸ ಪುಸ್ತಕಾವಳಿ)

**ಮುನ್ನುಡಿ:—**

ವೀರಭೂಮಿಯೆನಿಸಿಕೊಂಡ ರಾಜಪುತಾನ ಅಥವ ರಾಜಪುತ್ರಸ್ಥಾನಕ್ಕೆ ಸಳಿತವಾದ ಸಂಸ್ಥಾನಗಳಲ್ಲೆಲ್ಲ 'ಮೇವಾರ್' ಅಥವ ಮೇವಾಡವೆಂಬುದೇ ಅತ್ಯಂತ ಪ್ರಸಿದ್ಧವಾದುದು. ಇದು ಅಲ್ಲಿಯ ಇತರ ಸಂಸ್ಥಾನಗಳಿಗಿಂತ ದೊಡ್ಡದು; ಮಾತ್ರವಲ್ಲ! ಬಹು ಯಶೋಪೂರ್ಣವಾದುದು. ಪ್ರಾರಂಭ ದಿಂದಲೂ ಇದನ್ನು ಪಾಲಿಸುತ್ತಾ ಬಂದ ರಾಜವರೇಣ್ಯರು ಅದ್ವಿತೀಯ ಶೌರ್ಯ ಧೈರ್ಯ ಸಂಪನ್ನರು. ಇವರು, ತಾವು ಸೂರ್ಯವಂಶಜರೆಂದು ತಮ್ಮ ಕುಲದ ಪ್ರತಿಷ್ಠೆಯನ್ನು ಹೇಳಿಕೊಳ್ಳುವರು; ಮತ್ತು ಅದರ ಪಾವಿತ್ರ್ಯತೆಯನ್ನು, ತಮ್ಮ ಪಂಚಪ್ರಾಣಗಳನ್ನಾದರೂ ತೆತ್ತು ಕಾಪಾಡುವ ವಿಷಯದಲ್ಲಿ ಸರ್ವದಾ ಸಿದ್ಧರಿರುವರು.

ಮೇವಾರ್ ಸಂಸ್ಥಾನಕ್ಕೆ ಬಹು ಕಾಲಗಳಿಂದಲೂ ಚಿತ್ತೂರು ನಗರವು ರಾಜಧಾನಿ. ಚಿತ್ತೂರು ದುರ್ಗವು ಚರಿತ್ರಪ್ರಸಿದ್ಧವಾದುದು, ಬಹು ದೃಢವಾದುದು, ಅತಿ ದುರ್ಗಮವಾದುದು. ರಜಪೂತಕುಲಕ್ಕೆ ಚಿರಶತ್ರುಗಳಾದ ಮಹಮ್ಮದೀಯ ಪ್ರಭುಗಳಲ್ಲಿ ಪ್ರತಿಯೊಬ್ಬನ ಕಣ್ಣೂ ಈ ಚಿತ್ತೂರು ಕೋಟೆಯಮೇಲೆಯೇ! ಇದನ್ನು ಸ್ವಾಧೀನಪಡಿಸಿಕೊಳ್ಳಬೇಕೆಂಬುದೊಂದು ಡಿಲ್ಲಿಯಲ್ಲಿ ರಾಜ್ಯವಾಳಿದ ಯವನ ಪ್ರಭುಗಳ ಚಿರಾಕಾಂಕ್ಷೆ! ಈ ಸಂಬಂಧ ದಿಂದ ಚಿತ್ತೂರು ಅನೇಕ ವೇಳೆ ಯುದ್ಧಕ್ಷೇತ್ರವಾಗಿ ಪರಿಣಮಿಸಿತು. ಆ ಯುದ್ಧಗಳಲ್ಲಿ ತನುವನ್ನೊಪ್ಪಿಸಿದ ವೀರರ ಸಂಖ್ಯೆಗೆ ಎಣಿಕೆಯಿಲ್ಲ, ಆದಕ್ಕಾಗಿ

ಖರ್ಚಾದ ದ್ರವ್ಯಕ್ಕೆ ಪರಿಮಿತಿಯಿಲ್ಲ, ರಕ್ತವು ಅನೇಕವೇಳೆ ಹೊಳೆಯಾಗಿ ಹರಿಯಿತು. ಯುದ್ಧದಲ್ಲಿ ಸುರಿದ ರಕ್ತದಿಂದ ಕೋಟೆಯ ಹೊರವಳಯದ ಭೂಮಿಯೆಲ್ಲ ವಿವರ್ಣವಾಗಿ ಮಾರ್ಪಟ್ಟಿತು.

ಚಿತ್ತೂರು ಸಮೀಪದಲ್ಲಿ ನಡೆದ ಅನೇಕಾನೇಕ ಯುದ್ಧಗಳಿಗೆ ಮಹಮ್ಮದೀಯ ಪ್ರಭುಗಳಿಗಿದ್ದ ಕೇವಲ ಮಣ್ಣಾಸೆ ಮಾತ್ರವಲ್ಲ, ಹೆಣ್ಣಿನಾಸೆಯೂ ಕಾರಣವಾಗಿದ್ದಿತು. ಪ್ರಕೃತ ಚರಿತ್ರೆಯು ರಾಣಾ ಭೀಮಸಿಹ್ಮ ಪತ್ನಿ **ಪದ್ಮಿನಿ**ಯ ದೆಸೆಯಿಂದ ಚಿತ್ತೂರಿನಲ್ಲಿ ನಡೆದ ಭಯಂಕರ ಪ್ರಳಯವನ್ನು ವರ್ಣಿಸಲುಳ್ಳುದು. ಪರಮದಾರುಣವಾದ ಈ ಯುದ್ಧದಿಂದ ನೆಲಕ್ಕೆ ಬಿದ್ದ ಚಿತ್ತೂರು ಪುನಃ ತಲೆಯೆತ್ತಿಕೊಳ್ಳಲು ಬಹುಕಾಲ ಬೇಕಾಯಿತು. ಆದರೇನು, ತಮ್ಮ ಸರ್ವಸ್ವವನ್ನೂ ಕೊನೆಗೆ ಪ್ರಾಣಗಳನ್ನೂ ತೊರೆದು ತಮ್ಮ ಸತೀತ್ವವನ್ನು ರಕ್ಷಿಸಿಕೊಂಡ ಅಲ್ಲಿಯ ಕ್ಷತ್ರಿಯ ಸ್ತ್ರೀಯರೂ, ಅಂತೆಯೇ ತಮ್ಮ ದೇಶಮಾತೆಯ ಮಾನರಕ್ಷಣೆಗಾಗಿ ಪ್ರಾಣಗಳನ್ನು ತೃಣಸಮಾನವಾಗಿ ಎಣಿಸಿ ತುರುಷ್ಕರೊಂದಿಗೆ ಹೋರಾಡಿದ ರಜಪೂತ ಪುರುಷಪುಂಗವರೂ ಅಜರಾಮರವಾದ ಕೀರ್ತಿಯನ್ನು ಗಳಿಸಿಕೊಂಡರು. ಅವರ ಆ ಪವಿತ್ರ ಚರಿತ್ರೆಯು ಯಾವ ದೇಶಕ್ಕಾದರೂ ಭೂಷಣಪ್ರದವಾದುದು. ಸುವರ್ಣಾಕ್ಷರಗಳಿಂದ ಬರೆದಿಡಲ್ಪಡಲು ಅರ್ಹವಾದುದು.

ರಾಜಪುತಾನದಲ್ಲಿನ ಯಾವ ಸಂಸ್ಥಾನದ ಚರಿತ್ರೆಯನ್ನು ನೋಡಿದರೂ ಅದು ಅಲ್ಲಿಯ ವೀರಪುರುಷರ-ಪತಿವ್ರತೆಯರಾದ ಅವರ ಸ್ತ್ರೀಯರ ಅದ್ಭುತ ಕಥೆಗಳಿಂದ ನಿಬಿಡವಾಗಿರುವುದು. ರಜಪೂತರ ಸ್ವಾಮಿಭಕ್ತಿಯೋ ಎಣೆಯಿಲ್ಲದುದು. ತಮ್ಮ ಪ್ರಭುಗಳ ಕಾರ್ಯಕ್ಕಾಗಿ ಐಹಿಕವಾದ ಸರ್ವಸ್ವವನ್ನೂ ಕೊನೆಗೆ ಪ್ರಾಣಗಳನ್ನೂ ಅರ್ಪಿಸಬೇಕಾದ ಸಂದರ್ಭ ಒದಗಿದರೂ ಅವರಲ್ಲಿ ಯಾವನೂ ಹಿಂದೆಗೆದುದಿಲ್ಲ. ತನ್ನ ಸ್ವಾಮಿಯ ಕಾರ್ಯಕ್ಕೆಂದರೆ ಅಗ್ನಿಯಲ್ಲಿ ಧುಮುಕಲೂ, ವಿಷಪ್ರಾಶನ ಮಾಡಲೂ, ಭಯಂಕರವಾದ ಶತ್ರುಸೇನಾಮಧ್ಯಕ್ಕೆ ಏಕಾಂಗಿಯಾಗಿ ನುಗ್ಗಲೂ ಯಾವನೂ ಹಿಂಜರಿದುದಿಲ್ಲ. ಶೌರ್ಯವೆಂದರೆ ಅವರದೇ ! ಧೈರ್ಯವೆಂದರೆ ಅವರದೇ ! ವೀರ್ಯವೆಂದರೆ ಅವರದೇ !

ಭಾರತ ದೇಶವು ಇಂದು ಅಂತಹ ನರಶಾರ್ದೂಲರ ಆದರ್ಶಗಳನ್ನು ಮರೆತಿದೆ. ಅವರಲ್ಲಿದ್ದ ಶೌರ್ಯ ಧೈರ್ಯ ವೀರ್ಯಗಳು ಈಗಿನ ಹೇಡಿ ಭಾರತೀಯರಿಗೆ ಕವಿಕಲ್ಪನೆಯ ಕಥೆಗಳೆಂದು ತೋರಸಾಗಿವೆ. ಮಾನ ರಕ್ಷಣೆಗಾಗಿ ಪ್ರಾಣವನ್ನು ಬಿಡುತ್ತಿದ್ದ ಆ ನರೋತ್ತಮರ ವಂಶಜರು ಇಂದು ಪ್ರಾಣಲೋಭದಿಂದ ಮಾನವನ್ನು ಮೂರು ಚಿಕ್ಕಾಸುಗಳಿಗೆ ಮಾರಿ ಕೊಳ್ಳಲು ಶಂಕಿಸದಿರುವಂತಹ ದುಸ್ಥಿತಿಯು ಒದಗಿದೆ. ಸ್ವದೇಶದ-ಸ್ವಸ್ತ್ರೀಯರ-ಸ್ವಧರ್ಮದ ಅಭಿಮಾನವನ್ನು ಕಾಪಾಡುವ ವಿಷಯದಲ್ಲಿ ಸರ್ವಸ್ವವನ್ನೂ ನೀಗಿಕೊಳ್ಳಲಿಕ್ಕೂ ಸಿದ್ಧರಿದ್ದ ಆ ಭಾರತವೀರರ ಸಂತಾನರು, ಇಂದು ದಾಸ್ಯದಿಂದ ದೊರಕುವ ಹಿಡಿಗೂಳಿನ ಭಿಕ್ಷೆಗಾಗಿ, ಸ್ವದೇಶವನ್ನೂ ಸ್ವಧರ್ಮವನ್ನೂ-ಹೆಚ್ಚೇನು ಸ್ವಸ್ತ್ರೀಯರನ್ನೂ, ಪರಕೀಯರಿಗೆ ಸೂರೆಗೊಡಲು ಹಿಂದೆ ಮುಂದೆ ನೋಡದಂತಹ ಹೇಡಿತನ ಕ್ಷುದ್ರತನ-ನಪುಂಸಕತ್ವವು ಪ್ರಾಪ್ತಿಸಿದೆ! ಛೀ ಸ್ವಾರ್ಥಸಾಧನೆಗಾಗಿ ಅಧಃಪಾತಾಳಕ್ಕಿಳಿದ ಅಂತಹ ಪಾಮರತ್ವವು ಧಿಕ್ಕಾರಯೋಗ್ಯವಾಗಿರಲಿ !

ಪ್ರಾಚೀನ ಭಾರತದ ಐಶ್ವರ್ಯವೆನಿಸಿದ್ದ ಆ ಸ್ವಾಭಿಮಾನ ರಕ್ಷಣೆಯು ಪ್ರತಿಯೊಬ್ಬ ಮಾನವನ ಜನ್ಮಸಿದ್ಧ ಅಧಿಕಾರವಿದೆ. ಅದರ ಪ್ರಾಪ್ತಿಗಾಗಿ ಅವನಿಗೆ ಸ್ವಸ್ವರೂಪಜ್ಞಾನವಾಗತಕ್ಕ ಆವಶ್ಯಕವಿದೆ. ಯಾವುದೊಂದು ಜನಾಂಗಕ್ಕಾಗಲಿ ಯಾವನೊಬ್ಬ ವ್ಯಕ್ತಿಗಾಗಲಿ ಈ ಸ್ವಸ್ವರೂಪಜ್ಞಾನವು ಪರಾನುಕರಣದಿಂದ ಎಂದಿಗೂ ಪ್ರಾಪ್ತಿಸದು. ತಮ್ಮ ಜನಾಂಗದ ಪೂರ್ವಿಕ ಪುರುಷಪುಂಗವರ-ಸ್ತ್ರೀಶಿರೋಮಣಿಯರ ಪದಚಿಹ್ನೆಯೇ ಅವರಿಗೆ ಮಾರ್ಗದರ್ಶಕವಾಗಿರಬೇಕು. ಅವರ ನಡೆನುಡಿಗಳೇ ಸ್ಫೂರ್ತಿದಾಯಕ ಮಂತ್ರಗಳಾಗಿರಬೇಕು. ಅವರ ಚಿತ್ರ-ಚರಿತ್ರೆಗಳೇ ಆರಾಧ್ಯ ವಿಗ್ರಹಗಳಾಗಿರಬೇಕು. ಇಂತಹ ಶೂರೋಪಾಸನೆಯಿಂದಲೇ ಅವರ ಹುಲುಹೃದಯಗಳು ವಜ್ರಹೃದಯಗಳಾಗಿ ಮಾರ್ಪಡಲು ಸಾಧ್ಯವಿರುವುದು. ಅಂತಹ ವಜ್ರಹೃದಯಗಳು ಮಾತ್ರವೇ ಅಪಾಯಕೋಟಿಗಳನ್ನು ಎದುರಿಸಲು ಯೋಗ್ಯವಾದ ಗುರಾಣಿಗಳಾಗಿ ಕಾಪಾಡಲು ಶಕ್ತವಿರುವುವು.

ತರುಣ ಭಾರತವನ್ನು-ಮುಖ್ಯವಾಗಿ ತರುಣ ಕರ್ಣಾಟಕವನ್ನು ಈ ದೃಷ್ಟಿಯಿಂದ ಸಿದ್ಧಗೊಳಿಸುವ ಮಹೋದ್ದೇಶದಿಂದಲೇ ಗ್ರಂಥಮಾಲೆಯು

ಈ ಮಹಾಪುರುಷರ ಜೀವಿತಚರಿತ್ರೆಗಳನ್ನು ಒದಗಿಸುವ ದೀರ್ಘೋದ್ಯಮದಲ್ಲಿ ಪದಾರ್ಪಣಮಾಡಿ ಹನ್ನೆರಡು ಸಂವತ್ಸರಗಳಾದುವು. ಕರ್ಣಾಟಕ ಮಹಾಜನರು, ಗ್ರಂಥಮಾಲೆಯ ಈ ನಿಷ್ಠಯೋದ್ದೇಶವನ್ನೂ-ರಾಷ್ಟ್ರಜೀವಿತದಲ್ಲಿ ಇದರ ಆವಶ್ಯಕತೆಯನ್ನೂ ಸಾವಧಾನದಿಂದ ಗ್ರಹಿಸಿ, ಸ್ವಹಸ್ತ ಪರಹಸ್ತಗಳಿಂದ ಇದರ ಬೆಳೆವಣಿಗೆ-ಸ್ಥಿರಜೀವಿತಗಳಿಗೆ ಸಹಕರಿಸಬೇಕೆಂದು ವಿನೀತನಾಗಿ ಪ್ರಾರ್ಥಿಸುತ್ತೇನೆ.

ಬೆಂಗಳೂರು ನಗರ.
ತಾ|| ೨೯—೨—೧೯೨೬

ಇತಿ ಸುಜನ ವಿಧೇಯ,
ಯಂ. ರಾಮರಾವ್.



ಸುಬೋಧ ಮುದ್ರಣಾಲಯ, ಬೆಂಗಳೂರು ನಗರ—.೩,೦೦೦ ೧೯೨೮.

ಶ್ರೀರಾಮಸಹಾಯಂ

ಚಿತ್ತೂರು ಮಹಾರಾಣಿ

# ಪದ್ಮಿನಿ

## ಅಧ್ಯಾಯ ೧ "ಚಿತ್ತೂರು-ಭೀಮಸಿಂಹ"

ನಮ್ಮ ಮಾತೃಭೂಮಿಯಾದ ಈ ಭಾರತದೇಶದ ವೀರ ಮಾತೃತ್ವ ವನ್ನು ಸಾರ್ಥಕಗೊಳಿಸಲಿಕ್ಕಾಗಿ ರಕ್ತಸ್ನಾನಮಾಡಿದ ರಣಕ್ಷೇತ್ರಗಳಲ್ಲಿ ಚಿತ್ತೂರು ಒಂದು. ಅದು ಮೀವಾರು ದೇಶದ ರಾಜಧಾನಿ. ಮೀವಾರು ರಾಜಪುತಾನ ಅಥವ ರಾಜಾಸ್ಥಾನವೆಂದು ಕರೆಯಲ್ಪಡುತ್ತಿರುವ ಸಂಸ್ಥಾನ ಗಳ ಸಮುದಾಯದಲ್ಲೊಂದು ಮುಖ್ಯ ಸಂಸ್ಥಾನ. ಇದನ್ನು ಪ್ರಾರಂಭ ದಿಂದಲೂ ಆಳಿಕೊಂಡು ಬಂದವರು ಸೂರ್ಯಕುಲೋತ್ತಮನಾದ ಶ್ರೀ ರಾಮನ ವಂಶಜರೆಂದು ಪ್ರಸಿದ್ಧರಾಗಿದ್ದಾರೆ. ಇಂದು ರಾಜಪುತಾನದಲ್ಲಿ ವಾಸಿಸುತ್ತಿರುವ ಮೂವತ್ತಾರು ಕ್ಷತ್ರಿಯ ವಂಶಗಳಲ್ಲಿ ಮೀವಾರಿನ ಈ ಶಿಶೋದಿಯಾ ಕುಲವೊಂದೇ ಪರಮ ಪವಿತ್ರವಾದುದೆಂದು ಹೇಳಲ್ಪಡುತ್ತಿದೆ. ಭಾರತದೇಶದ ಸುಲಿಗೆಗೆಂದು ಪ್ರಪ್ರಥಮಕ್ಕೆ ದಂಡೆತ್ತಿಬಂದ ಘಜ್ನೀ ಮಹ ಮ್ಮೂದನ ಕಾಲದಿಂದಲೂ ಶತ್ರುವಿಗೆ ಮಣಿಯದೆ—ಯವನ ಪ್ರಭುತ್ವಕ್ಕೆ ತಲೆಬಾಗದೆ, ಅವರ ಐಶ್ವರ್ಯ ಅಧಿಕಾರಗಳಿಗೆ ಮೋಹಗೊಂಡು-ಅವರೊಂ ದಿಗೆ ದೇಹಸಂಬಂಧಮಾಡಿ ಕಲುಷಿತವಾಗದೆ, ತನ್ನ ಪೂರ್ವದ ಪಾವಿತ್ರ್ಯತೆ ಯನ್ನು ಶತಾಂಶ ಉಳಿಸಿಕೊಂಡುದೆಂದರೆ ಈ ಚಿತ್ತೂರು ರಾಜವಂಶವೊಂದೇ ಎಂಬುದು ಸುಪ್ರಸಿದ್ಧವು. ಇದನ್ನು ಮಹಾ ಪ್ರತಾಪಿಗಳಾದ ಬಪ್ಪಾ ರಾವಳ, ಅನಂಗಪಾಲ, ಸಮರಸಿಂಹ ಮುಂತಾದ ರಾಜವರೇಣ್ಯರು ಪಾಲಿಸಿ ದರು.

ಚಿತ್ತೂರು ಅರಾವಳೀಪರ್ವತವನ್ನು ಅನುಸರಿಸಿಕೊಂಡು ಬಂದ ಒಂದು ಚತುಷ್ಕೋಣ ಬೆಟ್ಟದ ಮೇಲೆ ಕಟ್ಟಲ್ಪಟ್ಟ ಶೃಂಗಾರ ಪಟ್ಟಣವು. ಸುತ್ತಲೂ ಕರಿಯಕಲ್ಲಿನಿಂದ ಕಟ್ಟಲ್ಪಟ್ಟ ಬಹು ದೃಢವಾದ-ಉನ್ನತವಾದ ಕೋಟೆಯ ಗೋಡೆಗಳು, ಅವುಗಳ ಸುತ್ತಲೂ ಆಳವಾದ ಕಂದಕಗಳು, ಕೋಟೆಯ ಎಂಟು ದಿಕ್ಕುಗಳಲ್ಲೂ ಬುರುಜು ತೆನೆಗಳು, ನಾಲ್ಕು ದಿಕ್ಕು ಗಳಲ್ಲೂ ಉನ್ನತವೂ ವಿಶಾಲವೂ ಆದ ತೋರಣದ್ವಾರಗಳು, ಕೋಟೆಯೊಳಗಡೆ ಚಿತ್ರವಿಚಿತ್ರ ಶಿಲ್ಪಿಕಲೆಗಳಿಂದ ಮನೋಹರವಾಗಿ ವಿರಚಿತವಾದ ಉನ್ನತ ದೇವಾಲಯಗಳು, ಅರಮನೆಗಳು, ಛತ್ರಚಾವಡಿಗಳು: ಎಲ್ಲೆಲ್ಲೂ ವಿಶಾಲವೂ ಓರೆಕೋರೆಗಳಿಲ್ಲದೆ ನೇರವಾದುವೂ ಆದ ರಾಜಮಾರ್ಗಗಳು ; ರಾಜಮಾರ್ಗಗಳ ಎರಡು ಪಕ್ಕಗಳಲ್ಲೂ ಶೂರರಾದ ರಜಪೂತರ ಮಹಾಸೌಧಗಳು ; ಹೊರಗೆ, ವಿಸ್ತಾರವಾದ ಮತ್ತು ನಾನಾವಿಧ ಪೈರುಪಚ್ಚೆ ಫಲವೃಕ್ಷಾದಿಗಳಿಂದ ಮನೋಹರವಾದ ತೋಟ ಹೊಲಗದ್ದೆಗಳು, ಹುಲ್ಲುಗಾವಲುಗಳು, ನಿರ್ಮಲೋದಕದಿಂದ ತುಂಬಿದ ಕೆರೆಕಟ್ಟೆ ಕಾಲುವೆಗಳು ; ಹೀಗೆ ಸರ್ವಾನುಕೂಲತೆಗಳಿಂದಲೂ ಸಂಪೂರ್ಣತೆಯನ್ನು ತಳೆದು ಶತ್ರುಗಳಿಗೆ ದುರ್ಗಮವೆನಿಸಿದ್ದ ಆ ದುರ್ಗರಾಜದಲ್ಲಿ ವಾಸಿಸುವವರು ಶೂರರಾದ ರಜಪೂತ ನರಸಿಂಹರು. ಉನ್ನತವೂ ದೃಢವೂ ಆದ ಮೈಕಟ್ಟು-ಉಕ್ಕಿನ ಕೊಡತಿಗಳಂತೆ ದೃಢವಾದ ಪುಷ್ಟವಾದ ಅಜಾನುಬಾಹುಗಳು, ತೇಜಸ್ವಿಮುಖದಲ್ಲಿ ಎದ್ದು ಕಾಣುವ ಕ್ಷತ್ರಿಯ ವೀರಕಳೆ, ಇಂತು ಯುದ್ಧಜೀವಿಯಾದ ರಾಜಪುತ್ರ ವೀರವೃಂದವು, ಗುಹೆಯಲ್ಲಿನ ಮೃಗರಾಜನಂತೆ ಆ ಚಿತ್ತೂರಿನ ಕೋಟೆಯಲ್ಲಿ ವಾಸಿಸುತ್ತಿದ್ದಿತು.

ಸುಂದರವಾದ-ಬಂಧುರವಾದ ಈ ಚಿತ್ತೂರನ್ನು ರಾಜಧಾನಿಯಾಗಿ ಮಾಡಿಕೊಂಡು. ಮೇವಾಡಸಂಸ್ಥಾನವನ್ನು ಆಳಿದ ಶಿಶೋದಿಯಾ ರಾಜವಂಶದಲ್ಲಿ, ಹದಿಮೂರನೆಯ ಶತಮಾನದ ಪ್ರಾರಂಭದಲ್ಲಿ ಸಮರಸಿಹ್ಮನೆಂಬ ವೀರನೊಬ್ಬನ ಜನನವಾಯಿತು. ಘಜನೀ ಮಹಮ್ಮದನ ತರುವಾಯ ಸಂಪತ್ಸಮೃದ್ಧವಾದ ಹಿಂದೂಸ್ಥಾನದ ಬಯಲುಗಳ ಮೇಲೆ ಸ್ವೇಚ್ಛೆಯಾಗಿ ಕೊಳ್ಳೆಗೊಳ್ಳಲೆಳಸಿ ದಂಡೆತ್ತಿಬಂದ ಮಹಮ್ಮದ್‌ಘೋರಿಯನ್ನು ಹೊಡೆದಟ್ಟಲು ಸಿದ್ಧನಾದ ಡಿಲ್ಲೀಶ್ವರ ಪೃಥ್ವೀರಾಜನಿಗೆ ಈ ಸಮರಸಿಹ್ಮನು ಸಹಾ

ಯಕನಾಗಿ ಸೇನೆಯೊಂದಿಗೆ ನಡೆದು ದೇಶಸೇವೆಮಾಡಿದನು. ಘೋರಿ ಯೊಂದಿಗೆ ನಡೆದ ಎರಡನೆಯ ಯುದ್ಧದಲ್ಲಿ, ದುರ್ದೈವದಿಂದ ಪೃಥ್ವೀ ರಾಜನು ಮೃತನಾದ ನಂತರ ರಾಜಪುತ್ರ ವೀರವೃಂದವು ಕುರುಬನಿಲ್ಲದ ಮಂದೆಯಂತಾಯಿತು. ಅವರಲ್ಲಿ ಐಕಮತ್ಯವು ತಪ್ಪಿ ಮುಂದೆ ಅವರು ಒಬ್ಬೊಬ್ಬರಾಗಿ ತುರುಷ್ಕಸೈನ್ಯಕ್ಕೆ ಬಲಿಬೀಳತೊಡಗಿದರು. ಸಮರ ಸಿಹ್ಮನು ಹಿಂದಿರುಗಿ ಸ್ವದೇಶವನ್ನು ಸೇರಿ ಯುದ್ಧದಲ್ಲಿ ಕಳೆದುಳಿದ ಸೈನ್ಯ ವನ್ನು ಪುನಃ ಬಲಪಡಿಸಿಕೊಳ್ಳತೊಡಗಿದನು. ಸತ್ತ ವೀರರ ಹೆಂಡಿರು ಮಕ್ಕಳ-ತಾಯಿತಂಗಿಯರ ಹೃದಯಸಂತಾಪವು ಇನ್ನೂ ಆರಿರಲಿಲ್ಲ! ಗಾಯಗೊಂಡು ಹಿಂದಿರುಗಿದ ಸೈನಿಕರ ಗಾಯಗಳಿನ್ನೂ ವಾಸಿಯಾಗಿರಲಿಲ್ಲ! ಅಷ್ಟರಲ್ಲೇ ಘೋರಿಯ ಸೇನಾಪತಿ ಕುತ್ಬುದ್ದೀನನು ಪ್ರಚಂಡ ಯವನಸೇನೆ ಯೊಂದಿಗೆ ಬಂದು ಚಿತ್ತೂರಿನ ಸಮ್ಮುಖದಲ್ಲಿ ಬೀಡುಬಿಟ್ಟಿದ್ದಾನೆಂಬ ವಾರ್ತೆ ಯು ಬಂದಿತು. ಎಂತಹ ಸಂದರ್ಭದಲ್ಲಿದ್ದರೂ ಕದನಕ್ಕಂಜುವರೇ ರಾಜ ಪುತ್ರರು! ಸಮರಸಿಹ್ಮನು ಪುನಃ ನಡುವನ್ನು ಕಟ್ಟಿ, ಸೇನೆಯೊಂದಿಗೆ ಹೊರಬಿದ್ದು ಶತ್ರುವನ್ನು ಎದುರಿಸಿದನು. ಉಭಯ ಸೇನೆಗಳಿಗೂ ಮೂರು ದಿನಗಳು ಬಹು ಪ್ರಳಯಕಾರಿಯಾದ ಯುದ್ಧನಡೆಯಿತು. ಕೊನೆಗೂ ಸಮರಸಿಂಹನೇ ರಣದೇವತೆಗೆ ತಲೆಯನ್ನು ತೆತ್ತನು. ಮೂಲಬಲದ ಹದಿ ಮೂರು ಸಹಸ್ರಮಂದಿ ವೀರರು, ತಮ್ಮ ಸಂಖ್ಯೆಯ ಎರಡರಷ್ಟು-ಮೂರ ರಷ್ಟು ಬಲವನ್ನು ಶತ್ರುಸೇನೆಯಲ್ಲಿ ಕತ್ತರಿಸಿ ವೀರಸ್ವರ್ಗವನ್ನು ಗಳಿಸಿಕೊಂ ಡರು. ರಕ್ತವು ನೊರೆಗಟ್ಟಿ ಪ್ರವಾಹವಾಗಿ ಹರಿಯಿತು. ರಣಭೂಮಿಯು ಮಜ್ಜೆ ಮಾಂಸಗಳಿಂದ ಹೇಸಿಕೆಯಾಯಿತು. ಆದರೂ ಅಸಂಖ್ಯಸೇನಾ ಬಲಗರ್ವಿತರಾಗಿದ್ದ ತುರುಷ್ಕರು ಹಿಮ್ಮೆಟ್ಟಲಿಲ್ಲ. ಚಿತ್ತೂರಿನ ಭವಿಷ್ಯವು ಎಲ್ಲರಿಗೂ ಸಂತಾಪಜನಕವಾಗಿದ್ದಿತು. ಅತ್ತ ಸಮರಸಿಹ್ಮನ ಪುತ್ರನಾದ ಕರ್ಣನಾದರೋ ಇನ್ನೂ ಬಾಲಕ! ಪ್ರಬಲ ರಿಪುಸೇನೆಯೊಂದಿಗೆ ಕಾದಲಾ ಪನೆ! ಮುಂದೇನು ಗತಿಯೆಂದು ಎಲ್ಲರೂ ತತ್ತಳಿಸತೊಡಗಿದ್ದರು. ಆ ಸಂದರ್ಭದಲ್ಲಿ ವೀರರಮಣಿಯೊಬ್ಬಳು ಸೆರಗನ್ನು ಬಿಗಿದು ನಡುವಿಗೆ ಕಟ್ಟಿ ಕರಾಳ ಕೃಪಾಣವನ್ನು ಕೈಯಲ್ಲಿ ಧರಿಸಿ ಸಿಹ್ಮಿಯಂತೆ ಎದ್ದುನಿಂತಳು ನಿರ್ವೀರ್ಯರಾಗಿ ಜೋಲುಮುಖದಿಂದ ಕುಳಿತಿದ್ದ ರಾಜಪುತ್ರರು ಆ ಭೈರವ

ಮೂರ್ತಿಯನ್ನು ಬಿಟ್ಟ ಕಣ್ಣುಗಳಿಂದ ನೋಡಿದರು. ಮತ್ತಾರೂ ಅಲ್ಲ! ಆಕೆಯೇ ಸಮರಸಿಹ್ಮಪತ್ನಿ ಕರ್ಮದೇವಿ! ಆ ವೀರನಾರಿಯು ಕುತ್ಬುದ್ದೀನನ ಸೈನ್ಯದಮೇಲೆ ಏರಿಹೋಗಲು ಸಿದ್ಧಳಾದುದನ್ನು ಕಂಡು, ಎಲ್ಲರ ಹೃದಯದಲ್ಲೂ ನವಜೀವನ ಸಂಚಾರವಾದಂತಾಯಿತು. ಎಲ್ಲರೂ ರಣೋತ್ಸಾಹದಿಂದ ಪುನಃ ಎದ್ದರು. ಚಿಂತೆಯನ್ನು ಮರೆತರು. ನೋವುಗೀವುಗಳನ್ನು ಅಲಕ್ಷಿಸಿದರು. 'ಹರಹರ ಮಹಾದೇವ' ಎಂಬೊಂದು ರಣಗೀತೆಯಿಂದ ಭೂನಭೋಂತರಗಳನ್ನು ಪ್ರತಿಧ್ವನಿತವನ್ನಾಗಿ ಮಾಡುತ್ತಾ ಶತ್ರುಸೇನೆಗೆ ಎದುರಾದರು.

ರಾಜನು ಮೃತನಾದನಂತರವೂ ತನ್ನ ಮೇಲೇರಿ ಬರುತ್ತಿದ್ದ ಕಾಲಭೈರವನ ಬಳಗದಂತಿದ್ದ ಆ ಸೈನ್ಯವನ್ನೂ, ಅವರ ಮುಂಭಾಗದಲ್ಲಿ ಮೃತ್ಯುದೇವತೆಯ ಪ್ರತಿರೂಪವೋ ಎಂಬಂತಿದ್ದ ಆ ವೀರನಾರಿಯ ಭಯಂಕರ ಮೂರ್ತಿಯನ್ನೂ ನೋಡಿ ಅವರೆಗೇ ಶಾಂತವಾಗಿದ್ದ ತುರುಷ್ಕಸೈನ್ಯವು ಕೆಲಹೊತ್ತು ಹೆಣಗಿ ಮುಂದೆ ಪರಘಾತವನ್ನು ಸಹಿಸಲಾರದೆ ಬದುಕಿದರೆ ಸಾಕೆಂದುಕೊಂಡು, ಡಿಲ್ಲಿಯ ಕಡೆಗೆ ಓಡಿತು. ಹೀಗೆ ಧೀರಳಾದ ಕರ್ಮದೇವಿಯು ತನ್ನ ಪರಾಕ್ರಮದಿಂದ ಉಳಿದ ಚಿತ್ತೂರು ರಾಜಧಾನಿಯನ್ನು, ಕರ್ಣನು ಯುಕ್ತವಯಸ್ಕನಾಗುವವರೆಗೂ ತಾನೇ ಪಾಲಿಸಿದಳು. ಮುಂದೆ ಕರ್ಣರಾಜಪುತ್ರನು ಯೋಗ್ಯಕಾಲದಲ್ಲಿ ಪಟ್ಟಾಭಿಷಿಕ್ತನಾಗಿ ಕೆಲಕಾಲ ಆಳಿದನು. ಆದರೆ, ಮಿವಾರು ರಾಜಕುಲವನ್ನು ಸ್ಥಾಪಿಸುವ ಸುಯೋಗವು ಆತನ ಲಭ್ಯದಲ್ಲಿರಲಿಲ್ಲ. ಆತನ ಸೋದರನ ಮಗ ರಾಹೂಪನೆಂಬುವನು ವಿಕ್ರಮಶಕೆ ೧೨೫೭ (ಕ್ರಿ. ಶ. ೧೨೦೧)ರಲ್ಲಿ ಚಿತ್ತೂರಿನಲ್ಲಿ ದೊರೆಯಾದನು. ಈತನ ಆಳ್ವಿಕೆಯಲ್ಲಿ ತಮ್ಮ ಮನೆತನವನ್ನು 'ಶಿಶೋದಿಯಾ' ಎಂಬ ಹೆಸರಿನಿಂದ ಕರೆದುದೊಂದು- ಅವರಗೆ 'ರಾವಳ' ರೆಂದಿದ್ದ ರಾಜರ ಬಿರುದನ್ನು 'ರಾಣಾ' ಎಂದು ಬದಲಾಯಿಸಿದುದೊಂದು ಹೀಗೆ ಎರಡು ಮುಖ್ಯವಿಚಾರಗಳು ನಡೆದುವು. ಈತನ ಕಾಲದಿಂದ ಮುಂದೆ, ಅರ್ಧಶತಮಾನ ಕಾಲದೊಳಗಾಗಿ, ಸುಮಾರು ಒಂಬತ್ತು ಮಂದಿ ಅರಸರು ಚಿತ್ತೂರಿನಲ್ಲಿ ಗಾದಿಯನ್ನೇರಿದರು. ಈ ಒಂಬತ್ತು ಮಂದಿಯೂ, ಶ್ರೀ ಗಯಾಕ್ಷೇತ್ರದ ಪಾವಿತ್ರ್ಯತೆಯನ್ನು ಭ್ರಷ್ಟಗೊಳಿಸಲು ಮುಂದುವರಿದು ಬರುತ್ತಿದ್ದ ಯವನ

ಸೇನೆಗೆ ಎದುರಾಗಿ ನಡೆದು, ಅದರ ರಕ್ಷಣೆಗಾಗಿಯೇ ಹೋರಾಡಿ ಯುದ್ಧ ರಂಗದಲ್ಲಿ ದೇಹವಿಟ್ಟರು. ಮಧ್ಯೆ ಒಂದೆರಡುವೇಳೆ ಚಿತ್ತೂರು ಕೈಬಿಟ್ಟು ಹೋಗಿದ್ದಿತಾದರೂ, ಈ ಒಂಬತ್ತು ಮಂದಿಯಲ್ಲಿ ಕೊನೆಯವನಾದ ಬಾರ್ಸಿ ಎಂಬಾತನು ತನ್ನ ಆಳ್ವಿಕೆಯಲ್ಲಿ ಅದನ್ನು ಪುನಃ ಸ್ವಾಧೀನಪಡಿಸಿಕೊಂಡನು. ಆತನಿಗೆ ಇಬ್ಬರು ಮಕ್ಕಳು. ಅವರಲ್ಲಿ ರಾಣಾಲಕ್ಷ್ಮಣಸಿಂಹನೆಂಬಾತನು ಕ್ರಿ. ಶ. ೧೨೭೫ ರಲ್ಲಿ ಪಟ್ಟಾಭಿಷಿಕ್ತನಾದನು. ಈ ಲಕ್ಷ್ಮಣಸಿಂಹನ ಆಳ್ವಿಕೆಯಲ್ಲೇ ನಮ್ಮ ಪ್ರಕೃತ ಚರಿತ್ರೆಯ ಭೀಕರವೃತ್ತಾಂತವು ಜರುಗಿದುದು.

ರಾಣಾ ಲಕ್ಷ್ಮಣಸಿಂಹನು ಸಿಂಹಾಸನಾರೋಹಣ ಮಾಡಿದ್ದರೂ ಇನ್ನೂ ಅಲ್ಪ ವಯಸ್ಕನಾಗಿದ್ದುದರಿಂದ ಆತನಿಗೆ, ಸಿಹ್ಮವಿಕ್ರಮರಾದ ಸಹಸ್ರಾರು ಮಂದಿ ರಜಪೂತ ಸರದಾರರನ್ನು ಕೈಕೆಳಗಿಟ್ಟುಕೊಂಡು ಆಳುವ ಸಾಮರ್ಥ್ಯವಿರಲಿಲ್ಲ. ಆತನ ತಂದೆಯು ತನ್ನ ಮರಣಕಾಲದಲ್ಲಿ ಮಗನನ್ನು ತಮ್ಮನಾದ ಭೀಮಸಿಹ್ಮನ ಕೈಗಿತ್ತು—'ಪ್ರಿಯಸಹೋದರಾ, ನಾನು ಹೋಗುತ್ತೇನೆ. ಈ ಬಾಲಕನನ್ನು ನಿನ್ನ ಮಗನೆಂದೇ ತಿಳಿದು ಆಪತ್ತಿನಿಂದ ರಕ್ಷಿಸಿಕೊಂಡುಬಾ' ಎಂದು ನುಡಿದು ಪ್ರಾಣಬಿಟ್ಟಿದ್ದನು. ಭೀಮಸಿಹ್ಮನಾದರೂ ತಮ್ಮಣ್ಣನ ಮಾತಿಗೆ 'ಕಣ್ಣೀರಿಡುತ್ತಾ, '—ಹಾಗೇ ಆಗಲೆಂದು' ವಚನ ಕೊಟ್ಟಿದ್ದನು. ಆದುದರಿಂದ ಆತನ ಚಿಕ್ಕಪ್ಪನಾದ ರಾಣಾಭೀಮಸಿಹ್ಮನು ಆತನಿಗೆ ರಾಜ್ಯಭಾರ ವಿಚಾರದಲ್ಲಿ ಸಹಕಾರಿಯಾಗಿದ್ದನು-ಎಂದರೆ ಆತನೇ ಸರ್ವಾಧಿಕಾರಿಯಾಗಿದ್ದನು. ಭೀಮಸಿಹ್ಮನು ಅಕ್ಷರಶಃ ಭೀಮಸಿಹ್ಮನೇ! ಆತನ ಪರಾಕ್ರಮವೂ ಧೈರ್ಯೌದಾರ್ಯಗಳೂ ಪ್ರಶಂಸಾಯೋಗ್ಯವಾದುವು. ದೇಹಬಲದಲ್ಲೂ ಯುದ್ಧವಿದ್ಯೆಯಲ್ಲೂ ಆತನು ಅನ್ವರ್ಥನಾಮಧೇಯನು. ಆತನು ಅದ್ವಿತೀಯಪರಾಕ್ರಮಿಯಾಗಿದ್ದಂತೆಯೇ ದಯಾಳುವೂ ಪ್ರಜಾಪರಿವಾರಗಳಲ್ಲಿ ಪುತ್ರವಾತ್ಸಲ್ಯವುಳ್ಳವನೂ ಆಗಿದ್ದು, ರಾಜಪ್ರಜೆಗಳಿಬ್ಬರ ಗೌರವಾದರಗಳಿಗೂ ಪಾತ್ರನಾಗಿದ್ದನು. ಭೀಮಸಿಹ್ಮನ ಸಾನ್ನಿಧ್ಯದಿಂದ ಚಿತ್ತೂರಿನ ಕಡೆ ಶತ್ರುರಾಜರು ಇಣಿಕಿ ನೋಡದಂತಾಯಿತು. ಆತನ ಪ್ರತಾಪತೇಜವೇ ಆ ರಾಜ್ಯವನ್ನು ರಕ್ಷಾಕವಚವಾಗಿ ಪಾಲಿಸುತ್ತಿರಲು, ಲಕ್ಷ್ಮಣಸಿಹ್ಮನು ನಿರಾತಂಕನಾಗಿ ರಾಜ್ಯಭಾರ ಮಾಡುತ್ತಿದ್ದನು. ಶತ್ರು

ಬಾಧೆಯಿಲ್ಲದಿರಲು, ದೇಶವು ಕೃಷಿ ವ್ಯಾಪಾರ ಉದ್ಯೋಗ ಕೈಗಾರಿಕೆ ಮುಂತಾದುವುಗಳಲ್ಲಿ ಅಭಿವೃದ್ಧಿಗೊಂಡು ಸರ್ವಸಂಪತ್ಪೂರ್ಣವಾಯಿತು. ಚಿತ್ತೂರು, ಸಮಸ್ತ ವಿಚಾರಗಳಿಗೂ ರಾಜಪುತಾನದ ಸಂಸ್ಥಾನಗಳಿಗೆ ಮಾತ್ರವಲ್ಲ-ನೆರೆಹೊರೆಯ ಇತರ ದೇಶಗಳಿಗೂ ಆದರ್ಶಭೂತವಾಯಿತು.



## ಅಧ್ಯಾಯ ೨ "ಅಲ್ಲಾವುದ್ದೀನ್ ಖಿಲ್ಜಿ"

ರಾಜಪುತ್ರಸ್ಥಾನದಲ್ಲಿ ಅನಾದಿಕಾಲದಿಂದಲೂ ಆಳುತ್ತಾಬಂದ ರಾಜವಂಶಗಳು ಮೂವತ್ತಾರೆಂದು ಹಿಂದೆ ಹೇಳಲ್ಪಟ್ಟಿದೆಯಷ್ಟೆ! ಅವುಗಳು ಸೂರ್ಯಚಂದ್ರವಂಶಗಳ ಸಂತತಿಯವೆಂದೂ, ಅಲ್ಲದೆ ಅವರಲ್ಲಿ ಅಗ್ನಿಕುಲದವರೆಂಬ ರಾಜಪುತ್ರರೂ ಉಂಟೆಂದೂ ಪ್ರಸಿದ್ಧವಾಗಿದೆ. ಆ ವಂಶಗಳಲ್ಲಿ ಪ್ರತಿಯೊಂದಕ್ಕೂ ವಿಶ್ವಾಮಿತ್ರ, ಗೌತಮ, ಕಾಶ್ಯಪ, ವಸಿಷ್ಠ, ಮನು, ಅತ್ರಿ, ಬೃಹಸ್ಪತಿ ಮೊದಲಾದ ಗೋತ್ರಾಚಾರ್ಯರಲ್ಲೊಬ್ಬೊಬ್ಬರ ಸಂಬಂಧವೂ ಉಂಟು. ಇವುಗಳೆಲ್ಲವೂ ಈಗ ಉಚ್ಛ್ರಾಯ ಸ್ಥಿತಿಯಲ್ಲೂ ವ್ಯವಹಾರದಲ್ಲೂ ಇಲ್ಲ. ಚಿತ್ತೂರಿನ ಗಿಹಲೋಟ್ ಅಥವಾ ಶಿಶೋದಿಯಾಕುಲ ಯದುಕುಲ, ರಾಠೋರ್, ಕುಷ್ವಾಹ (ಶ್ರೀ ರಾಮನ ಜ್ಯೇಷ್ಠಪುತ್ರ ಕುಶನಿಂದ) ಲಾಹೂರ್ (ಶ್ರೀರಾಮನ ಎರಡನೆಯ ಮಗ ಲವನಿಂದ) ಛಾಲೂಕ್ ಅಥವ ಸಾಲುಂಖಿ, ತಕ್ ಅಥವಾ ತಕ್ಷಕ್, ಬಲ್ಲ, ಜಿತ್ವಾ, ಗೋಹಿಲ್, ಘರ್‌ವಾಲ್, ಜೋಹಣ್ ಇವು ಆ ಮೂವತ್ತಾರು ಕುಲಗಳಲ್ಲಿ ಬಹು ಮುಖ್ಯವಾದುವು. ಇವುಗಳೊಂದೊಂದರಲ್ಲೂ ಅನೇಕಾನೇಕ ಶಾಖೆಗಳುಂಟು. ಆದರೆ ರಾಜಪುತ್ರರು ಯಾವ ಕುಲದ ಯಾವ ಶಾಖೆಗೆ ಸೇರಿದವರಾದರೂ ವೀರ್ಯಪ್ರಧಾನರು. ಇತರ ಯಾವ ವಿಚಾರದಲ್ಲಿ ಅವರಲ್ಲಿ ಭಿನ್ನತೆಯು ಕಂಡುಬಂದರೂ, ಈ ಒಂದು ಗುಣದಲ್ಲಿ ಮಾತ್ರ ಅವರು ಚಿರಪ್ರಸಿದ್ಧರು.

ನಮ್ಮ ಕಥಾನಾಯಿಕೆ ಪದ್ಮಿನಿಯು ಹಮೀರಸಿಂಹ ಚಹ್ವಾಣನೆಂಬ ರಾಜಪುತ್ರವೀರನ ಮಗಳೆಂದೂ, ಆತನು ಸಿಂಹಳದ್ವೀಪ ವಾಸಿಯಾಗಿದ್ದನೆಂದೂ ಚರಿತ್ರೆಯು ಹೇಳುತ್ತಿದೆ. ವಿಶೇಷತಃ ರಾಜಪುತಾನದಲ್ಲೇ ಪ್ರಾಚ

ಬೇರೆದಲ್ಲಿರುವ ಈ ರಾಜಕುಲಗಳಿಂದ ಈ ಒಬ್ಬ ವೀರನು ಬಹುದೂರದ ಸಿಂಹಳದ್ವೀಪಕ್ಕೆ, ಏಕೆ, ಹೇಗೆ, ಯಾವಾಗ, ಕುಟುಂಬಸಮೇತ ಹೋದನೆಂಬ ವಿಷಯವು ಮಾತ್ರ ಚರಿತ್ರೆಯಿಂದ ಹೊರಪಡುತ್ತಿಲ್ಲ. ರಾಜಪುತ್ರಾನದ ವಿಸ್ತಾರ ಇತಿಹಾಸವನ್ನು ಬರೆದಿರುವ ಸುಪ್ರಸಿದ್ಧ ಚರಿತ್ರಕಾರ ಲೆ. ಕ. ಜೇಮ್ಸ್ ಟಾಡ್ ಸಾಹೇಬನಾದರೂ ಈ ವಿಷಯದಲ್ಲಿ ಮೌನವಾಗಿದ್ದಾನೆ! ಹಮೀರಸಿಂಹನು ಎಂತೆಯೋ, ಹೇಗೋ, ಯಾವಾಗಲೋ, ಸ್ವದೇಶವಾದ ರಾಜಪುತಾನದಿಂದ ಹೊರಟು ಸಿಂಹಳದ್ವೀಪವನ್ನು ಸೇರಿ, ಕಾಲಕ್ರಮದಲ್ಲಿ ಅಲ್ಲೇ ರಾಜ್ಯವನ್ನು ಕಟ್ಟಿ ಪ್ರಸಿದ್ಧನಾಗಿರಬಹುದು. ನಮ್ಮ ಈ ಪ್ರಕೃತ ಚರಿತ್ರೆಗೆ-ಆತನ ಪುತ್ರಿ ಪದ್ಮಿನಿಯು ಚಿತ್ತೂರಿನ ರಾಣಾಭೀಮಸಿಂಹನನ್ನು ವರಿಸಿ ಲಗ್ನವಾದಮೇಲೆ ನಡೆದ ಚರಿತ್ರೆಯೇ ವಸ್ತುವಾದುದರಿಂದ ಅಜ್ಞಾತವಾದ ಆಕೆಯ ಜನನ ಬಾಲ್ಯ ಮುಂತಾದ ವಿಚಾರಗಳನ್ನು ತಿಳಿಯಲೂ ಅಂತೆಯೇ ವಿಸ್ತರಿಸಿ ಹೇಳಲೂ ಅವಕಾಶವಿಲ್ಲ. ಇದು ಚಾರಿತ್ರಿಕ ವಿಷಯವಾದುದರಿಂದ ಇದರಲ್ಲಿ ಕಲ್ಪನಾ ಪ್ರಪಂಚಕ್ಕೆ ಪ್ರವೇಶ ಸಿಕ್ಕಲಿಲ್ಲ; ಆದರೂ ಸರ್ವಸಾಮಾನ್ಯವಾದ ಕೆಲವಿಷಯಗಳನ್ನು ಹೇಳಲು ಬಾಧಕವಿಲ್ಲವಷ್ಟೆ!

ರಾಜಾಹಮೀರಸಿಂಹನು ತನ್ನ ಧರ್ಮಪತ್ನಿಯ ಗರ್ಭಸುಧಾಂಬುಧಿಯಲ್ಲಿ ಉದಯಿಸಿದ ಕನ್ಯಾಶಿಶುವನ್ನು ಪದ್ಮಿನಿ ಎಂಬ ಸಾರ್ಥಕನಾಮದಿಂದ ಕರೆದು ಮಹೋತ್ಸವಗಳನ್ನು ನಡೆಯಿಸಿ, ಸಾಧುವರ್ಗವನ್ನೂ ಪ್ರಜಾಪರಿವಾರಗಳನ್ನೂ ಊಟಉಪಚಾರಗಳಿಂದ ತೃಪ್ತಿಗೊಳಿಸಿದನು. ಶಿಶುವು ದಿನದಿನಕ್ಕೆ ನಿಷ್ಕಳಂಕ ಆರೋಗ್ಯಭಾಗ್ಯವನ್ನು ಗಳಿಸಿ ತುಂಬುಗಲ್ಲಗಳು ತೇಜಸ್ವಿಕಣ್ಣುಗಳು ದುಂಡುದುಂಡಾದ ಕೈಕಾಲುಗಳು, ಮನೋಹರವಾದ ಮುಖ, ಇವುಗಳಿಂದ ನೋಡುವವರಿಗೆ ಮುದ್ದಿನಮಳೆಯನ್ನು ಸುರಿಸುತ್ತಾ ಬೆಳೆಯು ಸಾಗಿತು. ಕ್ರಮವಾಗಿ ಶಿಶುತನವು ಕಳೆದು ಬಾಲ್ಯವು ಪ್ರಾಪ್ತವಾಗಲು ಪದ್ಮಿನಿಯು ಅರಮನೆಯಲ್ಲಿ-ಉದ್ಯಾನದಲ್ಲಿ-ಚಂದ್ರಶಾಲೆಯಲ್ಲಿ ಇತರ ಉತ್ತಮ ಕುಲಸಂಜಾತರಾದ ಸಮವಯಸ್ಕರೊಂದಿಗೆ, ದಾದಿಯರು ಸೇವಿಸುತ್ತಿರಲು ಬಗೆಬಗೆಯ ಆಟಗಳನ್ನಾಡುತ್ತ, ಓಡುತ್ತ, ಚಿಕ್ಕ ಪುಟ್ಟ ಪ್ರಾಣಿಗಳ ಆಟಗಳನ್ನು ನೋಡುತ್ತ, ಪಕ್ಷಿಗಳ ಚಿಲಿಪಿಲಿಶಬ್ದಗಳನ್ನು ಕೇಳಿ ನಲಿಯುತ್ತ ಆನಂದಿಸುವಳು. ಹಮೀರಸಿಂಹನೂ ಆಗಾಗ ತನ್ನ ಪತ್ನಿಯೊಂದಿಗೆ ಕೂಡಿ

ತು, ಆ ಮಗುವಿನ ಬಗೆಬಗೆಯ ಬಾಲಲೀಲೆಗಳನ್ನು ಕಣ್ತುಂಬ ನೋಡಿ ಆನಂದಿಸುವನು. ಮುಂದೆ ಕೆಲವು ದಿನಗಳಲ್ಲೇ ಬೆಳೆದು ದೊಡ್ಡವಳಾದ ಆ ಬಾಲಿಕೆಗೆ ವಿದ್ಯಾಗುರುಗಳನ್ನು ನಿಯಮಿಸಿ, ರಾಜನು ಸಂಗೀತ ಸಾಹಿತ್ಯ ಚಿತ್ರಕಲೆ ಮುಂತಾದುವುಗಳಲ್ಲಿ ಶಿಕ್ಷೆ ಕೊಡಿಸಲಾರಂಭಿಸಿದನು. ಬಾಲಿಕೆಯೂ ದಿನದಲ್ಲಿ ಕಲಿಯುವುದನ್ನು ಗಂಟೆಯಲ್ಲೂ, ಗಂಟೆಯಲ್ಲಿ ಕಲಿವುದನ್ನು ಕ್ಷಣದಲ್ಲೂ ಕಲಿತು-ವೀಣಾವೇಣುವಾದನ, ಚಿತ್ರಲೇಖನ, ಗದ್ಯ-ಪದ್ಯಪಠನ ಮುಂತಾದುವುಗಳಲ್ಲೂ, ಕ್ಷತ್ರಿಯಕನ್ಯೆಯಾದುದರಿಂದ ಅಶ್ವಾರೋಹಣ, ಗಜಾರೋಹಣ, ಆತ್ಮರಕ್ಷಣೆಯ ಮಟ್ಟಿನ ಧನುರ್ವಿದ್ಯೆ ಮುಂತಾದ ಸಕಲ ವಿದ್ಯೆಗಳಲ್ಲೂ ಪ್ರವೀಣಳಾದಳು. ರಾಜರಾಣಿಯರು ತಮ್ಮ ಮುದ್ದು ಕನ್ಯೆಯನ್ನು ಕಂಡು ಮಹದಾನಂದಗೊಳ್ಳುವರು.

ಪದ್ಮಿನಿಗೆ ಬಾಲ್ಯ ಕಳೆದು ಯೌವನ ದೆಸೆಯು ತಲೆದೋರಿತು. ಆ ಯುವತಿಯ ದೇಹದ ಒಂದೊಂದು ಅಂಗವೂ ಪುಷ್ಟಿಗೊಂಡಿತು. ಪ್ರತಿಯೊಂದು ಅಂಗವೂ ಸ್ತ್ರೀಸಾಮುದ್ರಿಕಾಶಾಸ್ತ್ರಕ್ಕೆ ಲೇಶವೂ ಕಳಂಕವಿಲ್ಲದಂತೆ ಶುಭಲಕ್ಷಣಗಳಿಂದ ಶೋಭಿಸತೊಡಗಿತು. ಮುಖವು ಚಂದ್ರಬಿಂಬವನ್ನೂ, ತುಟಿಗಳು ತೊಂಡೆಯ ಹಣ್ಣನ್ನೂ, ದಂತಪಙ್ತಿಗಳು ದಾಳಿಂಬರೆ ಬೀಜಗಳನ್ನೂ ಅಥವ ಮುತ್ತುಗಳನ್ನೂ, ಕೆನ್ನೆಗಳು ಗುಲಾಬಿ ಪುಷ್ಪವನ್ನೂ ನಾಚಿಸುತ್ತಿದ್ದುವೆಂದು ಏಕೆ ಹೊಗಳಬೇಕು ! ಕಂಠಪ್ರದೇಶವು ಶಂಖವನ್ನೂ, ಸ್ತನಯುಗ್ಮಗಳು ಕಮಲದ ಮೊಗ್ಗೆಗಳನ್ನೂ, ನಡುವು ಸಿಂಹದ ನಡುವನ್ನೂ, ತೊಡೆಯು ಬಾಳೆಯ ಕಂಭಗಳನ್ನೂ, ಹಸ್ತಪಾದಗಳು ಚಿಗುರುಗಳನ್ನೂ ಅಲಗಳೆಯುತ್ತಿದ್ದುವೆಂದು ಏಕೆ ವರ್ಣಿಸಬೇಕು! ಹಾಗೂ ಅಲ್ಲದೆ, ಆ ಯುವತಿಯು ನಡಿಗೆಯಿಂದ ಹಂಸೆಯನ್ನೂ ಅಥವ ಮದಗಜವನ್ನೂ, ಆಲಾಪದಿಂದ ಕೋಗಿಲೆಯನ್ನೂ, ನೋಟದಿಂದ ಕುರಂಗವನ್ನೂ, ಕುಂತಳಗಳ ಶೋಭೆಯಿಂದ ಭ್ರಮರವನ್ನೂ, ದೀರ್ಘವಾದ ಕೇಶಪಾಶದಿಂದ ಕಾಳಸರ್ಪವನ್ನೂ ಹಂಗಿಸುತ್ತಿದ್ದಳೆಂದಾದರೂ ಮನಬಂದಂತೆ ಏಕೆ ವರ್ಣಿಸತೊಡಗಬೇಕು ? ಪದ್ಮಿನಿಯು, ಹಂಸವನ್ನೇ ಅಲ್ಲ, ಚಂದ್ರನನ್ನೇ ಅಲ್ಲ, ಕಮಲವನ್ನೇ ಅಲ್ಲ, ಕೋಗಿಲೆಯನ್ನೇ ಅಲ್ಲ ! ಬ್ರಹ್ಮಸೃಷ್ಟಿಯಲ್ಲಿ ಸುಂದರವಸ್ತುಗಳೆಂಬುವು ಯಾವುವಿರುವುವೋ ಅವೆಲ್ಲವುಗಳ ಅಧಿಕಾಂಶವನ್ನೂ ತನ್ನಲ್ಲಿ ಗಳಿಸಿಕೊಂಡು,

ತ್ರಿಲೋಕಮೋಹಕ ಸೌಂದರ್ಯದಿಂದ ಆ ರಾಜಗೃಹವನ್ನು ಬೆಳಗುತ್ತಿದ್ದಳು. ಕವಿಗಳು ಸ್ತ್ರೀವರ್ಗವನ್ನು ಪದ್ಮಿನಿ, ಶಂಖಿನಿ, ಹಸ್ತಿನಿ, ಚಿತ್ತಿನಿ, ಎಂದು ನಾಲ್ಕು ಬಗೆಯಾಗಿ ವಿಂಗಡಿಸಿರುವರಲ್ಲವೆ! ಅವರಲ್ಲಿ—

**ಶ್ಲೋ॥ ಭವತಿ ಕಮಲನೇತ್ರಾ ನಾಸಿಕಾ ಕ್ಷುದ್ರರಂಧ್ರಾ, ಅವಿರಳಕುಚಯುಗ್ಮಾ ದೀರ್ಘಕೇಶೀಕೃಶಾಂಗೀ ।**

**ಮೃದುಚಲನಸುಶೀಲಾ ಗೀತನೃತ್ಯಾನುರಕ್ತಾ ಸಕಲ ತನುಸುವೇಶಾ ಪದ್ಮಿನೀ ಪದ್ಮಗಂಧಾ ॥**

ಎಂದರೆ, ಯಾವ ಸ್ತ್ರೀಯ ನೇತ್ರವು ಕಮಲದಂತೆ ವಿಶಾಲವೂ ಸ್ವಚ್ಛವೂ ಆಗಿಯೂ, ನಾಸಿಕಾರಂಧ್ರವು ಚಿಕ್ಕದಾಗಿಯೂ, ಸ್ತನಯುಗ್ಮವು ಪುಷ್ಟವಾಗಿಯೂ ಸಾಂದ್ರವಾಗಿಯೂ, ಕೇಶರಾಶಿಯು ಉದ್ದವಾಗಿಯೂ ಒತ್ತಾಗಿಯೂ, ದೇಹವು ಸ್ಥೂಲವೂ ಸೂಕ್ಷ್ಮವೂ ಅಲ್ಲದೆ ಆಳತೆಗೆ ತಕ್ಕಂತೆಯೂ, ನಡಿಗೆಯು ಹಂಸಗತಿಯಂತೆ ಮಂದವಾಗಿಯೂ, ಇರಲು ನೃತ್ಯ ಗಾಯನಾದಿ ಕುಶಲ ಕಲೆಗಳಲ್ಲಿ ಉತ್ಸಾಹಿಯಾಗಿಯೂ ಇದ್ದು ಸರ್ವಾಂಗಸುಂದರಿಯೂ, ಪದ್ಮಗಂಧವಾದ ಶರೀರವುಳ್ಳವಳೂ ಆದವಳು ಯಾವಳೋ ಆಕೆಯು ಪದ್ಮಿನೀ ಸ್ತ್ರೀಯೆಂದು ಪ್ರಶಂಸಿಸಲ್ಪಡುವಳು.

ನಮ್ಮ ಕಥಾನಾಯಿಕೆಯಾದ ಪದ್ಮಿನಿಯು ಅನ್ವರ್ಥನಾಮಧೇಯಳಾಗಿ ಮೇಲ್ಕಂಡ ಎಲ್ಲಾ ಗುಣಗಳಲ್ಲೂ ಪರಿಪೂರ್ಣಳಾಗಿ ತುಂಬುಯೌವನದಿಂದ ಮದನಮಹಾರಾಜನ ಮದಗಜವೋ ಎಂಬಂತೆ ಶೋಭಿಸುತ್ತಿದ್ದಳು. ತನ್ನ ಮಗಳಿಗೆ ವಿವಾಹಯೋಗ್ಯವಯಸ್ಸಾದುದರಿಂದಲೂ, ಆಕೆಯ ಸೌಂದರ್ಯ ಸೌಕುಮಾರ್ಯಾದಿಗಳಿಗೆ ತಕ್ಕ ಸತ್ಕುಲಪ್ರಸೂತನಾದ ವರಶ್ರೇಷ್ಠನು, ರಾಜಪುತ್ರಕುಲಕ್ಕೆ ತೌರುಮನೆಯಾದ ರಾಜಪುತಾನದಲ್ಲಲ್ಲದೆ ಬೇರೊಂದೆಡೆಯಲ್ಲಿ ದೊರಕುವುದು ದುರ್ಲಭವಾದುದರಿಂದಲೂ, ರಾಜಾ ಹಮೀರಸಿಂಹನು ತನ್ನ ಆಪ್ತ ಮಂತ್ರಿ ಪುರೋಹಿತರನ್ನು ರಾಜಪುತಾನಕ್ಕೆ ಕಳುಹಿಸಿ ವಿಚಾರ ನಡೆಯಿಸಿದನು. ಅಲ್ಪ ಪ್ರಯತ್ನದಿಂದಲೇ ವರಶೋಧಕಾರ್ಯವೂ ಸಾರ್ಥಕವಾಯಿತು. ಮೇವಾಡದ ಯೋಧಶ್ರೇಷ್ಠ ಭೀಮಸಿಂಹನು ಪದ್ಮಿನೀ ರಾಜಪುತ್ರಿಗೆ ಸರ್ವವಿಧಗಳಲ್ಲೂ ಯೋಗ್ಯವರನೆಂದು ನಿಶ್ಚಯವಾಯಿತು. ಮಂತ್ರಿ

ಪುರೋಹಿತರು ಈ ಸಂತೋಷವಾರ್ತೆಯನ್ನು ತೆಗೆದುಕೊಂಡು, ತಮ್ಮ ರಾಜನಲ್ಲಿಗೆ ನಡೆದರು.

ಮುಂದೊಂದುದಿನದ ಶುಭಮುಹೂರ್ತದಲ್ಲಿ, ಘಟ್ಟದ ಉಪ್ಪು-ಬೆಟ್ಟದ ನೆಲ್ಲಿಕಾಯಿಗಳು ಏಕತ್ರ ಕಲೆತು, ರುಚಿಕರವಾದ ಉಪ್ಪಿನಕಾಯಿಯಾಗುವಂತೆ, ಸಿಂಹಳದ ರಾಜಪುತ್ರಿ ಪದ್ಮಿನಿಗೂ, ರಾಜಪುತಾನದ ಭೀಮಸಿಂಹನಿಗೂ ವಿವಾಹ ಮಂಗಳಕಾರ್ಯವು ಅತ್ಯಂತ ವಿಜೃಂಭಣೆಯಿಂದ ನೆರವೇರಿ ಅವರು ಆದರ್ಶದಂಪತಿಗಳಾದರು. ಪದ್ಮಿನಿಯು ಪತಿಗೃಹಕ್ಕೆ ಬಂದಳು. ಸೌಂದರ್ಯ ಸೌಕುಮಾರ್ಯ ವಿನಯಗಾಂಭೀರ್ಯಾದಿಗಳಲ್ಲಿ ಆಕೆಯನ್ನು ಹೋಲುತ್ತಿದ್ದ ಸಾಧ್ವಿಯು ಅಂದು ಮೇವಾಡದಲ್ಲಿ ಮಾತ್ರವಲ್ಲ-ರಾಜಪುತಾನದಲ್ಲೂ ಅದ್ಯಂತ ಹಿಂದೂದೇಶದಲ್ಲೂ ಎಲ್ಲೂ ಇರಲಿಲ್ಲ. ಅದ್ವಿತೀಯ ರೂಪಸಂಪತ್ತಿನೊಂದಿಗೆ ಅಲೌಕಿಕ ಸುಗುಣಸಂಪದವೂ ಆಕೆಯಲ್ಲಿ ಮನೆಮಾಡಿಕೊಂಡಿದ್ದಿತು. ಭೀಮಸಿಂಹರಾಣಾನು,

**ಶ್ಲೋ|| ಅನುಕೂಲಾಂ ವಿಮಲಾಂಗೀಂ ಕುಲಜಾಂ ಕುಶಲಾಂ ಸುಶೀಲಸಂಪನ್ನಾಂ**
**ಪಂಚ 'ಲ' ಕಾರಂ ಭಾರ್ಯಾಂ ಪುರುಷಃ ಪುಣ್ಯೋದಯಾಲ್ಲಭತೇ ||**

ಎಂಬಂತೆ ಅನುಕೂಲಳೂ ಶುಚಿವಂತಳೂ ಸತ್ಕುಲಪ್ರಸೂತಳೂ ಜಾಣೆಯೂ ಸದ್ಗುಣವಂತಳೂ ಆದ ಆ ಸಾಧ್ವೀಮಣಿಯನ್ನು ಪೂರ್ವಪುಣ್ಯದಿಂದ ಲತೇಃ ಎಂಬಂತೆ ಸಹಧರ್ಮಿಣಿಯಾಗಿ ಪಡೆದು, ಆಕೆಯೊಂದಿಗೆ ಅನ್ಯೋನ್ಯತೆಯಿಂದ ಸಂಸಾರಮಾಡಿಕೊಂಡಿದ್ದನು. ಕಾಲಕ್ರಮದಲ್ಲಿ, ಆ ದಂಪತಿಗಳ ಉದರದಲ್ಲಿ ಹನ್ನೆರಡು ಮಂದಿ ಪುತ್ರರು ಉದಯಿಸಿ, ಬಲಪರಾಕ್ರಮಾದಿಗಳಲ್ಲಿ ತಂದೆಗೆ ಸಮಾನರಾದ ಮಕ್ಕಳೆನ್ನಿಸಿಕೊಂಡರು. ಇಂತು ಅವರ ಸಂಸಾರವು ಸುಖಮಯವಾಗಿದ್ದಿತು. ಪದ್ಮಿನಿಯ ಪಾತಿವ್ರತ್ಯ ಮಹಿಮೆಯನ್ನೂ, ಆಕೆಯ ಭುವನಮೋಹಕ ಸೌಂದರ್ಯ ವಿಚಾರವನ್ನೂ ಸ್ವದೇಶ ವಿದೇಶಗಳ ಕವಿಗಳು ಸಹಸ್ರಬಗೆಗಳಿಂದ ವರ್ಣಿಸಿ, ಮುಕ್ತಕಂಠದಿಂದ ಹೊಗಳಿ ಕೀರ್ತಿಸುತ್ತಿದ್ದರು.

ರಾಣಾ ಭೀಮಸಿಂಹನು ಚಿತ್ತೂರಿನಲ್ಲಿ ಸರ್ವಾಧಿಕಾರಿಯಾಗಿದ್ದ ಸಮಕಾಲದಲ್ಲಿ ದಿಲ್ಲಿಯಲ್ಲಿ ಅಲ್ಲಾವುದ್ದೀನನೆಂಬ ಖಿಲ್ಜೀವಂಶಕ್ಕೆ ಸೇರಿದ ರಾಜನು

ಆಳುತ್ತಿದ್ದನು. ಹಿಂದೆ ಘೋರಿಯ ಮಹಮ್ಮದನು ಪೃಥ್ವೀರಾಜನನ್ನು ಜಯಿಸಿ, ಇಲ್ಲಿಯ ರಾಜ್ಯಭಾರವನ್ನು ತನ್ನ ಗುಲಾಮರಲ್ಲಿ ಮುಖ್ಯಸ್ಥನಾಗಿದ್ದ ಕುತ್ಬುದ್ದೀನನೆಂಬವನಿಗೆವಹಿಸಿ, ತನ್ನ ಸ್ವಂತದೇಶಕ್ಕೆ ನಡೆದಿದ್ದನಷ್ಟೆ! ಆ ಗುಲಾಮ ವಂಶದಲ್ಲಿ ಕುತ್ಬುದ್ದೀನನ ತರುವಾಯ ಅಲ್ತಮಷನೆಂಬುವನೂ, ಆಮೇಲೆ ರಜಿಯಾ ಬೇಗಂ ಎಂಬುವಳೂ ರಾಜ್ಯವಾಳಿದರು. ಈ ಸಂತತಿಯು ಕ್ರಿ.ಶ. ೧೨೮೮ರ ವೇಳೆಗೆ ಅಂತ್ಯವಾಗಲು, ಮುಂದೆ ಖಿಲ್ಜಿ ಎಂಬ ಮನೆತನದ ಜಲಾಲುದ್ದೀನ್ ಎಂಬವನೊಬ್ಬನು, ದಿಲ್ಲಿಯಲ್ಲಿ ರಾಜನಾದನು. ಅವನು ಎಪ್ಪತ್ತು ವರ್ಷದ ವೃದ್ಧನಾಗಿ ರಾಜ್ಯಭಾರಕ್ಕೆ ಅನರ್ಹನಾಗಿದ್ದರೂ ಹೇಗೋ ಏಳು ವರ್ಷಗಳ ಕಾಲ ಆಳಿ, ತನ್ನ ಕಾಲವನ್ನು ತೀರಿಸಿಕೊಂಡನು. ಇವನ ತರುವಾಯ ಸಿಂಹಾಸನವನ್ನು ಏರಿದವನೇ ಅಲ್ಲಾವುದ್ದೀನ್ ಖಿಲ್ಜಿ. ಈ ಅಲ್ಲಾವುದ್ದೀನನು ಮಹಾಕ್ರೂರಿ. ನಿರ್ದಾಕ್ಷಿಣ್ಯ ಪ್ರಕೃತಿಯವನು. ಇವನಿಗೆ ದಯೆ ಮಮತೆಗಳೆಂಬುವುಗಳ ಪರಿಚಯವೇ ಇರಲಿಲ್ಲ. ರಾಜನಾಗಿದ್ದ ಜಲಾಲುದ್ದೀನನು ಇವನಿಗೆ ಚಿಕ್ಕಪ್ಪನಾಗಬೇಕು. ಅವನ ರಾಜ್ಯಭಾರಕಾಲದಲ್ಲಿ ಇವನೇ ಸೈನ್ಯಾಧಿಪತಿಯು. ಚಿಕ್ಕಂದಿನಿಂದಲೂ ಹೇಳಿ ಕೇಳುವವರ-ಅಡ್ಡಿ ಆತಂಕಗಳಿಗೊಳಪಡದೆ ಸ್ವೇಚ್ಛೆಯಾಗಿ ಬೆಳೆದ ಇವನಿಗೆ, ರಾಜ್ಯದಲ್ಲಿ ಸೈನ್ಯಾಧಿಪತ್ಯವೂ ದೊರೆತ ತರುವಾಯ, ಮುಂದೆ ಕೇಳುವುದೇನು! ಯೌವನ ಧನಸಂಪತ್ತಿ ಪ್ರಭುತ್ವ ಅವಿವೇಕಗಳಲ್ಲೊಂದೊಂದು ಮನುಷ್ಯನಲ್ಲಿ ಮನೆ ಮಾಡಿಕೊಂಡರೇ ಸಾಕು, ಎಷ್ಟೋ ಮಟ್ಟಿನ ಹಾನಿಯುಂಟಾಗುವುದು. ಹೀಗಿರುವಲ್ಲಿ ಆ ನಾಲ್ಕೂ ಏಕತ್ರ ಸೇರಿದಮೇಲೆ ಮುಂದೆ ಕೇಳುವುದೇನು! ಸೈನ್ಯಾಧಿಪತಿಯಾಗಿದ್ದ ಅಲ್ಲಾವುದ್ದೀನನು ನ್ಯಾಯತಃ ರಾಜನ ಆಜ್ಞೆಗೆ ಒಳಪಟ್ಟಿರಬೇಕಾಗಿದ್ದರೂ, ಸ್ವಾರ್ಥಿಯೂ ಮಹಾಕ್ರೂರಿಯೂ ಮದಗರ್ವಿತನೂ ಆದ ಅವನಿಗೆ ಅಡ್ಡಿ ಆತಂಕಗಳೆಂಬುವೇ ಇರಲಿಲ್ಲ. ಅವನು ತನ್ನ ಅಪಾರ ಸೇನಾಬಲದೊಂದಿಗೆ ಎಲ್ಲಿಗೆಂದರಲ್ಲಿಗೆ ದಂಡೆತ್ತಿ ನಡೆಯುವನು. ಶತ್ರು ಸೇನೆಗಳನ್ನು ನಿರ್ಲಕ್ಷ್ಯದಿಂದ ಎದುರಿಸಿ ಜಯಿಸುವನು. ಊರುಗಳನ್ನು ಕೊಳ್ಳೆ ಹೊಡೆಯುವನು. ಹೆಂಗಸರು ಮಕ್ಕಳು ವೃದ್ಧರು ರೋಗಿಗಳೆಂಬ ಕನಿಕರವೂ ಇಲ್ಲದೆ, ಪ್ರಜೆಗಳನ್ನು ಚಿತ್ರಹಿಂಸೆಗಳಿಂದ ಕೊಲ್ಲಿಸುವನು. ಅಪಾರ ಧನಕನಕ ರತ್ನಗಳನ್ನು ದೋಚಿಕೊಳ್ಳುವನು. ಆ ಕೊಳ್ಳೆಯಲ್ಲಿ

ದೊರಕಿತ ಸುಂದರ ಸ್ತ್ರೀಯರನ್ನು ಕೃಪಾಲೇಶವೂ ಇಲ್ಲದೆ ಹಿಡಿತರಿಸಿ ತನ್ನ ಜನಾನಾಕ್ಕೋ ಅಥವ ತನ್ನ ಸರದಾರರ ಜನಾನಾಕ್ಕೋ ಸೇರಿಸಿಬಿಡುವನು. ಹೀಗಿರುವಲ್ಲಿ ಒಂದುಸಾರಿ ದಕ್ಷಿಣಹಿಂದೂಸ್ಥಾನದ ಮೇಲೆ ದಂಡೆತ್ತಿ ಹೊರಟು, ದೇವಗಿರಿಯನ್ನು ಮುತ್ತಿ ಜಯಿಸಿ ಕೊಳ್ಳೆ ಹೊಡೆದನು. ಇವನಿಗೆ ಮೊದಲು, ದಕ್ಷಿಣ ಭಾರತೀಯರು ಮ್ಲೇಂಛರನ್ನು ನೋಡಿದ್ದುದೇ ಇಲ್ಲ. ದೇವಗಿರಿಯನ್ನು ಲೂಟಿಮಾಡಿ, ಆ ಪಟ್ಟಣ ಒಂದರಿಂದಲೇ ಅವನು ಸಾಗಿಸಿದ ಐಶ್ವರ್ಯದ ಮೊತ್ತವು ಊಹೆಗೆ ಮೀರಿಹೋಗುತ್ತದೆ. ೨,೪೦೦ ಪೌಂಡು ತೂಕದಷ್ಟು ಮುತ್ತುಗಳು, ಹನ್ನೆರಡು ಪೌಂಡು ತೂಕದ ವಜ್ರ ಕೆಂಪು ಪಚ್ಚೆ ನೀಲಿಗಳು, ೪,೦೦೦ ಪೌಂಡು ತೂಕದ ಬೆಳ್ಳಿ, ೪,೦೦೦ ರೇಷ್ಮೆ ವಸ್ತ್ರಗಳು ಇವುಗಳಲ್ಲದೆ, ಇನ್ನೂ ಅನೇಕ ಬೆಲೆ ಬಾಳುವ ಅಪೂರ್ವ ವಸ್ತುಗಳು, ಇವುಗಳನ್ನು ದೋಚಿಕೊಂಡೊಯ್ದನಂತೆ! ಅಲ್ಲಾವುದ್ದೀನನ ಈ ವಿಜಯವಾರ್ತೆಯು ತಿಳಿದ ತರುವಾಯ, ಜಲಾಲುದ್ದೀನನು, ಅವನು ತನ್ನನ್ನು ಕೇಳದೆ ದಖ್ಖನಿನ ಮೇಲೆ ದಂಡೆತ್ತಿ ಹೋಗಿದ್ದ ವಿಚಾರವನ್ನು ಮರೆತು, ಜಯಶಾಲಿಯಾಗಿ ಬಂದ ಅವನನ್ನು ಎದುರುಗೊಳ್ಳಲಿಕ್ಕೆಂದು ಗಂಗಾನದಿಯ ತೀರದಲ್ಲಿ ಡೇರೆಗಳನ್ನು ಹಾಕಿಸಿದನು. ಅಲ್ಲಾವುದ್ದೀನನು ತನ್ನ ಕೊಳ್ಳೆಯ ಅಗಣಿತಸಿಧಿಯೊಂದಿಗೆ ಅಲ್ಲಿಗೆ ಬಂದು, ನದಿಯ ಆಚೆಯ ದಡದಲ್ಲಿಳಿದಿದ್ದಾನೆಂಬ ವಾರ್ತೆಯನ್ನು ಕೇಳಿ ಆ ವೃದ್ಧನು ಅವನಿದ್ದಲ್ಲಿಗೇ ಹೋಗಿ ಅವನನ್ನು ತಂದು ಆಶೀರ್ವದಿಸಬೇಕೆಂದು ನದಿಯನ್ನು ದಾಟಿ ಏಕಾಂಗಿಯಾಗಿ ಅವನ ಸಮೀಪಕ್ಕೆ ನಡೆದನು. ಅಲ್ಲಾವುದ್ದೀನನಾದರೋ, ರಾಜನಾದ ಆತನನ್ನು ಕೇಳದೆ, ದಂಡೆತ್ತಿ ಹೋಗಿದ್ದುದಕ್ಕಾಗಿ ಹಿಗಿಲುಗೊಂಡಿದ್ದವನಂತೆ ನಟಿಸುತ್ತಾ-ತನ್ನ ಚಿಕ್ಕಪ್ಪನೊಂದಿಗೆ ಮುಖಕೊಟ್ಟು ಮಾತನಾಡಲು ಸಹ ಹಿಂಜರಿಯುವವನಂತೆ ತೋರ್ಪಡಿಸಿಕೊಳ್ಳುತ್ತಿರಲು, ಅಷ್ಟರಲ್ಲಿ ಜಲಾಲುದ್ದೀನನು ಕೇವಲ ಸಮೀಪಕ್ಕೇ ಬಂದು ಅವನನ್ನು ಸಂಧಿಸಿದನು. ಅಲ್ಲಾವುದ್ದೀನನು ಪಾದಕ್ಕೆ ಬಿದ್ದನು. ಆ ವೃದ್ಧನು, ಪಾಪ-ಕೇವಲ ಪುತ್ರವಾತ್ಸಲ್ಯದಿಂದ ಅವನ ತಲೆಯನ್ನು ನೇವರಿಸುತ್ತ, ಭುಜ ಬೆನ್ನುಗಳಮೇಲೆ ಕೈಯಾಡಿಸುತ್ತ—"ಮಗೂ ಅಲ್ಲಾವುದ್ದೀ! ನನ್ನಲ್ಲಿಯೂ ನಿನಗೆಂತಹ ಭಯವಪ್ಪ! ನಾನು ನಿನ್ನನ್ನು ಆಕ್ಷೇಪಿಸುವೆನೇ? ನಿನ್ನಮೇಲೆ ನನಗೆ ಪ್ರೀತಿ ಇಲ್ಲವೆ? ಚಿಕ್ಕಂ

ಗಿನಿಂದಲೂ ನಾನು ನಿನ್ನನ್ನು ಪ್ರೇಮದಿಂದ-ನನ್ನ ಸ್ವಂತ ಮಕ್ಕಳಿಗಿಂತಲೂ ಹೆಚ್ಚು ಪ್ರೇಮದಿಂದ-ನಿನ್ನನ್ನು ಕಾಪಾಡಿಕೊಂಡು ಬಂದುದಿಲ್ಲವೆ ? ಏಕಿಷ್ಟು ಸಂದೇಹಪಡುವೆ ! ಸಂಕೋಚವೇತಕ್ಕೆ ?' ಎಂದು ಮೊದಲಾಗಿ ಹೇಳು ತ್ತಿದ್ದನು.

ಗೋಮುಖವ್ಯಾಘ್ರಗಳಂತೆ, ಸಾಧುಸ್ವಭಾವದಿಂದ ತೋರುತ್ತಿದ್ದ ರೂ, ಘಾತುಕರ ಚಿತ್ತದಲ್ಲಿ ಏನೇನು ಯೋಚನೆಗಳು ನಡೆಯುತ್ತಿರುವುವೆಂ ಬುದನ್ನು ಅರಿತವರಾರು ? ತನ್ನಾ ಚಿಕ್ಕ ತಂದೆಯು ಪಾಪ ಕೇವಲ ಪುತ್ರ ವಾತ್ಸಲ್ಯದಿಂದಲೇ ನಿಷ್ಕಲ್ಮಷಚಿತ್ತನಾಗಿ ತನ್ನ ತಲೆಯನ್ನು ನೇವರಿಸುತ್ತ-ಭುಜ ಗಳನ್ನು ತಟ್ಟಿ ಆದರಿಸುತ್ತ ಇದ್ದ ವೇಳೆಯಲ್ಲೇ ಆ ದುರುಳ ಅಲ್ಲಾವುದ್ದೀನನು ಆ ಮೊದಲೇ ಏರ್ಪಡಿಸಿದ್ದಂತೆ ತನ್ನ ಕಡೆಯವರಿಗೆ ಕಣ್ಣು ಮಿಟುಕಿಸಿ ಸಂಜ್ಞೆ ಮಾಡಿದನು. ಒಡನೆ ಕೇಳುವುದೇನು ? ಆಘಾತುಕದೂತರು, ಒಂದು ಕ್ಷಣ ಕಾಲದಲ್ಲಿ, ಹಿಂದಿನಿಂದ ಆ ವೃದ್ಧನ ಕತ್ತು ಹಿಡಿದು ಎಳೆದು ನೆಲಕ್ಕೆ ಬಿಸುಟರು. ಅಕಾಪಕಿ ತನಗುಂಟಾದ ಆ ಗತಿಗಾಗಿ ಗಾಬರಿಗೊಂಡ ಆ ವೃದ್ಧರಾಜನು, ನಿರ್ಗತಿಕನಂತೆ ಆರ್ತಸ್ವರದಿಂದ-'ಹೋ ಅಲ್ಲಾವುದ್ದೀನ್, ಅಲ್ಲಾವುದ್ದೀನ್' ಎಂದು ಅರಚಿಕೊಳ್ಳುತ್ತಿರುವಷ್ಟರಲ್ಲೇ, ಕ್ಷಣಮಾತ್ರವೂ ಸಾವಕಾಶಮಾಡದೆ, ಆ ದೂತರು ಆ ದುರ್ದೈವಿಯ ತಲೆಯನ್ನು ಕತ್ತರಿಸಿ, ಭಲ್ಯೆಗೆ ಚುಚ್ಚಿ, ಅದನ್ನು ಪಟ್ಟಣದಲ್ಲೆಲ್ಲ ಪ್ರದರ್ಶಿಸಿದರು. ಹೀಗೆ ರಾಜವ ಧಾಕಾರ್ಯವು ನಡೆದ ತರುವಾಯ ಮುಂದೆ ಕೇಳಬೇಕಾದುದೇನು ? ಅಲ್ಲಾ ವುದ್ದೀನನು ಅತಿಶಯ ವೈಭವಾಡಂಬರಗಳಿಂದ ಪಟ್ಟಣಪ್ರವೇಶಮಾಡಿ ರಾಜ ಗದ್ದುಗೆಯನ್ನೇರಿದನು. ಮತ್ತು ತಾನು ಕೊಳ್ಳೆಹೊಡೆದು ತಂದಿದ್ದ ಅಗಣಿತ ದ್ರವ್ಯನಿಧಿಯಲ್ಲಿ ಬಹುಭಾಗವನ್ನು ಧಾರಾಳವಾಗಿ ಖರ್ಚುಮಾಡಿ ಪ್ರಜೆ ಪರಿವಾರಗಳಿಗೆ ಅನೇಕ ಉಡುಗೆರೆ ಉತ್ಸವ ಔತಣ ಕುಡಿತ ಕುಣಿತಗ ಳನ್ನು ಏರ್ಪಡಿಸಿ ಮನರಂಜನೆಯನ್ನುಂಟುಮಾಡಿದನು. ಈ ಸಮಾರಂಭ ದಲ್ಲಿ ಮಗ್ನವಾದ ಅಜ್ಞಪ್ರಜಾಸಮೂಹವು ಹಿಂದಿನದಿನ ಬದುಕಿದ್ದ ತಮ್ಮ ವೃದ್ಧ ರಾಜನನ್ನೂ ಅವನ ಮರಣ ವೃತ್ತಾಂತವನ್ನೂ ಆ ಒಂದೇ ದಿನದಲ್ಲಿ ಮರೆತರು. ಅಲ್ಲದೆ ಭಯಂಕರ ರಾಜಹತ್ಯೆಯನ್ನಾಚರಿಸಿ ಸಿಂಹಾಸನವೇರಿದ ತಮ್ಮ ಪ್ರಕೃತರಾಜನ ದುಶ್ಚರಿತ್ರವನ್ನೂ ಗಮನಿಸದಾದರು.

ಚಿಕ್ಕತನದಿಂದಲೂ ತನ್ನನ್ನು ಪುತ್ರವತ್ ಪಾಲನೆಮಾಡಿಕೊಂಡು ಬಂದ ಪಿತೃಸಮಾನನಾದ ತನ್ನ ಚಿಕ್ಕಪ್ಪನನ್ನೇ ಅಷ್ಟುಮಟ್ಟಿನ ಘಾತುಕರೀತಿಯಿಂದ ವಧಿಸಿದ ಆ ದುರುಳನ ರಾಜ್ಯಭಾರವು ಹೇಗಿದ್ದಿತೆಂದೂ, ಅದರಲ್ಲಿ ವಾಸಿಸಿದ್ದ ಪ್ರಜೆಗಳ ಪ್ರಾಣಧನಮಾನಗಳಿಗೆ ಎಂತಹ ಸುರಕ್ಷಿತ ಸ್ಥಿತಿಯು ಇದ್ದಿತೆಂದೂ ವರ್ಣಿಸಬಹುದು! ಸದಾ ಪ್ರಾಣಭಯವು ಯಾರಿಗೂ ತಪ್ಪಿದುದಿಲ್ಲ. ತನ್ನ ಸ್ವಯಾರ್ಜಿತದ್ದೇ ಆದರೂ, ಧನಕನಕಾದಿಗಳ ಮೇಲಾಗಲೀ ವಸ್ತುವಾಹನ ಪಶುಕ್ಷೇತ್ರಗಳ ಮೇಲಾಗಲೀ, ಹೆಚ್ಚೇನು ಆತ್ಮೀಯ ಪತ್ನೀಪುತ್ರಾದಿಗಳ ಮೇಲಾಗಲೀ ಯಾರೂ ಆಸೆ ಮೋಹಗಳನ್ನಿಟ್ಟುಕೊಂಡು 'ನನ್ನವು' ಎಂದು ಹೇಳಿಕೊಳ್ಳಲು ಧೈರ್ಯವಿಲ್ಲದೆ, ಯಾವ ಹೊತ್ತಿನಸಲ್ಲಾದರೂ ತೀರ್ವವಿರಾಗಿಯಂತೆ ಎಲ್ಲವನ್ನೂ ತ್ಯಜಿಸಿ ಹೊರಡಲು ಸಿದ್ಧನಾಗಿರಬೇಕಾಗಿದ್ದಿತು. ಆತನ ಆಗ್ರಹಕ್ಕೆ ಪಾತ್ರರಾದವರಿಗೆ ಕಣ್ಣುಕೀಳಿಸುವುದು, ದೇಹದ ಚರ್ಮವನ್ನು ಸುಲಿಸುವುದು, ಉಗುರುಕಣ್ಣುಗಳಲ್ಲಿ ಸೂಜಿಗಳನ್ನು ಚುಚ್ಚಿಸುವುದು ಮುಂತಾದ ಚಿತ್ರಹಿಂಸೆಗಳನ್ನು ಉಂಟುಮಾಡಿ ಶಿಕ್ಷಿಸುವನು. ತನ್ನ ಮೇಲೆ ದಂಡೆತ್ತಿ ಬರುವ ಶತ್ರುಗಳನ್ನು ಘೋರಯುದ್ಧಗಳಲ್ಲಿ ಜಯಿಸುವುದರಲ್ಲಿಯೂ, ಪರರಾಜರ ದೇಶಗಳನ್ನು ಆಕ್ರಮಿಸುವುದರಲ್ಲಿಯೂ, ರಾಜ್ಯದಲ್ಲಿ ದಂಗೆದರೋಡೆಗಳು ಏಳದಂತೆ ಅಣಗಿಸುವುದರಲ್ಲಿಯೂ ಬಹು ಶಕ್ತನೂ ಅದ್ವಿತೀಯ ಚಂಡಶಾಸನನೂ ಆದ ಅವನ ಆಳ್ವಿಕೆಯಲ್ಲಿ ದೇಶವು ಸಕಲೈಶ್ವರ್ಯಗಳಿಂದಲೂ ತುಂಬಿ ಹೂಸುತ್ತಿದ್ದಿತು. ಅಪರಾಧಿಗಳನ್ನು ಮಾತ್ರವೇ ಅಲ್ಲ, ನಿರಪರಾಧಿಗಳನ್ನೂ ಸಹ ಹೆಂಗಸರು ಮಕ್ಕಳೆಂದು ನೋಡದೆ ಪರಿಪರಿಯ ಕ್ರೂರಶಿಕ್ಷೆಗಳಿಗೆ ಒಳಪಡಿಸಿ ಹಿಂಸಿಸುವನು. ಪ್ರಜೆಗಳನ್ನು ಶಿಕ್ಷಿಸುವುದರಲ್ಲಿ ಅವನಿಗೆ ಹಿಂದೂಗಳು ಮಹಮ್ಮದೀಯರೆಂಬ ಭೇದವಿರಲಿಲ್ಲ. ಸ್ವಮತಸ್ಥರಾದ ತುರುಕರು ಸಹ ತನ್ನ ಅಪ್ಪಣೆಯಿಲ್ಲದೆ ಒಬ್ಬರೊಬ್ಬರನ್ನು ನೋಡಕೂಡದು. ಔತಣಾದಿಗಳಿಗೆ ಹೋಗಕೂಡದು. ಹತ್ತು ಮಂದಿ ಸೇರಿ ಒಂದೆಡೆಯಲ್ಲಿ ಮಾತನಾಡಕೂಡದು. ಇಂತಹ ನಿರ್ಬಂಧಗಳನ್ನೆಲ್ಲ ಕಲ್ಪಿಸಿ, ಅವನು ಪ್ರತ್ಯಕ್ಷ ಯಮನೋ ಎಂಬಂತೆ ತನ್ನ ಅಧಿಕಾರಕ್ಕೊಳಪಟ್ಟ ಪ್ರಜಾಸಮೂಹಕ್ಕೆ ಹೊಟ್ಟೆತುಂಬ ಊಟಮಾಡಲೂ, ಕಣ್ಣುತುಂಬ ನಿದ್ರೆಮಾಡಲೂ ಸಮಾಧಾನವಿಲ್ಲದಂತೆ ಮಾಡಿ, ಹೀಗೆ ತನಗೆ ಶಾಶ್ವತನರಕ

ವಾಸಕ್ಕೆ ಬೇಕಾದ ಸಕಲ ಸಾಧನಗಳನ್ನೂ ಸಿದ್ಧಪಡಿಸಿಕೊಳ್ಳುತ್ತಿದ್ದನು. ಇಂತಹ ಭೀಕರಸ್ಥಿತಿಯ ರಾಜ್ಯಭಾರದಲ್ಲೇ ಕೆಲವು ದಿನಗಳು ಕಳೆದುವು. ಅಲ್ಲಾವುದ್ದೀನನು ಸೈನ್ಯಸಂಖ್ಯೆಯನ್ನು ದಿನದಿನಕ್ಕೆ ಹೆಚ್ಚಿಸಿ ಬಲಗೊಳ್ಳುತ್ತ ಇನ್ನೂ ಹೆಚ್ಚು ರಾಜ್ಯಗಳನ್ನು ಗಳಿಸಲಾಶಿಸಿ, ಎಂದಿಗೂ ಕೊರತೆಬೀಳದಷ್ಟು ದ್ರವ್ಯವನ್ನು ಶೇಖರಿಸಲಿಚ್ಛೆಗೊಂಡು, ಸದಾ ಆ ಆಲೋಚನೆಯಲ್ಲೇ ಮಗ್ನನಾಗಿದ್ದನು.



## ಅಧ್ಯಾಯ ೩ "ಪ್ರತಿಬಿಂಬ"

ಗಮನವಿಟ್ಟು ನೋಡುತ್ತಾ ಹೋದರೆ, ಪ್ರಪಂಚವಿಚಾರವು ಅತ್ಯಂತ ಆಶ್ಚರ್ಯಕರವಾಗಿ ತೋರುವುದು. ಸುರಾಪಾನ, ಸ್ವರ್ಣಸ್ತೇಯ, ಮದ್ಯಮಾಂಸವಿಕ್ರಯ, ಪರದಾರಗ್ರಹಣಾದಿ ಮಹಾಪಾತಕ ಕಾರ್ಯಗಳಲ್ಲಿ ಸದಾ ನಿರತರಾಗಿರತಕ್ಕವರಲ್ಲೇ ದಿನದಿನಕ್ಕೆ ಧನವು ಕೂಡುತ್ತಾ ಹೋಗುವುದು, ವೃತ್ತಿಕ್ಷೇತ್ರಗಳು ವಿಸ್ತರಿಸುವುವು, ಮನೆಮಕ್ಕಳು ಹೆಚ್ಚುವರು. ಸುಳ್ಳುಸಾಕ್ಷ್ಯ, ಕಳ್ಳ ವ್ಯಾಜ್ಯ, ಬಡವರನ್ನು ಪೀಡಿಸುವಿಕೆ ಮುಂತಾದುವುಗಳಲ್ಲೇ ಮಗ್ನರಾಗಿರುವವರು ದಿನದಿನಕ್ಕೆ ಬಲಗೊಂಡು ವಿಶೇಷ ಧನಸಂಗ್ರಹಣ ಮಾಡಿ ಪುಷ್ಟರಾಗುವಂತೆ ಕಂಡುಬರುವರು. ಯಾರು ದಾರಿಕಟ್ಟಿ ಪರರ ತಲೆಯೊಡೆಯುವರೋ, ನ್ಯಾಯಾನ್ಯಾಯಗಳೆಂದು ವಿಚಾರಿಸದೆ ತಾಯಿತಂದೆಗಳನ್ನಾದರೂ ಕೊಂದು ಪತ್ನಿ ಅಥವ ಪರಸ್ತ್ರೀಯನ್ನು ಓಲೈಸುವರೋ ಅವರೇ ದಿನದಿನಕ್ಕೆ ಧನಕನಕ-ರಾಜ್ಯಲಾಭಗಳನ್ನುಂಟಾಗಿ ಉಚ್ಛ್ರಾಯಸ್ಥಿತಿಗೇರುತ್ತಿರುವಂತೆ ಕಾಣಿಸುವುದು. ಇವುಗಳನ್ನೆಲ್ಲ ನೋಡಿದರೆ ತತ್ವವನು ವಿಚಾರಿಸಲರಿಯದ ಪಾಮರರಿಗೆ, ಭಗವಾನನ ನಿಯಾಮಕತತ್ವಗಳಲ್ಲಿ ನಂಬಿಕೆ ತಪ್ಪಲು ಅವಕಾಶವಿರುವುದು. ಆ ವೇಳೆಯಲ್ಲೇ ಅವರ ಕಣ್ಣೆದುರಿಗೆ ಮತ್ತೊಂದು ಉದಾಹರಣೆಯೂ ದೊರೆಯುವುದು. ಇದು ಸತ್ಯ ಇದು ಧರ್ಮ ಇದು ನ್ಯಾಯವೆಂದು ಗುಣಿಸಿಕೊಳ್ಳುತ್ತ ಲೋಕಸೇವೆ ಭಗವತ್ಸೇವೆ ಸಾಧು

ಸೇವೆ ಎಂದು ಮುಂತಾಗಿ ಒಡೆದು ಕಾಣುವಂತಹ ಸದ್ವ್ಯಾಪಾರಗಳಲ್ಲಿ ಆಸಕ್ತರಾಗಿರುವವರಿಗೆ ದಿನದಿನಕ್ಕೆ ಬಡತನ ರೋಗಬಾಧೆ ಪತ್ನೀಪುತ್ರಾದಿಗಳ ಮರಣ ಆಪ್ತವಿಯೋಗ ಇವೇ ಮುಂತಾದ ಹೇಳಲಾಗದಷ್ಟು ಕಷ್ಟತಾಪತ್ರಯಗಳು ಪ್ರಾಪ್ತವಾಗುವುದನ್ನೂ ಅವರು ನೋಡುವರು. ಅಸಂಸ್ಕೃತವಾದುದರಿಂದ ಅವರ ಮನಸ್ಸು ಸ್ವಾಭಾವಿಕವಾಗಿಯೇ, ದುರ್ಮಾರ್ಗಗಳಲ್ಲಿ ಪ್ರವೇಶಿಸಿಯಾದರೂ ಕಾಮಿನೀಕಾಂಚನಾದಿಗಳನ್ನು ಸಂಗ್ರಹಿಸಿ, ಇದ್ದ ಎರಡು ದಿನಗಳು ಸಾಧ್ಯವಿದ್ದಷ್ಟು ಸುಖಪಟ್ಟುಬಿಡಬೇಕೆಂದು ಪ್ರೇರಿಸುವುದು. ಒಡನೆ ಆ ಮಾರ್ಗವನ್ನು ಹಿಡಿದು ಹೊರಡುವರು. ಹೀಗಾಗಿ ಸುಖಭ್ರಾಂತಿಯಿಂದ ಅನೇಕರು ಪಾಪಕೃತ್ಯಗಳಲ್ಲಿ ತೊಡಗಲು ಅವಕಾಶವಿರುವುದು. ಸತ್ಯ ಧರ್ಮ ನ್ಯಾಯವಿಚಾರಗಳಲ್ಲೂ ಧರ್ಮಪಕ್ಷಪಾತಿಯೆಂದು ಹೊಗಳಿಸಿಕೊಳ್ಳುತ್ತಿರುವ ಲೋಕೇಶ್ವರನಲ್ಲೂ ನಂಬಿಕೆಯೂ ಭಕ್ತಿಶ್ರದ್ಧೆಗಳೂ ತಪ್ಪಲು ಅವಕಾಶವಿರುವುದು. ಇದುದರಿಂದ ಈ ವಿಚಾರವನ್ನು ಕುರಿತು ಯೋಚಿಸುವುದು ಅವಶ್ಯಕವಿದೆ.

ಸುಳ್ಳು ಕಳ್ಳತನ ದುರ್ವ್ಯವಹಾರ ಮದ್ಯಮಾಂಸಾದಿ ವಿಕ್ರಯ ಮೋಸ ಕಾಪಟ್ಯಾದಿಗಳು ಮುಂತಾದ ಪಾತಕಕಾರ್ಯಗಳಲ್ಲಿ ನಿರತನಾದವನು ನಾಲ್ಕು ಕಾಲ ಐಶ್ವರ್ಯ ಅಧಿಕಾರ ಪತ್ನೀಪುತ್ರಾದಿಗಳಿಂದ ಕೂಡಿ ಉಚ್ಛ್ರಾಯ ಸ್ಥಿತಿಗೆ ಏರುವಂತೆ ತೋರುತ್ತಿರಬಹುದು. ಅದು ದೂರದರ್ಶಿಗಳಲ್ಲದವರನ್ನು ಭ್ರಾಂತಿಗೊಳಿಸುವುದೂ ನಿಜ. ಆದರೆ ನಾವು ಯಾವಾಗಲೂ, ಪ್ರತಿಯೊಂದು ವಿಷಯವನ್ನೂ ಆದ್ಯಂತವಾಗಿ ವಿಚಾರಿಸಿ ಅದರ ಸ್ವರೂಪ ಎಂಥದೆಂದು ನಿರ್ಧರಿಸಬೇಕಲ್ಲದೆ, ಕೇವಲ ಬಾಹ್ಯದೃಷ್ಟಿಗೆ ತೋರುವ ಆಡಂಬರದಿಂದಲೇ ಮೋಹಗೊಳ್ಳಬಾರದು. ಅಖಂಡಪ್ರಯತ್ನದಿಂದ ಸಾಧ್ಯವಾಗತಕ್ಕುದು ಐಶ್ವರ್ಯತತ್ವದ ಸ್ವಭಾವವು. ಇದುದರಿಂದ ಸನ್ಮಾರ್ಗದಿಂದಲಾಗಲೀ ಅಸನ್ಮಾರ್ಗದಿಂದಲಾಗಲೀ, ಯಾವನು ಬಿಡದೆ ಪ್ರಯತ್ನ ನಡಿಸುವನೋ ಅವನಿಗೆ ಧನವು ಲಭ್ಯವಾಗಲೇಬೇಕಾದುದು ವಾಸ್ತವವು. ಧನವೊಂದು ಲಭ್ಯವಾಯಿತೆಂದರೆ, ಒಂದಿಗೇ ಮಿಕ್ಕ ಭೋಗಸಾಧನಗಳೆಲ್ಲವೂ ಬರುವುವು. ಸನ್ಮಾರ್ಗ-ಅಸನ್ಮಾರ್ಗ, ನೀತಿ-ಅನೀತಿ, ನ್ಯಾಯ-ಅನ್ಯಾಯಗಳೆಂಬುವು ಜಡವಸ್ತುವಾದ ಧನಕ್ಕೆ ಸಂಬಂಧಿಸಿದುವಲ್ಲ ; ಅವು ಅವನವನ

ಮನಸ್ಸಿಗೆ ಸಂಬಂಧಪಟ್ಟವು—ಅವನವನ ಆತ್ಮಿಕಾಭಿವೃದ್ಧಿ ಅವನತಿಗಳಿಗೆ ಸೇರಿದುವು. ಎಂತೂ ಧನಸಂಗ್ರಹಣಕ್ಕೆ ನಿರಂತರಪ್ರಯತ್ನವೇ ಮುಖ್ಯ ಕಾರಣವೆಂಬುದೊಂದು ಅತಿ ಮುಖ್ಯವಾಗಿ ಗಮನಿಸತಕ್ಕ ವಿಚಾರವು. ಇಂತಹ ನಿರಂತರಪ್ರಯತ್ನವೇ ಸನ್ಮಾರ್ಗದಲ್ಲಿ, ಎಂದರೆ ತಾನು ಮಾಡುವ ಧನಸಂಪಾದನಾ ಕಾರ್ಯದಿಂದ ಪರರ ದೇಹಕ್ಕಾಗಲೀ ಮನಸ್ಸಿಗಾಗಲೀ, ಆತ್ಮಕ್ಕಾಗಲಿ ದ್ರೋಹವುಂಟಾಗದಂತೆಯೂ, ತಾನು ಕೈಕೊಳ್ಳುವ ಕೆಲಸ ಕಾರ್ಯಗಳಿಂದ ಪರರಿಗೆ ಮೋಸವಾಗಲಿ ಅನ್ಯಾಯವಾಗಲಿ ಹಿಂಸೆಯಾಗಲಿ ಉಂಟಾಗದಂತೆಯೂ, ನಡೆದು ಯಾವನಿಗೆ ದ್ರವ್ಯಸಂಪಾದನೆಯಾಗುವುದೋ ಅವನು ತನ್ನ ದ್ರವ್ಯದಿಂದ ಮದ ಅಹಂಕಾರ ಮಮಕಾರಗಳನ್ನು ಹೊಂದು ವುದಿಲ್ಲ. ಆದರೆ ಯಾವನ ಸಂಪಾದನೆಯು ಪರರ ದೇಹ ಮನಸ್ಸು ಬುದ್ಧಿಗಳಿಗೆ ಹಾನಿಯನ್ನೂ ಕ್ಷೋಭೆಯನ್ನೂ ನಾಶವನ್ನೂ ಉಂಟುಮಾಡುವುದರಿಂದ ಆಗು ವುದೋ ಅವನಿಗೆ ಅದೇ ದ್ರವ್ಯದಿಂದಲೇ ತಕ್ಕ ಪ್ರತೀಕಾರವೂ ಆಗುವುದು. ಸನ್ಮಾರ್ಗದಿಂದ ಲಭ್ಯವಾದ ದ್ರವ್ಯವು ದಾನಧರ್ಮ ಪರೋಪಕಾರಾದಿಗಳನ್ನು ಮಾಡುವಂತೆ ಕರ್ತೃವಿಗೆ ಪ್ರೇರಣೆಯನ್ನುಂಟುಮಾಡಿ ತನ್ಮೂಲಕ ಸದ್ಗತಿಗೆ ಸಾಧನವಾದರೆ, ದುರ್ಮಾರ್ಗದಿಂದ ಲಭ್ಯವಾದ ದ್ರವ್ಯವು ದ್ಯೂತ ಮದ್ಯ ಮಾಂಸಾದಿಸೇವನೆ ವ್ಯಭಿಚಾರ ಮುಂತಾದುವುಗಳಿಗೆ ಪ್ರೇರಣೆಯನ್ನುಂಟು ಮಾಡುವುದು. ದುಷ್ಪುತ್ರರು ಉದಯಿಸಿ ಆ ದ್ರವ್ಯವನ್ನು ವಿವಿಧ ದುಷ್ಕಾ ರ್ಯಗಳಲ್ಲಿ ವ್ಯಯಗೊಳಿಸುವರು. ಗೃಹಕಲಹವೇರ್ಪಟ್ಟು ಅರ್ಥ ಮಾನ ಪ್ರಾಣಹಾನಿಗಳೂ ಉಂಟಾಗುವುವು. ಆದರೆ ಕಣ್ಣಿಗೆ ಕಾಣುವಂತೆ ದುಷ್ಕೃ ತ್ಯಗಳಲ್ಲಿ ಪ್ರವೃತ್ತರಾದವರಿಗೂ ದಿನದಿನಕ್ಕೆ ಉಚ್ಛ್ರಾಯಸ್ಥಿತಿಯು ಕಂಡು ಬರುತ್ತಿರುವುದಲ್ಲಾ ಎಂದರೆ, ಅದು ಈಗ ಮಾಡುತ್ತಿರುವ ಕಾರ್ಯಗಳ ಫಲವೆಂದು ಭಾವಿಸಬಾರದು. ಹಿಂದೆ ಮಾಡಿದ್ದ ಪ್ರಯತ್ನಫಲವಾಗಿ ಅರ್ಥಾತ್ ಕರ್ಮಫಲವಾಗಿ ಈಗ ವಿದ್ಯೆಯೂ ಧನಪದವಿಗಳೂ ಲಭ್ಯವಾ ಗುವುವು. ಅವುಗಳನ್ನು ಈಗ ಉತ್ತಮರೀತಿಯಿಂದ ಉಪಯೋಗಿಸಿಕೊಂಡು ಸನ್ಮಾರ್ಗದಲ್ಲಿ ವಿನಿಯೋಗಿಸಿದರೆ, ಆದರಿಂದ ಮುಂದುಂಟಾಗುವ ಫಲವು ಉತ್ತಮವಾಗುವುದು. ಹಾಗಿಲ್ಲವಾಗಿ, ಹಿಂದೆ ಮಾಡಿದ ಸುಕೃತಫಲವು ತೀರುವವರೆಗೆ ಈಗ ಕಾಣುವಂತಹ ಉಚ್ಛ್ರಾಯಸ್ಥಿತಿಯು ನಡೆದುಬರು

ವುದು. ತರುವಾಯ ಈಗ ಮಾಡಿದ ಕಾರ್ಯಗಳ ಫಲಾನುಭವಕ್ಕೆ ಪ್ರಾರಂಭವಾಗುವುದು. ಮನಸ್ಸೆಂಬ ಕ್ಷೇತ್ರದಲ್ಲಿ ನಾವೀಗ ಮಾಡುವ ಯೋಚನೆಗಳೇ ಬೀಜಸ್ವರೂಪವಾಗಿ-ಮೊಳೆತು ಬೆಳೆದು ಗಿಡಮರಗಳಾಗಿ ಮುಂದೆ ಫಲಗಳನ್ನು ಕೊಡುವುವು. ನಾವು ಪ್ರಯತ್ನಪೂರ್ವಕ ಭಗವತ್ಸಂಬಂಧವಾದ, ಪರೋಪಕಾರ ಸಂಬಂಧವಾದ—ಜಗತ್ತಿನಲ್ಲಿ ಶಾಂತಿ ಸಮಾಧಾನಗಳನ್ನುಂಟುಮಾಡಲು ಸಾಧಕವಾದ ಯೋಚನಾಬೀಜಗಳನ್ನು ಬಿತ್ತಿದೆವಾದರೆ ಅವು ಬೆಳೆದು ಮುಂದೆ ಮನಶ್ಶಾಂತಿ ಸುಖ ಸಮಾಧಾನಗಳನ್ನು ಕೊಡುವುವು. ಈಗ ಪರರಿಗೆ ಮನೋವ್ಯಥೆಯನ್ನೂ ಕಷ್ಟನಷ್ಟ ದುಃಖ ಸಂಕಟಗಳನ್ನೂ, ದೇಹಮನೋಬುದ್ಧಿಗಳಿಗೆ ವಿಕಲ್ಪವನ್ನೂ ಉಂಟುಮಾಡುವಂತಹ ಯೋಚನೆಯಲ್ಲೇ ಮಗ್ನರಾಗಿದ್ದರೆ, ಪರರಿಗೆ ಮೋಸಪಡಿಸುವ-ಪರಸ್ವಾಪಹಾರ ಮಾಡುವ, ಪ್ರಾಣಿಗಳಿಗೆ ಪೀಡೆಯನ್ನುಂಟುಮಾಡಿ ಹಿಂಸಿಸುವ ಕಾರ್ಯಗಳಲ್ಲೇ ನಿರತರಾಗಿದ್ದರೆ, ಅವು ಬೆಳೆದು ಫಲಕೊಡುವ ಸ್ಥಿತಿಗೆ ಬಂದಾಗ್ಯೆ ತಪ್ಪದೆ ಕಷ್ಟದುಃಖಸಂಕಟರೋಗಾದಿಗಳೆಂಬ ಬೇವಿನಹಣ್ಣುಗಳಂತಹ ಕಟುವಾದ ಫಲಗಳನ್ನೇ ಕೊಡುವುವು. ಆಗ ಅವುಗಳನ್ನು ಅನುಭವಿಸುವುದು ತಪ್ಪದು. ಈಗ ಮಾವಿನ ಬಿತ್ತವನ್ನು ಬಿತ್ತಿದ್ದರೆ ಮಾವಿನ ಫಲ-ಬೇವಿನ ಬೀಜವನ್ನು ಬಿತ್ತಿದ್ದರೆ ಸ್ವತಸ್ಸಿದ್ಧವಾಗಿ ದಕ್ಕಲವೇ ಪ್ರಾಪ್ತವಾಗುವುದು ತಪ್ಪದು.

ದಿಲ್ಲಿಯ ಅರಮನೆಯಲ್ಲಿ ಕುಳಿತು ತನ್ನ ಐಶ್ವರ್ಯ ಅಧಿಕಾರಗಳಿಗಾಗಿ ಹೆಚ್ಚಳಪಟ್ಟುಕೊಳ್ಳುತ್ತಿದ್ದ ಅಲ್ಲಾವುದ್ದೀನನು, ಒಂದಾನೊಂದು ದಿನ ಮಿತ್ರ, ಪರಿವಾರದೊಂದಿಗೆ ಸಭೆಯಲ್ಲಿ ಕುಳಿತಿದ್ದಾಗ ಮಾತಿಗೆ ಮಾತು ಬಂದು—ಪ್ರಪಂಚದಲ್ಲಿ, ಕವಿಗಳು ವರ್ಣಿಸಿರುವಂತಹ ಭುವನ ಮೋಹನ ಸೌಂದರ್ಯವತಿಯರಾದ ಸ್ತ್ರೀಯರು ಇರುವರೇ ಎಂಬ ಪ್ರಶ್ನೆಯು ಹೊರಟಿತು. ಅದರ ಮೇಲೆ ಅನೇಕ ಮಾತುಕಥೆಗಳು ನಡೆದುವು. ಕೊನೆಗೆ ಅಲ್ಲಿದ್ದ ಸಾಮಾಜಿಕರಲ್ಲೊಬ್ಬನು, ಚಿತ್ತೂರು ರಾಣಾ ಭೀಮಸಿಂಹನ ಪತ್ನಿ ಪದ್ಮಿನಿಯು ತ್ರಿಲೋಕಸುಂದರಿಯೆನಿಸಿ ನಾರೀಕುಲಭೂಷಣಗಳಾಗಿದ್ದಾಳೆಂದೂ, ರತಿಶಾಸ್ತ್ರದಲ್ಲಿ ಪದ್ಮಿನೀ ಜಾತಿಯ ಸ್ತ್ರೀಗೆ ಇರಬೇಕೆಂದು ಹೇಳಿರುವ ಸಮಸ್ತ ಸಲ್ಲಕ್ಷಣಗಳೂ ಆಕೆಯಲ್ಲಿ ಕಂಡುಬರುತ್ತಿರುವುವೆಂದೂ ಅಂತಹ ಸೌಂದ

ರ್ಯವತಿಯು ಮಾನುಷಲೋಕದಲ್ಲಿ ಮತ್ತೆಲ್ಲೂ ಇಲ್ಲವೆಂದೂ ಹೇಳಿದನು. ಒಬ್ಬ ರಾಜಪುತ್ರಸ್ತ್ರೀಯು ಅಂತಹ ಸೌಂದರ್ಯವತಿಯೆಂಬುದನ್ನು ಕೇಳಿದೊಡನೆಯೇ ಅಲ್ಲಾವುದ್ದೀನನ ಕಿವಿಗಳು ಮೊರದಗಲವಾದುವು—'ಏನು ಪದ್ಮಿನಿಯು ಅಷ್ಟು ಸುಂದರಳೆ? ಅಂತಹ ಚೆಲುವೆಯೇ! ಇದು ನಿಜವೆ?' ಎಂದು ಮುಂತಾಗಿ ಪ್ರಶ್ನಿಸಿ, ದೃಢಪಡಿಸಿಕೊಂಡನು. ಒಡನೆ ಅವನ ಮನಸ್ಸು ಆ ಕಡೆ ಎಳೆಯಸಾಗಿತು. ಅವನಿಗೆ ಅರಮನೆಯಲ್ಲಿ ರಾಣಿಯರಿರಲ್ಲವೆಂತಲ್ಲ; ಬಹುಮಂದಿ ಇದ್ದರು. ತಮ್ಮ ಪ್ರಭುವಿನ ಒಂದು ಕಟಾಕ್ಷವು ತಮ್ಮಮೇಲೆ ಬಿದ್ದರೆ ಕೃತಾರ್ಥರಾದೇವೆಂದು ಆತನ ಆಗಮನವನ್ನು ನಿರೀಕ್ಷಿಸಿ-ನಿರೀಕ್ಷಿಸಿ ಬೇಸತ್ತಿದ್ದ ರಾಣಿಯರನೇಕಮಂದಿ ಅವನಿಗಿದ್ದರು. ಆದರೆ ಆ ಚೋಹಣಾಕುಲ ರಾಜಪುತ್ರಿಯ ಸೌಂದರ್ಯದೆದುರಿಗೆ ಅವರೆಲ್ಲರ ಚೆಲುವೂ ಅವನಿಗೆ ಅಸಹ್ಯವೆನಿಸಿತು. ತನ್ನ ಅಂತಃಪುರದ ಕಡೆ ಸುಳಿಯದಂತಾದನು. ಅವನ ಗಮನವೆಲ್ಲವೂ ಚಿತ್ತೂರಿನ ಕಡೆ-ಪದ್ಮಿನಿಯಮೇಲೆ! ಅಲ್ಲಾವುದ್ದೀನನಿಗೆ ಪದ್ಮಿನಿಯ ಹುಚ್ಚು ಹಿಡಿದಂತಾಯಿತು.

ಸರಿ. ಮುಂದೆ ಕೇಳುವುದೇನು! ಮೇವಾರು ದೇಶದಮೇಲೆ ಸೈನ್ಯವು ಹೊರಡಬೇಕೆಂದು ಆಜ್ಞೆಯಾಯಿತು. ಸೈನ್ಯದೊಂದಿಗೆ ಆನೆಯಮೇಲೇರಿ ತಾನೂ ಹೊರಟನು. ಆದರೆ, ಮಾರ್ಗಕ್ರಮಣ ಮಾಡುತ್ತ-ಮಾಡುತ್ತ ಅವನಿಗೊಂದು ಯೋಚನೆಯುಂಟಾಯಿತು. "ನಾನು ಏಕಾಏಕಿ ಹೋಗಿ ನಗರಕ್ಕೆ ಮುತ್ತಿಗೆ ಹಾಕಿದರೆ, ರಾಜಪುತ್ರರು ಮಹಾ ಛಲಗಾರರಾದುದರಿಂದ ಭಯಂಕರ ಯುದ್ಧವು ನಡೆಯದಿರದು. ಉಭಯಸೈನ್ಯಗಳೂ ಜಯಾಭಿಲಾಷೆಯಿಂದ ಹೋರಾಡತೊಡಗಿದರೆ ಮುಂದೆ ಜಯಾಪಜಯಗಳು ಹೇಗಿರುವುವೋ ತಿಳಿಯಬಾರದು. ಆದುದರಿಂದ ಈಗ ಪ್ರಾರಂಭಕ್ಕೇ ಯುದ್ಧಕ್ಕೆ ತೊಡಗುವುದಕ್ಕಿಂತಲೂ, ಇನ್ನೂ ಒಂದೆರಡು ಮಾರ್ಗಗಳಿಂದ ಆಕೆಯನ್ನು ಪಡೆಯಲು ಪ್ರಯತ್ನಿಸೋಣ, ಅವು ನಿಷ್ಫಲವಾದರೆ ಮುಂದೆ ಯುದ್ಧದ ಮಾರ್ಗವಂತೂ ಇದ್ದೇ ಇದೆಯಲ್ಲ" ಎಂದುಕೊಂಡನು. ಮೇವಾರಿನ ಸರಹದ್ದಿನಲ್ಲಿರುವ ತನ್ನ ರಾಜ್ಯದಲ್ಲೇ ಬೀಡುಬಿಟ್ಟು, ಅನೇಕಮಂದಿ ಯವನಸ್ತ್ರೀಯರನ್ನು ಕರೆಸಿ, ಅವರ ಮೂಲಕ ಪದ್ಮಿನೀರಾಣಿಯ ಊಳಿಗದಲ್ಲಿದ್ದ ದಾಸಿಯರಿಗೆ ಲಂಚದ್ರವ್ಯವನ್ನೂ-ಬಹುವಿಧವಸ್ತ್ರಾಭರಣಗಳನ್ನೂ ಕಳುಹಿಸಿ, ಪದ್ಮಿ

ನಿಯ ಮನಸ್ಸನ್ನು ತನ್ನ ಕಡೆಗೆ ತಿರುಗಿಸಿಕೊಳ್ಳಲು ಪ್ರಯತ್ನಪಟ್ಟನು. ಆದರೆ, ಆ ನೀಚಬುದ್ಧಿಯ ಸುಲ್ತಾನನ ಈ ಯೋಚನೆಗಳು ಪದ್ಮಿನಿಯ ಅಂತಃಪುರವನ್ನಲ್ಲ,-ಚಿತ್ತೂರು ಕೋಟೆಯನ್ನೂ ಪ್ರವೇಶಿಸಲಿಲ್ಲ. ತನ್ನ ಆ ಹೇಡಿಯತ್ನವು ಕೊನೆಸಾಗದಿದ್ದುದನ್ನು ಕಂಡು, ಒಡನೆ ಸೈನ್ಯವು ಮೇವಾರು ರಾಜ್ಯವನ್ನು ಪ್ರವೇಶಿಸಿ, ಚಿತ್ತೂರು ರಾಜಧಾನಿಯನ್ನು ಮುತ್ತಿಗೆ ಹಾಕಲೆಂದು ಆಜ್ಞಾಪಿಸಿದನು. ಯವನಸೇನೆಯು ಯಮನಸೇನೆಯೋ ಎಂಬಂತೆ, ರಭಸದಿಂದ ದೇಶದೊಳಕ್ಕೆ ನುಗ್ಗಿ ಚಿತ್ತೂರಿನಕಡೆಗೆ ಪ್ರಯಾಣಮಾಡಿತು. ಡಿಲ್ಲಿಯ ಸುಲ್ತಾನ ಅಲ್ಲಾವುದ್ದೀನನ ಸೇನೆಯು, ತಮ್ಮ ರಾಜ್ಯದಮೇಲೆ ದಂಡೆತ್ತಿ ರಾಜಧಾನಿಯ ಕಡೆಗೆ ಅತಿರಭಸದಿಂದ ಬರುತ್ತಿದೆಯೆಂಬ ವಾರ್ತೆಯನ್ನು ಕೇಳಿದ ರಾಣಾ ಲಕ್ಷ್ಮಣಸಿಂಹನೂ, ಇತರ ರಾಜಪುತ್ರವೀರರೂ ಪರಮಾಶ್ಚರ್ಯಮಗ್ನರಾದರು. ಒಂದೆರಡು ದಿನಗಳೊಳಗಾಗಿ ಸುಲ್ತಾನನ ಸೇನೆಯು ಬಂದು ಚಿತ್ತೂರು ಕೋಟೆಯಸುತ್ತಲೂ ಮುತ್ತಿಕೊಂಡಿತು. ಕೋಟೆಯೊಳಗಿನಿಂದ ಯಾರೊಬ್ಬರೂ ಹೊರಕ್ಕೆ ಬರಲೂ-ಹೊರಗಿದ್ದವರು ಒಳಕ್ಕೆ ಹೋಗಲೂ ಅವಕಾಶವಿಲ್ಲದಂತಾಯಿತು. ಸುತ್ತಮುತ್ತಲಿನ ಗ್ರಾಮಾಂತರಗಳವರು ಧಾನ್ಯದವಸಗಳನ್ನು ಆ ರಾಜಧಾನಿಗೆ ತರುವುದಂತಿರಲಿ ಹುಲ್ಲು ಕಟ್ಟಿಗೆ ಹಾಲು ಮೊಸರುಗಳು-ಕೂಡ ಹೊರಗಿನಿಂದ ಬರುವುದು ನಿಂತುಹೋಯಿತು. ರಾಜಧಾನಿಯ ಒಳಗಿದ್ದ ಆಹಾರವು ಪ್ರಜೆಗಳಿಗೆ ಎಷ್ಟು ದಿನಗಳವರೆಗೆ ಸಾಕಾದೀತು? ಕೋಟೆಯೊಳಗಿನ ಆಹಾರಸಂಗ್ರಹಣವು ದಿನದಿನಕ್ಕೆ ಕಡಮೆಬೀಳುತ್ತಿದ್ದುದನ್ನು ಕುರಿತು, ರಾಣಾ ಲಕ್ಷ್ಮಣಸಿಂಹನೂ ರಾಣಾ ಭೀಮಸಿಂಹನೂ ಚಿಂತೆಗೊಳಗಾದರು. ರಾಜಪುತ್ರರಕ್ತಾಭಿಲಾಷಿಯಾದ ಆ ದುರುಳನೊಂದಿಗೆ ತಾವೇ ಏಕೆ ವಿರೋಧವನ್ನು ಪ್ರಾರಂಭಿಸಿ, ರಕ್ತಪ್ರವಾಹಕ್ಕೆ ಅವಕಾಶವನ್ನುಂಟುಮಾಡಬೇಕೆಂದು ಯೋಚಿಸಿ,—ಆಗ ದಂಡೆತ್ತಿ ಬಂದ ಕಾರಣವೇನೆಂದು ವಿಚಾರಿಸಲು ದೂತರನ್ನಟ್ಟಿದರು. ಅಲ್ಲಾವುದ್ದೀನನು—'ಮಹಮ್ಮದೀಯ ಮತಧರ್ಮಪ್ರಚಾರವೇ ನನ್ನ ಮುಖ್ಯೋದ್ದೇಶ್ಯ. ನೀವೆಲ್ಲರೂ ಆ ಧರ್ಮವನ್ನು ಸ್ವೀಕರಿಸಿ, ಡಿಲ್ಲೀ ಚಕ್ರಾಧಿಪತ್ಯದ ಸ್ವಾಮ್ಯವನ್ನು ಒಪ್ಪಿಕೊಳ್ಳುವುದಾದರೆ ನಾನು ಮುತ್ತಿಗೆಯನ್ನು ತೆಗೆದು ಹೊರಡುತ್ತೇನೆ" ಎಂದು ಹೇಳಿ ಕಳುಹಿಸಿದನು.

ಪವಿತ್ರವಾದ ತಮ್ಮ ಧರ್ಮವನ್ನು ತ್ಯಜಿಸಬೇಕೆಂದು ಹೇಳಿ ಕಳುಹಿಸಿದ ಆ ಮಾತನ್ನು ಕೇಳಿ, ಮಹಾ ಧರ್ಮಾಭಿಮಾನಿಗಳಾದ ರಾಜಪುತ್ರ ಸರದಾರರು ಕಣ್ಣುಗಳನ್ನು ಕೆಂಪು ಮಾಡಿಕೊಂಡು, ಆಗಲೇ ಹೊರನುಗ್ಗಿ ಆ ಯವನನಿಗೆ ಚೆನ್ನಾಗಿ ಬುದ್ಧಿ ಕಲಿಸಬೇಕೆಂದುಕೊಂಡರು. ಆದರೆ ಭೀಮಸಿಂಹನು —"ಮೊದಲೇ ನಾವೇಕೆ ಯುದ್ಧಕ್ಕೆ ಆರಂಭಿಸಬೇಕು! ಕೆಲದಿನಗಳು ತಡೆದು ನೋಡೋಣ ?" ಎಂದು ಸಮಾಧಾನ ಹೇಳಿ, ಎಲ್ಲರನ್ನೂ ಶಾಂತಗೊಳಿಸಿದ್ದನು. ಅಲ್ಲಾವುದ್ದೀನನ ಮುತ್ತಿಗೆಯು ಮುಗಿಯುವುದೆಂದಿಗೆ ಎಂಬುದು ತಿಳಿಯದಾಯಿತು. ನಾಲ್ಕಾರು ತಿಂಗಳುಗಳು ಕಳೆದುವು. ಈ ಮಧ್ಯೆ ಒಂದೆರಡು ಸಾರಿ ಸುಲ್ತಾನನ ಸೇನೆಗೂ ರಾಣಾನ ಸೇನೆಗೂ ಯುದ್ಧ ನಡೆದು ಅಲ್ಲಾವುದ್ದೀನನಿಗೆ ರಾಜಪುತ್ರ ಸೈನಿಕರ ಬಲದಪ್ರಮಾಣವೆಷ್ಟೆಂಬುದರ ಪರಿಚಯವಾಗಿದ್ದಿತು. ಅವರ ಸಂಪೂರ್ಣ ಬಲದೊಂದಿಗೆ ಯುದ್ಧವು ಕೈಗಟ್ಟಿದರೆ, ತನ್ನ ಪರಿಣಾಮವೇನೆಂದು ಸಹ ಒಂದೆರಡು ಸಾರಿ ಯೋಚಿಸಿಕೊಂಡನು. ಪದ್ಮಿನಿಯ ಸ್ವರೂಪ ಸೌಂದರ್ಯದ ಕನಸು ಕಾಣುತ್ತ ಸುಲ್ತಾನನು ದಿನಗಳನ್ನು ವರ್ಷಗಳಂತೆ ಕಳೆಯುತ್ತಿದ್ದನು. ಇತ್ತ ರಾಜಪುತ್ರರಿಗೂ ಆಹಾರ ಸಂಗ್ರಹಣವೆಲ್ಲವೂ ತೀರುತ್ತಾ ಬಂತು.

ಇನ್ನು ಬಹುಕಾಲ ಹಾಗೆ ಮೌನವಾಗಿರುವುದು ಸಾಧ್ಯವಲ್ಲವೆಂದು ತಿಳಿದು ರಾಣಾನು ದಿಲ್ಲಿ ಸೈನ್ಯದೊಂದಿಗೆ ಯುದ್ಧ ಮಾಡುವುದೇ ಸರಿಯೆಂದು ನಿರ್ಧರಿಸಿ, ಕೋಟೆಯಲ್ಲಿ ರಣಭೇರಿಯನ್ನು ಹೊಡೆಯಿಸಿದನು. ರಜಪೂತ ಸೈನಿಕರೆಲ್ಲರೂ, ಅಪೂರ್ವ ರಣೋತ್ಸಾಹದಿಂದ ತಮ್ಮ ತಮ್ಮ ಆಯುಧವಾಹನಾದಿಗಳನ್ನೆಲ್ಲ ಸಿದ್ಧಪಡಿಸಿಕೊಂಡು, ರಾಜಾಜ್ಞೆಯನ್ನು ಎದುರು ನೋಡುತ್ತ ಕಾದಿದ್ದರು. ಮುಂದೊಂದು ದಿನ ರಜಪೂತಸೈನ್ಯಕ್ಕೂ ಯವನಸೈನ್ಯಕ್ಕೂ ಕದನವು ಕೈಗಟ್ಟಿತು. ರಜಪೂತರು ಭಯಂಕರ ವೀರಾವೇಶದಿಂದ ಅರಿವೀರರ ಶಿರಸಹಸ್ರಗಳನ್ನು ರಣದೇವತೆಗೆ ಬಲಿಯಿತ್ತು ರಕ್ತಪ್ರವಾಹವನ್ನು ಹರಿಸಿ ಬೊಬ್ಬಿರಿಯುವರು. ಯವನರಾದರೂ ರಾಜಪುತ್ರರ ಸೇನೆಯನ್ನು ಹಾಗೆಯೇ ಜಯಗೊಳಿಸಿ ಜಯಘೋಷಮಾಡುವರು. ಅಹರ್ನಿಶಿ ಮೂರು ದಿನಗಳು ಭಯಂಕರ ಯುದ್ಧ ನಡೆಯಿತು. ಉಭಯ ದಳಗಳಲ್ಲೂ ಅಧಿಕ ನಷ್ಟವಾಯಿತು. ಆದರೆ ಜಯಾಪಜಯಗಳೊಂದೂ ನಿರ್ಣಯವಾಗ

ಲ್ಲ. ತಮ್ಮ ಕಡೆಯ ಅಷ್ಟು ಸೈನ್ಯವು ನಷ್ಟವಾದರೂ ಇನ್ನೂ ಮಣಿಯದಿದ್ದ ರಾಜಪುತ್ರರ ಪರಾಕ್ರಮವನ್ನು ಕಂಡು ಬೆರಗಾದ ಅಲ್ಲಾವುದ್ದೀನನು ಹೀಗೆಯೇ ಯುದ್ಧಮಾಡುತ್ತಾ ಹೋದರೆ ಅವರನ್ನು ಜಯಿಸಿ, ಪದ್ಮಿನಿಯನ್ನು ಪಡೆಯಬೇಕೆಂಬುವ ತನ್ನ ಆಸೆಯು ಎಂದಿಗೂ ನೆರವೇರಲಾರದೆಂದು ಎಣಿಸಿ, ತನ್ನ ಆಪ್ತ ದೂತನೊಬ್ಬನನ್ನು ಕರೆದು, ಒಂದು ಪತ್ರವನ್ನು ಬರೆದು, ಅದನ್ನು ರಾಣಾನ ಸಮೀಪಕ್ಕೆ ಕೋಟೆಯೊಳಗಡೆ ಕಳುಹಿಸಿದನು. ಇನ್ನೂ ಯುದ್ಧವು ಮುಗಿಯಲಿಲ್ಲ; ಮುತ್ತಿಗೆಯು ಸಡಲಿಲ್ಲ; ಅಷ್ಟರಲ್ಲೇ ಶಾಂತ ಸೂಚಕವಾದ ಬಿಳಿಯಬಾವುಟವನ್ನು ಹಿಡಿದು, ತಮ್ಮ ಕೋಟೆಯ ಕಡೆಗೆ ನಡೆದು ಬರುತ್ತಿದ್ದ ಆ ಯವನ ಸೈನಿಕನನ್ನು ಕಂಡು, ರಜಪೂತ ಸೈನಿಕರು ಪರಮ ಕೌತುಕಪಟ್ಟು, ಅವನನ್ನು ರಾಣಾನಲ್ಲಿಗೆ ಸುರಕ್ಷಿತವಾಗಿ ಕರೆತಂದು ಸೇರಿಸಿದರು. ಅವನು, ನೆಲಮುಟ್ಟಿ ನಮಸ್ಕಾರಮಾಡಿ, ತಾನು ತಂದಿದ್ದ ಪತ್ರವನ್ನು ಒಪ್ಪಿಸಲು, ರಾಣಾನು ಆ ಪತ್ರದಲ್ಲಿದ್ದ ವಕ್ಕಣೆಯೇನೆಂದು ತನ್ನ ಕರಣೀಕರಿಂದ ಓದಿಸಿದನು. ಅದರಲ್ಲಿ—'ನಾನು ಮುಸಲ್ಮಾನ್ ಧರ್ಮ ಪ್ರಚಾರಕ್ಕಾಗಿ ಯುದ್ಧಕ್ಕೆ ಬಂದಿದ್ದೇನೆಂದಲ್ಲವೆ ನಿಮ್ಮಲ್ಲಿ ಹೇಳಿದ್ದೆನು. ಅದಂತಿರಲಿ; ನಾನು ನಿಮ್ಮ ಮೇಲೆ ಮಾಡುತ್ತಿರುವ ಯುದ್ಧಕ್ಕೆ ಕಾರಣವು ಬೇರೊಂದುಂಟು. ನಾನು ನಿಮ್ಮ ಚೋಹಣ ರಾಜಪುತ್ರಿ ಪದ್ಮಿನೀ ರಾಣಿಯ ಮೇಲೆ ಮೋಹಗೊಂಡಿದ್ದೇನೆ. ಆ ನಾರೀ ಶಿರೋಮಣಿಯನ್ನು ನನ್ನ ವಶಕ್ಕೆ ಒಪ್ಪಿಸುವಿರಾದರೆ ಇಂದೇ ಮುತ್ತಿಗೆಯನ್ನು ಎತ್ತಲು ಆಜ್ಞಾಪಿಸುತ್ತೇನೆ' ಎಂಬರ್ಥದ ವಕ್ಕಣೆಯಿದ್ದಿತು.

ಕರಣೀಕನು ನಿಧಾನವಾಗಿ ಪತ್ರವನ್ನು ಓದುತ್ತಿದ್ದಂತೆಯೇ, ಆ ಮಾತುಗಳನ್ನು ಕೇಳಿದಂತೆಲ್ಲ, ರಾಜಪುತ್ರ ಸರದಾರರ ದೇಹದಲ್ಲಿನ ರಕ್ತವೆಲ್ಲವೂ ಚಿಲ ಚಿಲನೆಂದು ಚಲಿಸ ತೊಡಗಿದಂತಾಗಲು-ಕೋಪಶಿಖಿಯಿಂದ ಕಾಯ್ದು ಉಕ್ಕೇರಿ ಮುಖದ ಪ್ರದೇಶಕ್ಕೆ ನುಗ್ಗಲು-ಕಣ್ಣುಗಳೂ ಮುಖವೂ ಪ್ರಳಯಾಗ್ನಿಯಂತೆ ಪ್ರಜ್ವಲಿಸತೊಡಗಲು, ಆ ಪತ್ರವನ್ನು ತಂದ ದೂತನನ್ನು ನುಂಗುವವರಂತೆ ನೋಡುತ್ತ, ಕಟ ಕಟನೆಂದು ಹಲ್ಕಡಿಯುತ್ತ, ಒಬ್ಬೊಬ್ಬನೂ—"ಸೀಳಿರಿ ಆ ನಾಯಿಯ ನಾಲಿಗೆಯನ್ನು, ಕೀಳಿರಿ ಆ ಪಾಪಿಯ ಕಣ್ಣುಗಳನ್ನು, ಕೊಲ್ಲಿರಿ ಆ ಪರಮ ನೀಚನನ್ನು! ದುರುಳಯವನನು ಮಾತೃಶ್ರೀ

ಪದ್ಮಿನೀದೇವಿಯನ್ನು ಕಾಮಿಸಿದನೆ! ಸರಿಯು ಮೃಗರಾಜಪತ್ನಿಯನ್ನು ಅಪೇಕ್ಷಿಸಿತೆ? ಶುನಕವು ಪವಿತ್ರವಾದ ಹೋಮುಚರುವನ್ನು ಬಯಸಿತೆ? ಈ ಮಾತುಗಳನ್ನು ಕೇಳಿಯೂ ಅಗ್ನಿಕುಲ ಸಂಭವರಾದ ನಾವು ಈ ಭುಜಗಳ ಮೇಲೆ ಶಿರವನ್ನು ಧರಿಸಿ ಸಹಿಸಬಹುದೆ? ಇಂದೇ ಆ ನೀಚನ ಗರ್ವವನ್ನು ಅಣಗಿಸುವೆವು. ಇಂದೇ ಅವನ ಕಂಠದ ಬಿಸಿ ರಕ್ತವನ್ನು ಓಕುಳಿಯಾಗಿ ಚೆಲ್ಲುವೆವು. ಇಂದೇ ಆ ನರಮಹಿಷನನ್ನು ಬಲಿಕೊಟ್ಟು ಅವನ ಮಾಂಸ ಖಂಡಗಳನ್ನು ನಾಯಿ ನರಿಗಳಿಗೆ ಆಹಾರವನ್ನಾಗಿ ಹಾಕುವೆವು.'' ಎಂದು ವಿಶೇಷ ಕೋಲಾಹಲದಿಂದ ನುಡಿಯುತ್ತ, ಆಯುಧಗಳನ್ನು ಝಳಪಿಸುತ್ತಾ ಹೊರಟರು. ಈ ಪ್ರಚಂಡ ರಣೋತ್ಸಾಹವನ್ನು ಕಂಡ ಆ ಯವನ ದೂತನು, ಬದುಕಿದರೆ ಸಾಕೆಂದುಕೊಂಡು ಆ ಗಲಭೆಯಲ್ಲಿ ಎಂತೋ ನುಸುಳಿಪಾರಾಗಿ, ತಮ್ಮ ಸೇನೆಯನ್ನು ಸೇರಿ ಸುಲ್ತಾನನನ್ನು ಕಂಡು ಆ ಪತ್ರದಿಂದ ಉಂಟಾದ ಪರಿಣಾಮವನ್ನು ಯಥಾವತ್ತಾಗಿ ವರ್ಣಿಸಿ ಹೇಳಿದನು. ಉಭಯ ಸೇನೆಗಳೂ ನೂತನ ರಣೋತ್ಸಾಹದಿಂದ ಪುನಃ ಯುದ್ಧಕ್ಕೆ ಸಿದ್ಧವಾದುವು.

ಅಂದಿನ ಆ ರಜಪೂತ ವೀರರ ಯುದ್ಧದ ಪರಿಯನ್ನು ವರ್ಣಿಸಲಸದಳವು. ಒಬ್ಬೊಬ್ಬನೂ ಬಾಲತುಳಿದ ನಾಗಸರ್ಪದಂತೆ ಆವೇಶಪೂರಿತನಾಗಿ ದೇಹದಮೇಲೆ ಸ್ಮೃತಿಯಿಲ್ಲದಂತೆ ಶತ್ರುಸೈನ್ಯದೊಳಕ್ಕೆ ನುಗ್ಗಿ ಒಂದೊಂದು ಖಡ್ಗಹತಿಗೆ ಒಂದೊಂದು ಯವನ ಶಿರವನ್ನು ಚೆಂಡಾಡುತ್ತ, ರೋಷದಿಂದ ಕೈಕಾಲುಗಳನ್ನು ಕತ್ತರಿಸುತ್ತ, ಭರ್ಜಿಯಿಂದಿರಿದು ಕರುಳನ್ನು ಹೊರಕ್ಕೆಳೆಯುತ್ತ, ಚಿಲುಮೆಯಿಂದ ಹೊರಟಂತೆ ಮೃತಸೈನಿಕರ ಕಂಠದಿಂದ ಚಿಲ್ಲನೆ ಹೊರಟ ರಕ್ತವು ಓಕುಳಿಯೋ ಎಂಬಂತೆ ದೇಹದಮೇಲೆ ಸುರಿದ ರಕ್ತದಿಂದ ಸಿಕ್ತರಾಗುತ್ತಿರಲು ಅವರಿಗೆ ಕ್ಷಣಕ್ಷಣಕ್ಕೆ ಮೇಲೆ ಮೇಲೆ ವೀರಾವೇಶವು ಏರುತ್ತಾ ಹೋಯಿತು. ಈಗ ನಿಂತ ಸ್ಥಳದಲ್ಲಿ ಇನ್ನೊಂದು ಕ್ಷಣಕ್ಕೆ ಇಲ್ಲದೆ, ಕುಂಬಾರನ ಚಕ್ರದಂತೆ ಚಲಿಸುತ್ತ ಯುದ್ಧಕ್ಷೇತ್ರದಲ್ಲಿ ರಣಕೇಳಿಯಲ್ಲಿ ಮುಳುಗಿ ಅಂದಿನ ಒಂದು ಯುದ್ಧದಲ್ಲೇ ಐದು ಸಹಸ್ರ ಮಂದಿ ಯವನ ಸೈನಿಕರನ್ನು ರಣದೇವತೆಗೆ ಬಲಿಯನ್ನಾಗಿ ಅರ್ಪಿಸಿದರು. ರಾಜಪುತ್ರರ ವೀರ್ಯವು ಹೆಚ್ಚಿಹೆಚ್ಚಿದಂತೆ, ಅಲ್ಲಾವುದ್ದೀನನೂ ಹೆಚ್ಚು

ಹೆಚ್ಚು ಸೈನಿಕರನ್ನು ಒದಗಿಸಿ, ಮುತ್ತಿಗೆಯನ್ನು ಬಲಪಡಿಸುವನು. ರಣೋತ್ಸಾಹ ಮತ್ತರಾದ ರಜಪೂತರು, ಕಾಡಾನೆಯು ಬೆಳೆದ ಕಬ್ಬಿನ ತೋಟವನ್ನು ಹೊಕ್ಕು ಕಿತ್ತು ತುಳಿದು ಮುರಿದು ಧ್ವಂಸಗೊಳಿಸುವಂತೆ ಶತ್ರುಸೇನೆಯನ್ನು ನಾಶಗೊಳಿಸುವರು. ಹೀಗೆಯೇ ಮುತ್ತಿಗೆಯು ಹದಿನೆಂಟು ತಿಂಗಳ ಕಾಲ ನಡೆಯಿತು. ಉಭಯಸೇನೆಯಲ್ಲಿನ ಮೃತರಾದ ಸೈನಿಕರ ಸಂಖ್ಯೆಗೆ ಎಣಿಕೆ ಇಲ್ಲವಾಯಿತು. ಇತ್ತ ಈ ಪ್ರಜಾಕ್ಷಯವನ್ನು ಕಂಡ ರಾಣಾ ಭೀಮಸಿಂಹನೂ, ಲಕ್ಷ್ಮಣಸಿಂಹನೂ ದಿನ ದಿನಕ್ಕೆ ಕಡಮೆಯಾಗುತ್ತಾ ಸಾಗಿದ ತಮ್ಮ ಸೈನ್ಯಬಲವನ್ನು ಕುರಿತು ಅತಿಶಯ ಚಿಂತಾ ಮಗ್ನರಾಗಿದ್ದರು. ಅತ್ತ ಅಲ್ಲಾವುದ್ದೀನನಾದರೂ, ಇನ್ನು ತನ್ನ ಆಸೆಯನ್ನು ಈಡೇರಿಸಿಕೊಳ್ಳುವ ಮಾರ್ಗ ಕಾಣದೆ, ಪದ್ಮಿನಿಯ ಹಂಬಲನ್ನು ಬಿಡಬೇಕಾಯಿತು. ಆದರೂ ಮನಸ್ಸಿನ ಚಾಪಲ್ಯವನ್ನು ತೀರಿಸಿಕೊಳ್ಳಲು, ಹೇಗಿರುವಳೋ ನೋಡಿಕೊಂಡಾದರೂ ಹೋಗಬೇಕೆಂದು ಬಯಸಿದನು. ಮತ್ತೊಂದು ವೇಳೆ, ಹಾಗೆಯೇ ದೂತನನ್ನು ಕಳುಹಿಸಿ ತನ್ನ ನೀಚಬಯಕೆಯನ್ನು ರಾಣಾರವರಿಗೆ ತಿಳಿಸಿದನು. ಸರೀಕನಾದ ಒಬ್ಬ ವೀರನ ಪತ್ನಿಯನ್ನು ಕಾಮಿಸುವುದು ಅಥವ ನೋಡಬಯಸುವುದು ಸೌಜನ್ಯವೇ, ಗೃಹಸ್ಥ ಧರ್ಮವೇ - ಅಲ್ಲ ಮಾನವ ಧರ್ಮವೇ ಎಂಬುದನ್ನಾದರೂ ಆ ಕಾಮಾಂಧನು ಯೋಚಿಸಲಿಲ್ಲ. ಆ ಮಾತನ್ನು ಕೇಳಿಯೂ ರಾಜಪುತ್ರರು ರೇಗಿಬಿದ್ದರು.—' ಕೂಡದು ಮಹಾರಾಣಿಯ ಪಾದಾಂಗುಷ್ಟದ ಉಗುರಿನ ದರ್ಶನವೂ ಆ ನೀಚನಿಗಾಗಲಾರದು. ಕೂಡದು, ಸೂರ್ಯವಂಶ ಸಂಜಾತರಾದ ಶಸ್ತ್ರ ಜೀವಿಗಳಾದ ನಾವು, ಖಡ್ಗಧಾರೆಗೆ ಬದಲಾಗಿ ನಮ್ಮ ಸ್ತ್ರೀಯರ ರೂಪು ಸೌಂದರ್ಯಗಳನ್ನು ಪ್ರದರ್ಶಿಸಿ ಬದುಕಬೇಕಾಗಿಲ್ಲ. ಕ್ಷತ್ರಿಯರು ಜೀವಗಳ್ಳರಲ್ಲ" ಎಂದು ನುಡಿದರು. ಆಗ ರಾಣಾ ಭೀಮಸಿಂಹನು—' ವೀರರೇ, ಕ್ಷಾತ್ರಧರ್ಮ ಪಾಲನೆಯಲ್ಲಿ ನಿಮಗಿರುವ ಬದ್ಧದೀಕ್ಷೆಯು ಅನಿರ್ವಚನೀಯವಾದುದು. ಪ್ರಶಂಸಾರ್ಹವಾದುದು. ಆದರೆ ಪ್ರಜಾಕ್ಷೇಮವನ್ನು ಬಯಸುವುದಾದರೆ ನಾವು ಮತ್ತೊಂದು ವಿಚಾರವನ್ನೂ ಗಮನಿಸಬೇಕಾಗಿದೆ. ಯವನಸೇನೆಯು ಈಗ ಹದಿನೆಂಟು ತಿಂಗಳಿನಿಂದಲೂ ನಮ್ಮ ಕೋಟೆಯನ್ನು ಮುತ್ತಿದೆ. ಊರಿಗೆ ಹೊರಗಿನಿಂದ ದವಸಧಾನ್ಯಗಳೂ, ಸೌದೆನೊಪ್ಪುಗಳೂ ಬರಲವ

ಕಾಶವಿಲ್ಲದೆ, ಪಟ್ಟಣಿಗರು ಅಹನ್ಯಹನಿ ಕಾಲಕ್ಷೇಪ ಮಾಡುತ್ತಿದ್ದಾರೆ. ಸುತ್ತ ಲಿನ ಗ್ರಾಮ ಭೂಮಿಗಳು ಹಾಳು ಬಿದ್ದುವು. ಅಸಂಖ್ಯ ಪಶುಗಳು ಹುಲ್ಲು ನೀರುಗಳಿಲ್ಲದೆ ಮೃತವಾದುವು. ಅಲ್ಲದೆ ಸೈನ್ಯದಲ್ಲೀ ಸಹಸ್ರಾರು ಮಂದಿ ಯೋಧರು ನಷ್ಟರಾದರು. ಹೀಗೆ ಮುಂದೆಷ್ಟು ಕಾಲ ನಡೆಯಲು ಸಾಧ್ಯ ವೆಂಬುದನ್ನು ಯೋಚಿಸಿರಿ. ನಮ್ಮ ಶತ್ರುವಿಗಾದರೆ, ಸೈನ್ಯ ಸಹಾಯವೂ ದ್ರವ್ಯ ಸಹಾಯವೂ ಹೊರಗಿನಿಂದ ಒದಗಲವಕಾಶವುಂಟು. ನಮಗಾದರೋ ಹೊರಗಿನಿಂದ ಒಂದು ಕಡ್ಡಿಯೂ ಸಹ ಬರಲವಕಾಶವಿಲ್ಲ. ದಿನದಿನಕ್ಕೆ ಕ್ಷಯಿ ಸುತ್ತಿರುವ ನಮ್ಮ ಸೈನ್ಯಕ್ಕೆ ಹೊಸ ಸೇರ್ಪಿಕೆಯಿಲ್ಲವಿದ್ದರೆ ಮುಂದೆ ಪರಿಣಾಮ ವೇನು ! ಆದುದರಿಂದ ನಾವೀಗ ಅವನು ಹೇಳಿ ಕಳುಹಿಸಿರುವ ಸಲಹೆಗೆ ಒಪ್ಪಿ ದಂತಿದ್ದು ಕೆಲಕಾಲ ವಿರಾಮಹೊಂದಿ ಹೆಚ್ಚು ಸಹಾಯಗಳನ್ನು ಒದಗಿಸಿ ಕೊಳ್ಳುವುದು ಮೇಲು. ಇದರಿಂದ ನನ್ನ ಪತ್ನಿಯನ್ನು ಅಥವ ಆಕೆಯ ದರ್ಶನ ವನ್ನು ಅಪೇಕ್ಷಿಸಿರುವ ಆ ನೀಚನೊಂದಿಗೆ ಸಹಾನುಭೂತಿ ತೋರಿಸುತ್ತೇ ನೆಂದು ಯಾರೂ ಭಾವಿಸಬಾರದು. ನಿಮ್ಮೆಲ್ಲರಿಗಿಂತಲೂ ನನಗೆ ಕಡಮೆ ಕ್ಷಾತ್ರವಿದೆಯೆಂದೂ, ನಾನು ರೋಷಶೂನ್ಯನೆಂದೂ ತಿಳಿಯಬಾರದು. ಆದರೂ ಪ್ರಜಾಕ್ಷೇಮವನ್ನೂ ರಾಜಕಾರ್ಯದ ಪ್ರಕೃತ ಸ್ಥಿತಿಯನ್ನೂ ಗಮನಿಸಿ, ನಾವು ಸ್ವಲ್ಪ ಹಿಂದು ಮುಂದು ಯೋಚಿಸಬೇಕಾಗಿದೆ.” ಎಂದು ನುಡಿದನು. ರಾಣಾ ಲಕ್ಷ್ಮಣಸಿಂಹನಾಗಲೀ ಇತರ ಸರದಾರರಾಗಲೀ ಆ ಸಂದರ್ಭದಲ್ಲಿ ‘ಆಗಲಿ ಅಥವ ಬೇಡ’ ಎಂಬ ಯಾವ ಮಾತನ್ನೂ ಹೇಳಲು ತೋರದೆ, ಮೌನವಾಗಿದ್ದರು. ಆ ಮೌನವೇ ಉಪಾಯರಹಿತವಾದುದ ರಿಂದ ಸಮ್ಮತಿಯೆಂದು ಭಾವಿಸಿ, ರಾಣಾ ಭೀಮಸಿಂಹನು ತನ್ನ ರಾಣಿಗೆ ಆ ಸಂಗತಿಯನ್ನು ತಿಳಿಸಿ ಅನುಮತಿ ಪಡೆಯಲಿಕ್ಕಾಗಿ ಅರಮನೆಗೆ ಬಂದನು. ಪದ್ಮಿನೀದೇವಿಯೂ, ತನ್ನ ರೂಪರಾಸಿಯ ಮೂಲವಾಗಿ ತನ್ನ ಪತಿಗೆ ಉಂಟಾದ ಮನಃಕ್ಲೇಶವನ್ನೂ, ರಾಜ್ಯದ ಪ್ರಜೆಗಳಿಗುಂಟಾದ ಅಸಹ್ಯವೇದನೆಯನ್ನೂ ಕೇಳಿ ಕನಿಕರುಗಿದಳು. ಆದರೂ ಆ ದುರುಳ ಯವನನೆದುರಿಗೆ ನಿಂತು ತನ್ನ ಮುಖಾವರಣವನ್ನು ತೆಗೆಯುವುದು ಅಪಾಯಹೇತುವೆಂದೂ, ಕಾಮಾಂ ಧನೂ ಪ್ರಜ್ಞಾವಿಹೀನನೂ ಆದ ಆ ನೀಚನು ಎಂತಹ ದುಷ್ಕಾರ್ಯಕ್ಕೂ ಹೇಸನೆಂದೂ ಯುಕ್ತಿಯುಕ್ತವಾಗಿ ಪತಿಗೆ ಹೇಳಿಕೊಂಡು,–“ಎಂತಾದರೂ

ಪ್ರಜಾಕ್ಷೇಮಕ್ಕಾಗಿ ನನ್ನ ಮುಖವನ್ನು ಆ ಧೂರ್ತನಿಗೆ ತೋರಿಸಲು ಸಮ್ಮ ತಿಸುವೆನು;—ಆದರೆ ಕನ್ನಡಿಯಲ್ಲಿ! ಅವನಿಗೆ ಪ್ರತಿಬಿಂಬವನ್ನು ನೋಡಿ ಹೋಗಲು ಮಾತ್ರ ಅಪೇಕ್ಷೆ ಇದ್ದರೆ ಆ ರೀತಿ ಮಾಡಬಹುದು" ಎಂದಳು. ರಾಣಾನೂ ಆ ವಾರ್ತೆಯು ಸಮಂಜಸವಾದುದೆಂದು ಭಾವಿಸಿ, ಅದನ್ನು ಸಭೆಯಲ್ಲಿ ತಿಳಿಸಿದನು. ಎಲ್ಲರೂ ಆ ಮಾತನ್ನು ಕೇಳಿ ಪದ್ಮಿನೀರಾಣಿಯ ಯುಕ್ತಿಗಾಗಿ ಆಶ್ಚರ್ಯಪಟ್ಟರು. ರಾಣಾ ಲಕ್ಷ್ಮಣಸಿಂಹನೂ "ಮಾತೃಶ್ರೀ ಪದ್ಮಿನೀದೇವಿಯ ಪ್ರತ್ಯಕ್ಷ ದರ್ಶನವು ದೊರೆಯಲಾರದು. ಕನ್ನಡಿಯಲ್ಲಿ ಪ್ರತಿಬಿಂಬವನ್ನು ನೋಡಿಕೊಂಡು ಹೋಗಲು ಸಮ್ಮತವಿದ್ದರೆ ಆಗ ಬಹುದು" ಎಂದು ಪುನಃ ಆ ದೂತನೊಂದಿಗೆ ಬರೆದು ಕಳುಹಿಸಿದನು. ಸುಲ್ತಾನನು ಯೋಚಿಸಿ—'ಅಷ್ಟಾದರೂ ಆಗಲಿ' ಎಂದುಕೊಂಡು 'ಆಗ ಬಹುದು' ಎಂದು ಪ್ರತ್ಯುತ್ತರ ಕಳುಹಿಸಿದನು.



## ಅಧ್ಯಾಯ ೪ "ವೀರ ಬಾಲ ಬಾದಳ"

ದಿಲ್ಲಿಯ ಸುಲ್ತಾನನು ತಮ್ಮ ಪದ್ಮಿನೀದೇವಿಯ ಪ್ರತಿಬಿಂಬವನ್ನಾದರೂ ನೋಡಿ ತನ್ನ ಕಾಮಲಾಲಸೆಯನ್ನು ತೀರಿಸಿಕೊಳ್ಳುವೆನೆಂದು ಹೇಳಿದುದರಿಂದ, ಸರಳ ಸ್ವಭಾವದ ರಾಜಪುತ್ರರು ತಮ್ಮ ಮಹಾರಾಣಿಯ ಸೌಂದರ್ಯದ ಪ್ರಭಾವಕ್ಕಾಗಿ ಹೆಚ್ಚಳಪಟ್ಟುಕೊಂಡರಲ್ಲದೆ ಮಾಯೋಪಾಯ ಪಂಡಿತನಾದ ಅಲ್ಲಾವುದ್ದೀನನು ನಂಬಿಕೆಗರ್ಹನಲ್ಲದವನೆಂಬ ಯೋಚನೆಯು ಅವರ ತಲೆಯನ್ನು ಹೊಗಲಿಲ್ಲ. ಮಹಾದುರುಳನೂ ಪಿತೃಘಾತಕಿಯೂ ಆದ ಆತನು ಊಸರವಳ್ಳಿಯಂತೆ ಕ್ಷಣಕ್ಕೊಂದು ಬಗೆಯ ಸ್ವರೂಪವನ್ನು ಹೊಂದುವ ನೆಂದು ತಿಳಿಯಲಿಲ್ಲ. ಸುಲ್ತಾನನನ್ನು ಎದುರುಗೊಳ್ಳಲಿಕ್ಕೆಂದು ಚಿತ್ತೂರು ಕೋಟೆ ಕೊತ್ತಲುಗಳನ್ನೂ, ನಗರದ ರಾಜಬೀದಿಗಳನ್ನೂ ತಳಿರು ತೋರಣ ಪತಾಕಾದಿಗಳಿಂದ ಸಿಂಗರಿಸಿದರು. ಸಭಾ ಮಂಟಪವನ್ನು ತೋರಣ ಪತಾಕೆಗಳಿಂದ ಅಲಂಕರಿಸಿ ಉಚಿತಾಸನಗಳಿಂದ ಸಿದ್ಧಪಡಿಸಿದರು. ರಾಜಪುತ್ರ

ಸೈನಿಕರು ಯುದ್ಧಕಾರ್ಯವಿಲ್ಲದುದರಿಂದ ಖಡ್ಗಗಳನ್ನು ಒರೆಗಳೊಳಕ್ಕೆ ಸೇರಿಸಿ, ತಮ್ಮಲ್ಲಿಗೆ ಬರುವನಿದ್ದ ಸುಲ್ತಾನನ್ನು ನೋಡುವ ಅಭಿಲಾಷೆಯಿಂದ ಅಲ್ಲಲ್ಲೆ ತಂಗಿ, ತಮ್ಮ ತಮ್ಮ ಮಿತ್ರರೊಂದಿಗೆ ವಿವಿಧ ಮಾತು ಕಥೆಗಳಲ್ಲಿ ತೊಡಗಿದ್ದರು. ಅಷ್ಟರಲ್ಲಿ ಆ ಮೊದಲೇ ಏರ್ಪಟ್ಟಿದ್ದಂತೆ, ಸುಲ್ತಾನನು ತನ್ನ ಇಬ್ಬರು ಸೇವಕರೊಂದಿಗೆ ತನ್ನ ಬಿಡಾರದಿಂದ ಹೊರಟು ಚಿತ್ತೂರು ಕೋಟೆಯ ಕಡೆಗೆ ಪಾದಚಾರಿಯಾಗಿ ನಡೆದು ಬಂದನು. ದಿಲ್ಲಿಯ ಸುಲ್ತಾನನು ಸಾಮಾನ್ಯ ಮನುಷ್ಯನಂತೆ, ಬಹು ಸಾದಾರೀತಿಯ ಬಿಳಿಯ ಉಡುಪನ್ನು ಧರಿಸಿ ರಾಜಚಿಹ್ನೆಗಳೊಂದೂ ಇಲ್ಲದೆ, ಆತ್ಮರಕ್ಷಣೆಗಾಗಿ ಸಹ ಆಯುಧವನ್ನು ತೆಗೆದುಕೊಳ್ಳದೆ, ಧೈರ್ಯದಿಂದ ಆಜನ್ಮಶತ್ರುಗಳಾದ ತಮ್ಮ ಕೋಟೆಯೊಳಕ್ಕೆ ನಡೆದು ಬರುತ್ತಿದ್ದುದು ಸ್ವತಃ ಧೀರರೂ ಸರಳ ಸ್ವಭಾವಿಗಳೂ ನಂಬಿಗಸ್ತರೂ ಆದ ಆ ರಜಪೂತ ವೀರರ ಹೃದಯವನ್ನು ಅತಿಶಯ ಆಕರ್ಷಿಸಿತು. ಅಲ್ಲಾವುದ್ದೀನನು ಕೋಟೆಯ ದ್ವಾರವನ್ನು ಹೊಕ್ಕು ನೇರವಾಗಿ ನಡೆದು ಸಭಾಮಂದಿರದ ಸಮೀಪಕ್ಕೆ ಬಂದನು. ಸಭಾದ್ವಾರದಲ್ಲಿ ಭೀಮಸಿಂಹನೂ ಇತರ ಸರದಾರರೂ ಬಂದು ಆತನನ್ನು ಬರಮಾಡಿಕೊಂಡರು. ಸಭಾಪ್ರವೇಶವಾಯಿತು. ರಾಣಾ ಲಕ್ಷ್ಮಣ ಸಿಂಹನು, ತನ್ನ ಪೀಠದಿಂದ ಎರಡು ಹೆಜ್ಜೆ ಮುಂದಕ್ಕೆ ಬಂದು ಆತನಿಗೆ ಹಸ್ತ ಲಾಘವವನ್ನಿತ್ತು ತನ್ನ ಬಳಿಯಲ್ಲಿ ಸಿದ್ಧಪಡಿಸಿದ್ದ ಪೀಠದಲ್ಲಿ ಕುಳ್ಳಿರಿಸಿದನು. ಉಭಯರಿಗೂ ಕುಶಲಪ್ರಶ್ನೆಗಳಾದುವು. ರಾಣಾನು ತಮ್ಮ ಗೃಹಸಮೀಪಕ್ಕೆ ಬಂದ ಆ ಅತಿಥಿಗೆ ಗಂಧಪುಷ್ಪ ತಾಂಬೂಲಾದಿಗಳನ್ನು ಒಪ್ಪಿಸಿ,-ಶತ್ರುವಾದರೂ, ತಮ್ಮ ಮನೆಯವರೆಗೆ ಬಂದವನನ್ನು ಉಪಚರಿಸುವ ಹಿಂದೂ ನಾಗರಿಕತೆಯ ಪರಮಾವಧಿ ಸೌಜನ್ಯವನ್ನು ಪ್ರದರ್ಶನಮಾಡಿದನು. ಮುಂದೆ ಸುಲ್ತಾನನ ಅಪೇಕ್ಷೆಯಂತೆ ಭೀಮಸಿಂಹನು ತನ್ನ ಅರಮನೆಯ ಕಡೆಗೆ ಆತನನ್ನು ಕರೆದೊಯ್ದನು. ಅಲ್ಲಿ ಪದ್ಮಿನಿಯ ಪ್ರತಿಬಿಂಬವನ್ನು ಸುಲ್ತಾನನಿಗೆ ತೋರಿಸಲು ಈ ಮೊದಲೇ ಸಿದ್ಧತೆಯು ಮಾಡಲ್ಪಟ್ಟಿದ್ದಿತು. ಅರಮನೆಯ ಮಧ್ಯಭಾಗದ ವಿಸ್ತಾರವಾದ ಒಂದು ಸಭಾಂಗಣದಲ್ಲಿ ಪುರುಷ ಪ್ರಮಾಣದ ಎರಡು ನಿಲುಗನ್ನಡಿಗಳನ್ನು ಇರಿಸಿದ್ದರು. ಅವುಗಳಲ್ಲಿ ಒಂದ ರೆದುರಿಗೆ ನಿಂತಾಗ್ಗೆ ಆಕೆಯ ಸ್ವರೂಪವು ಅದರಲ್ಲ ಪ್ರತಿಫಲಿಸಿ, ಅದೇ ಪ್ರತಿ

ಬಿಂಬವೇ ಆದರೆದುರಿಗಿದ್ದ ಮತ್ತೊಂದು ಕನ್ನಡಿಯಲ್ಲೂ ಪ್ರತಿಫಲಿಸುವಂತೆ ಅವುಗಳನ್ನು ಇಟ್ಟಿದ್ದರು. ಆಕೆಯು ನಿಂತಿದ್ದುದನ್ನು ಹೊರಗಿನವರಿಂದ ಮರೆಮಾಡಲು ಮಧ್ಯದಲ್ಲೊಂದು ಕಿನಕಾಪಿನ ಫಡದೆಯು ಬಿಡಲ್ಪಟ್ಟಿತ್ತು. ಅಲ್ಲಾವುದ್ದೀನನು ಒಳಕ್ಕೆ ಪ್ರವೇಶಿಸಿ, ಮೇಲ್ಕಂಡ ಕನ್ನಡಿಗಳಲ್ಲಿ ಎರಡನೆಯದರ ಎದುರಿಗೆ ನಿಂತು, ಪದ್ಮಿನೀ ಮುಖಚಂದ್ರದರ್ಶನಕ್ಕಾಗಿ ಕಾದಿದ್ದನು. ಸ್ವಲ್ಪ ಹೊತ್ತಿನಲ್ಲೇ ಸಾದಾರಣ ವಸ್ತ್ರಭೂಷಣಗಳನ್ನು ಧರಿಸಿಕೊಂಡ ಪದ್ಮಿನೀದೇವಿಯು ಕಾಲುಂಗುರು ಪೈಜಿನಾದಿಗಳು ಘಲ್ಲುಘಲ್ಲೆಂದು ಶಬ್ದಮಾಡುತ್ತಿರಲು ಮೆಲ್ಲಮೆಲ್ಲನೆ ನಡೆದುಬಂದು ಮೊದಲನೆಯ ಕನ್ನಡಿಯ ಎದುರಿಗೆ ನಿಂತು ತನ್ನ ಮುಖವನ್ನು ಆಚ್ಛಾದಿಸಿದ್ದ ಸೂಕ್ಷ್ಮಾವರಣವನ್ನು ತೆಗೆದಳು. ನವಚಂದ್ರಿಕೆಗಾಗಿ ಕಾದಿದ್ದ ಚಕೋರ ಪಕ್ಷಿಯಂತೆ, ಪದ್ಮಿನಿಯರೂಪರಾಶಿಯ ದರ್ಶನಕ್ಕಾಗಿ ಕಾದಿದ್ದ ಅಲ್ಲಾವುದ್ದೀನನ ಕಾತರ ನೇತ್ರಗಳೆದುರಿಗಿದ್ದ ಕನ್ನಡಿಯಲ್ಲಿ ಏಕಾಏಕಿ ಪ್ರತಿಬಿಂಬಿಸಿದ ಆ ಸ್ವರ್ಗೀಯ ಸೌಂದರ್ಯವು ಅವನನ್ನು ಮುಗ್ಧನನ್ನಾಗಿ ಮಾಡಿತು. ರಾಜನಾದ ಅವನ ಅಂತಃಪುರದಲ್ಲಿ ಸುಂದರಸ್ತ್ರೀಯರಿಗೆ ಕೊರತೆಯೆನ್ನಬಹುದೇ! ಆದರೆ ಇಂದು ಪದ್ಮಿನಿಯ ಸೌಂದರ್ಯ ಪ್ರತಿಮೆಯು ಕ್ಷಣಮಾತ್ರವೇ ಅವನ ದೃಷ್ಟಿಗೋಚರವಾದರೂ ಅದರ ಪ್ರತಿಬಿಂಬವು ಅವನ ಹೃದಯ ಭಿತ್ತಿಯಲ್ಲಿ ಸ್ಥಿರವಾಗಿ ಮೂಡಿಹೋಯಿತು.—"ಅಹೋ ಇದೇನು ರೂಪು! ಒಬ್ಬ ಮಾನುಷಸ್ತ್ರೀಗೆ ಇಷ್ಟು ಮಟ್ಟಿನ ರೂಪ ಸಂಪತ್ತು ಇರುವುದು ಸಾಧ್ಯವೇ! ನನ್ನ ಕಣ್ಣುಗಳನ್ನು ನಂಬುವುದೇ ನನಗೆ ಸಾಧ್ಯವಿಲ್ಲದಿದೆಯಲ್ಲ-ಆ ಮುಖದಲ್ಲಿನ ಯಾವುದೊಂದು ಅಂಗವು ಮತ್ತೊಂದಕ್ಕಿಂತ ಸುಂದರವಾಗಿದೆಯೆನ್ನಲಿ! ಇಂತಹ ಸ್ತ್ರೀಯನ್ನು ಪಡೆದು ಆನಂದಿಸದಿದ್ದರೆ ದಿಲ್ಲೀ ಪಾದಷಹನಾದರೂ ನನ್ನ ಜನ್ಮವು ನಿರರ್ಥಕವಲ್ಲವೆ! ಎಷ್ಟು ಸೈನ್ಯವಿದ್ದೇನು! ಎಷ್ಟು ರಾಜ್ಯವಿದ್ದೇನು ಫಲ! ಎಷ್ಟು ಧನ ಕನಕ ರತ್ನ ಮಾಣಿಕ್ಯಾದಿಗಳಿದ್ದರೆ ಏನು ಪ್ರಯೋಜನಕ್ಕಾಗಿ! ಇಂತಹ ಒಂದು ಸ್ತ್ರೀರತ್ನವನ್ನು ಗಳಿಸದಿದ್ದಮೇಲೆ ನನಗಿರುವ ಸಮಸ್ತ ವೈಭವವೂ ವ್ಯರ್ಥವೇ ಸರಿ!" ಎಂದುಕೊಂಡನು.

ಆದರೆ ಮಹಾ ಕಪಟಿಯಾದ ಆ ಸುಲ್ತಾನನು ತನ್ನ ಮನಸ್ಸಿನಲ್ಲುಂಟಾದ ಉದ್ವೇಗವನ್ನು ಯಾವ ಬಗೆಯಿಂದಲೂ ಪ್ರಕಟಗೊಳಿಸಗೆ, ಕೇವಲ ಪರ

ಕೀಯುನೂ, ಪರಧರ್ಮಿಯನೂ, ಅಲ್ಲದೆ ಆವರೆಗೆ ಬದ್ಧಶತ್ರುವೂ ಆಗಿದ್ದ ತನ್ನ ವಿಷಯದಲ್ಲಿ ಅಷ್ಟುಮಟ್ಟಿನ ಪ್ರೀತಿ ನಂಬಿಕೆಗಳನ್ನಿಟ್ಟು ತನ್ನ ಇಚ್ಛಾ ಪೂರ್ತಿ ಮಾಡಿದುದಕ್ಕಾಗಿ ಭೀಮಸಿಂಹನನ್ನೂ ಜೊತೆಗಿದ್ದ ಇತರ ಸರದಾರ ರನ್ನೂ ಮನಃಪೂರ್ವಕವೆಂಬಂತೆ ವಂದಿಸಿದನು. ಭೀಮಸಿಂಹನಲ್ಲಿ ಅಪೂರ್ವ ವ್ಯಕ್ತಿಯನ್ನೂ ಸಲಿಗೆಯನ್ನೂ ವಹಿಸಿ ಆತನ ಹಸ್ತದಲ್ಲಿ ತನ್ನ ಹಸ್ತವನ್ನಿಟ್ಟು ಕೊಂಡು ಲೋಕಾಭಿರಾಮವಾದ ಅನೇಕ ವಿಚಾರಗಳನ್ನು ಮಾತನಾಡುತ್ತಾ ಕೋಟೆಯನ್ನು ದಾಟಿ ತನ್ನ ಬಿಡಾರದ ಕಡೆಗೆ ನಡೆಯಸಾಗಿದನು. ಭೀಮ ಸಿಂಹನೂ ಕೇವಲ ಮನೆಯಿಂದ ಹೊರಕ್ಕೆ—ಅವನನ್ನು ಸಾಗಕಳುಹಿಸಲು ಮಾತ್ರ ಬಂದವನಾದುದರಿಂದ ಯಾವುದೊಂದು ಆಯುಧವನ್ನಾಗಲೀ ಮತ್ತಾವಬಗೆಯ ಆತ್ಮರಕ್ಷಣ ಸಾಮಗ್ರಿಯನ್ನಾಗಲೀ ತೆಗೆದುಕೊಳ್ಳದೆ, ಏಕಾಂಗಿಯಾಗಿ ನಡೆದಿದ್ದನು. ಸುಲ್ತಾನನು ಪ್ರಯತ್ನಪೂರ್ವಕ ಎತ್ತಿದ್ದ ಸಂಭಾಷಣಾವಿಚಾರವು ವಿರಾಮವಿಲ್ಲದೆ ಸಾಗಿತ್ತು. ಅಂತೆಯೇ ಅವ ರೂ ಕೋಟೆಯಿಂದ ಬಹುದೂರ ಸಾಗಿದರು. ಆಗ ರಾಣಾಭೀಮಸಿಂಹ ನು—'ಸುಲ್ತಾನರೇ, ಇನ್ನು ನಾನು ನಿಲ್ಲುತ್ತೇನೆ. ಈಗ ನೀವು ತೋರ್ಪಡಿ ಸಿದ ಸ್ನೇಹಪ್ರೀತಿಗಳು ನಮನಮಗೆ ನಿರಂತರ ಇರಲಿ! ಇಂತಹ ಈ ಪ್ರೇಮ ವೇ ನಿಮ್ಮ ಪಾಲನೆಗೊಳಪಟ್ಟಿರುವ ಹಿಂದೂಪ್ರಜೆಗಳ ವಿಷಯದಲ್ಲೂ ಸದಾ ಇರಲಿ!" ಎಂದು ಮುಂತಾಗಿ ಹಿತೋಕ್ತಿಗಳನ್ನಾಡಿ, ಹಿಂದಿರುಗಿ ಹೊರಡ ಲನುವಾದನು. ಆಗ ಸುಲ್ತಾನನು,-" ಭೀಮಸಿಂಹರೇ, ನಾನು ಏಕಾಂಗಿಯಾ ಗಿ ನಿರಾಯುಧನಾಗಿ ನಿಮ್ಮ ಪಾಳಯದೊಳಕ್ಕೆ ಬಂದಿರಲಿಲ್ಲವೆ! ನೀವಾದರೂ ಹಾಗೆಯೇ ಮಿತ್ರನಾದ ನನ್ನ ಪಾಳಯಕ್ಕೆ ಬರಲು ಶಂಕಿಸುವ ಕಾರಣವೇನು? ಬಹುಕಾಲದಿಂದ ಒಬ್ಬರೊಬ್ಬರ ಸ್ವಭಾವಗಳು ತಿಳಿಯದೆ ವೃಥಾ ದ್ವೇಷ ಭಾವದಿಂದ ಇದ್ದ ನಾವು, ಇಂದು ಪರಸ್ಪರರ ಹೃದಯಗಳನ್ನು ತಿಳಿದು ಮಿತ್ರ ರಾದುದರಿಂದ ಇನ್ನು ಆ ಶಂಕೆಯನ್ನು ಬಿಡಿ" ಎಂದು ಉಪಚರಿಸುತ್ತಾ ಮುಂದೆ ಮುಂದೆ ನಡೆಯಸಾಗಿದನು. ಸ್ವತಃ ಧೀರನಾದುದರಿಂದ ಆ ಸಂದ ರ್ಭದಲ್ಲಿ ಶತ್ರು ಶಿಬಿರವನ್ನು ಹೊಗಲಂಜಿ ಹಿಂದಿರುಗುವುದು ಭೀಮಸಿಂಹ ನಿಗೆ ತನ್ನ ಗೌರವಕ್ಕೆ ಕುಂದಕವೆನಿಸಿತು. ಅಲ್ಲದೆ, ತಮ್ಮನ್ನು ನಂಬಿ ನಿರಾ ಯುಧನಾಗಿ ಅವನು ಬಂದಿದ್ದಾಗ್ಗೆ, ಅವನನ್ನು ನಂಬಿ ತಾನೂ ಹಾಗೆಯೇ

ಹೋಗದಿರುವುದು ಅಷ್ಟು ಸಾಧುವಾದುದಲ್ಲವೆಂಬ ದಾಕ್ಷಿಣ್ಯವೂ ಆತನನ್ನು ಬಾಧಿಸಿತು. ಎಂತೂ ಹಾಗೆ ಹೀಗೆ ನಡೆದರು. ಸುಲ್ತಾನನ ಪಾಳಯವೂ ಸಿಕ್ಕಿತು. ಅಲ್ಲಾವುದ್ದೀನನು, ಭೀಮಸಿಂಹನೊಂದಿಗೆ ನಡೆದು ಭವ್ಯವಾದ ಒಂದು ಡೇರೆಯಲ್ಲಿ ಕುಳಿತನು;—ಮತ್ತು ಒಡನೆ ಎದ್ದು ಲಘು ಶಂಕೆಗೆಂಬ ನೆವವಿಟ್ಟು ಹೊರಕ್ಕೆ ಬಂದು, ಒಡನೆ ಭೀಮಸಿಂಹನಿದ್ದ ಆ ಡೇರೆಗೆ ಬಲವಾದ ಕಾವಲಟ್ಟನು. ಅಷ್ಟುಮಾತ್ರವಲ್ಲ-ಬಲವಾದ ಕೆಲಮಂದಿ ಅಫ್ಘಾನ ಸೈನಿಕರು ಒಳನುಗ್ಗಿ, ಏಕಾಂಗಿಯಾಗಿ ಕುಳಿತಿದ್ದ ಭೀಮಸಿಂಹನ ಕೈಕಾಲುಗಳನ್ನು ಕಟ್ಟಿ, ಅದೇ ಡೇರೆಯಲ್ಲೇ ಅವನನ್ನು ಸುಲ್ತಾನನ ಬಂದಿಯನ್ನಾಗಿಯೂ ಮಾಡಿದರು.

ರಾಣಾ ಭೀಮಸಿಂಹನಿಗೆ ಆಗ ತನ್ನ ಬುದ್ಧಿಹೀನತನವನ್ನು ಕುರಿತು ವಿಚಾರವುಂಟಾಯಿತು. ಆ ದುರುಳ ಯವನನ ಸವಿಮಾತುಗಳನ್ನು ನಂಬಿ ಅಷ್ಟುದೂರ ಏಕಾಂಗಿಯಾಗಿ ಬರಬಾರದಿತ್ತು ಎಂದುಕೊಂಡನು. ಆದರೆ ಈಗ ಉಪಾಯವಿಲ್ಲದಿರಲು, ಮುಂದೆ ಏನುಮಾಡಲೂ ಮಾರ್ಗತೋರದೆ, ಅವರ ಪಾಳಯದಲ್ಲಿ ಬಂದಿಯಾಗಿ ಬಿದ್ದಿದ್ದನು. ಹೀಗೆ ವಿಶ್ವಾಸಘಾತುಕತನದಿಂದ ರಾಣಾಭೀಮಸಿಂಹನನ್ನು ಸೆರೆಗೊಳಿಸಿದ ಅಲ್ಲಾವುದ್ದೀನನು ರಾಣಾ ಲಕ್ಷ್ಮಣಸಿಂಹನಿಗೆ ಒಂದು ಪತ್ರ ಬರೆದು ಕಳುಹಿಸಿದನು. ಹಿಂದಿನಂತೆಯೇ ಒಬ್ಬ ಯವನದೂತನು ಆ ಪತ್ರವನ್ನೊಯ್ದು ರಾಣಾನಲ್ಲಿಗೆ ತಲ್ಪಿಸಿದನು. ತಮ್ಮ ರಾಣಾಭೀಮಸಿಂಹನು ಶತ್ರುಪಾಳಯಕ್ಕೆ ಹೊರಟು ನಡೆದು ಎಷ್ಟು ಹೊತ್ತಾದರೂ ಹಿಂದಿರುಗಿ ಬಾರದೆ, ಪ್ರತಿಯಾಗಿ ಒಬ್ಬ ಯವನದೂತನು ಬಂದುದನ್ನು ಕಂಡು ಎಲ್ಲರ ಮನಸ್ಸೂ ಕಳವಳಗೊಂಡಿದ್ದಿತು. ರಾಣಾ ಲಕ್ಷ್ಮಣಸಿಂಹನೂ, ಆತುರದಿಂದ ಆ ಪತ್ರ ವಿಚಾರವೇನೆಂದು ತಿಳಿಯುವುದಕ್ಕಾಗಿ ತಾನೇ ಬಿಚ್ಚಿ ಓದಿಕೊಂಡನು. ಅದರಲ್ಲಿ-

“ ಚಿತ್ತೂರಿನ ರಾಣಾ ಲಕ್ಷ್ಮಣಸಿಂಹರಿಗೆ

ನಿಮ್ಮ ಪಿತೃವ್ಯರಾದ ರಾಣಾ ಭೀಮಸಿಂಹರು ನಮ್ಮ ಪಾಳಯದಲ್ಲಿ ಬಂದಿಯಾಗಿದ್ದಾರೆ. ನೀವೀಗ ಪ್ರತಿಬಿಂಬದಲ್ಲಿ ನನಗೆ ತೋರಿಸಿದ ಪದ್ಮಿನೀ ಸಿದ್ಧಿಯನ್ನು ನನ್ನಲ್ಲಿಗೆ ಒಪ್ಪಿಸುವುದಾದರೆ ಅವರ ಬಿಡುಗಡೆಯಾಗುವುದು. ಈ ನನ್ನ

ಇಷ್ಟಕ್ಕೆ ರಾಜಪುತ್ರರು ವಿರುದ್ಧವಾಗಿ ನಡೆಯುವರೆಂದು ತಿಳಿದೊಡನೆಯೇ ಭೀಮಸಿಂಹರ ಕತ್ತು ಕತ್ತಿಯ ಬಾಯಲ್ಲಿರುವುದೆಂದು ತಿಳಿಯಿರಿ. ಎರಡು ದಿನಗಳ ಅವಧಿ ಕೊಡುವೆನು. ಅಷ್ಟರಲ್ಲಿ ಪದ್ಮಿನಿಯು ನಮ್ಮ ಡೇರೆಗೆ ಬಾರದಿದ್ದರೆ, ಭೀಮಸಿಂಹರನ್ನು ಕೊಂದು ಚಿತ್ತೂರಿನ ನಾಶಕ್ಕಾಗಿ ದಂಡೆತ್ತುವೆನು. ಇದು ನಿಶ್ಚಯ.

ಇತಿ ನಿಮ್ಮ ಅಲ್ಲಾವುದ್ದೀನ್''

ಎಂದಿತ್ತು. ಈ ಪತ್ರವನ್ನು ಓದಿನೋಡಿ ರಾಣಾ ಲಕ್ಷ್ಮಣಸಿಂಹನು ಹತಾಶನಂತಾದನು. ಆತನ ಬಲವೇ ಕುಂದಿಹೋದಂತೆ ತೋರಿತು. ತನ್ನ ಬಲಭುಜದಂತಿದ್ದು, ಸಕಲಾಪತ್ತುಗಳಿಗೂ ತಲೆಗೊಟ್ಟು ತನ್ನನ್ನು ಕಣ್ಣರೆಪ್ಪೆಯಂತೆ ರಕ್ಷಿಸುತ್ತಿದ್ದ ರಾಣಾಭೀಮಸಿಂಹನು ಸುಲ್ತಾನನ ಕಾಪಟ್ಯಕ್ಕೊಳಗಾಗಿ ಬಂದಿಯಾಗಿ ಬಿದ್ದಿರುವನು; ಆತನನ್ನು ಬಿಡುಗಡೆ ಮಾಡಿಸಲು ಚಿತ್ತೂರಿಗೂ ರಾಜಪುತ್ರ ಕುಲಕ್ಕೂ ಮಾತೃ ಸ್ವರೂಪಿಣಿಯಾದ ಪದ್ಮಿನೀದೇವಿಯನ್ನು ಯವನನಿಗೊಪ್ಪಿಸಬೇಕೆಂಬುದು ನಿಬಂಧನ! ಸಾವಕಾಶವಾಗಿ ಯೋಚಿಸಲೂ ವೇಳೆಯಿಲ್ಲ. ಎರಡು ದಿನಗಳಾದುವೆಂದರೆ ಆ ನೀಚ ಯವನನು, ನಿಷ್ಕರುಣಿಯಾಗಿ ಭೀಮಸಿಂಹನನ್ನು ಕೊಲ್ಲಿಸುವನಿರುವನು! ಯಾವ ಮಾರ್ಗವನ್ನು ಅನುಸರಿಸುವುದು? ಒಂದು ಕಡೆ ಭಾವಿ, ಮತ್ತೊಂದೆಡೆ ಕೆರೆ. ಒಂದು ಕಡೆಗೆ ತಿರುಗಿದರೆ ಹುಲಿ, ಮತ್ತೊಂದುಕಡೆ ಮೊಸಳೆಯು ಬಾಯ್ದೆರೆದಿರುವುದು. ಇಂತಹ ಸಂದಿಗ್ಧ ಸ್ಥಿತಿಯಲ್ಲಿ ಸಿಕ್ಕು ಆತನ ಬುದ್ಧಿಯು ಶುದ್ಧವಾಗಿ ಲೋಪವಾದಂತಾಯಿತು. ತಮ್ಮ ಪ್ರಭು ಭೀಮಸಿಂಹನು ಬಂದಿಯಾಗಿದ್ದಾನೆಂಬ ವಾರ್ತೆಯು ಕ್ಷಣಮಾತ್ರದಲ್ಲಿ ಚಿತ್ತೂರಿನಲ್ಲೆಲ್ಲ ವ್ಯಾಪಿಸಿಹೋಯಿತು. ರಾಜಪುತ್ರ ವೀರರೆಲ್ಲರೂ ಕಟಕಟನೆಂದು ಹಲ್ಲಡಿಯುತ್ತ, ಅವಡುಗಳನ್ನು ಕಚ್ಚುತ್ತ, ಈಕ್ಷಣವೇ ಹೊರನುಗ್ಗಿ ಯವನರನ್ನು ಸೀಳಿ ಆತನನ್ನು ಹಿಂದಕ್ಕೆ ಕರೆತರುವೆವೆಂದು ಬೊಬ್ಬಿರಿದರು. ಆದರೆ. ಆತನ ಬಿಡುಗಡೆಗೆ ಅಲ್ಲಾವುದ್ದೀನನು ಕಳುಹಿಸಿದ್ದ ಪತ್ರದ ವಿಚಾರವನ್ನು ತಿಳಿದೊಡನೆಯೇ ಎಲ್ಲರ ಮುಖವೂ ಬತ್ತಿ ಕಳೆಗುಂದಿತು. ಶೌರ್ಯ ಪ್ರತಾಪಗಳುಡುಗಿ, ಮುಂದೇನು ಮಾಡಬೇಕೆಂದು ತೋರದಾಯಿತು. ಮಹಾ ಯೋಧರೆಲ್ಲರೂ ನಿರ್ವಿಣ್ಣರಾಗಿ-ನಿಸ್ಸಹಾಯರಾಗಿ ಕುಳಿತರು.

ಚಿತ್ತೂರಿನ ಪ್ರಾಣನೂ, ಪದ್ಮಿನಿಯ ಪ್ರಾಣಾಧಿಕನೂ ಆದ ರಾಣಾ ಭೀಮಸಿಂಹನ ಬಂಧನದ ವಿಚಾರವು ಅಂತಃಪುರವನ್ನೂ ಪ್ರವೇಶಿಸದಿರಲಿಲ್ಲ. ತನ್ನ ಭರ್ತನು ಆ ಯವನನ ಮೋಸಕ್ಕೆ ಒಳಪಟ್ಟು ಬಂದಿಯಾದುದಕ್ಕಾಗಿ ಆ ಪತಿವ್ರತೆಯು ಬಹು ಮರುಗಿದಳು.—ಸಂಕಟಪಟ್ಟಳು. ಆದರೆ, ಹಾಗೆ ವ್ಯಸನಪಡುತ್ತಾ ಕುಳಿತುಕೊಳ್ಳಲು ಸಮಯವಿರಲಿಲ್ಲ. ಎರಡು ದಿನಗಳು ಕಳೆದ ತರುವಾಯ ನಿಷ್ಕರುಣಿಯಾದ ಆ ಯವನನು, ತನ್ನ ಪತಿಯನ್ನು ವಧಿಸುವನೆಂಬ ವಿಷಯದಲ್ಲಿ ಆಕೆಗೆ ಸಂದೇಹವಿರಲಿಲ್ಲ. ಆದುದರಿಂದ ತನ್ನ ಪತಿಯನ್ನು ಬಿಡುಗಡೆಮಾಡಿಸುವುದಕ್ಕಾಗಿ ಒಂದು ಉಪಾಯವನ್ನು ಯೋಚಿಸಿ ಕಾರ್ಯಕ್ರಮವನ್ನು ನಿರ್ಧರಿಸಿದಳು. ಆ ವೇಳೆಗೆ ಅಕಸ್ಮಾತ್ತಾಗಿ ಆಕೆಯ ತಮ್ಮ ಗೋರಾಸಿಂಹನೆಂಬಾತನೂ, ಆಕೆಯ ಅಣ್ಣನಮಗ ಬಾದಳನೆಂಬ ಬಾಲಕನೂ ಕಾರ್ಯಾಂತರದಿಂದ ಚಿತ್ತೂರಿಗೆ ಬಂದರು. ಪದ್ಮಿನಿಯು ಭೀಮಸಿಂಹನನ್ನು ಬಂಧವಿಮುಕ್ತನನ್ನಾಗಿಮಾಡಲು ಯೋಚಿಸಿದ ಮಾರ್ಗವು ಅವರಿಗೂ ಸೂಕ್ತವೆಂದು ತೋರಿತು. ರಾಣಿಯು—“ ಭೀಮಸಿಂಹರನ್ನು ಬಿಡುಗಡೆಮಾಡಿ ಕಳುಹಿಸುವುದಾದರೆ, ನಾನು ಸುಲ್ತಾನರ ಪಾಳಯಕ್ಕೆ ಬರಲು ಸಿದ್ಧಳಿದ್ದೇನೆ. ಆದರೆ, ಸುಲ್ತಾನರ ಗೌರವಕ್ಕೂ ನನ್ನ ಗೌರವಕ್ಕೂ ತಕ್ಕಂತೆ ನನ್ನ ಮತ್ತು ನನ್ನ ಸಖಿಯರ—ದಾದಿಯರ ಪಾಲಕಿಗಳಿಗೆ ಸಕಲ ವಿಧವಾದ ಸುರಕ್ಷಣೆಯೂ ಏರ್ಪಾಡಾಗಬೇಕು. ಆವಿಷಯದಲ್ಲಿ ಯವನ ಸೇನೆಯವರು ಮರ್ಯಾದೆಬಿಟ್ಟು ನಡೆದುಕೊಳ್ಳದಂತೆ ಆಜ್ಞಾಪಿಸಬೇಕು” ಎಂದು ಹೇಳಿಕಳುಹಿಸಿದಳು.

ತಾನು ಒಡ್ಡಿದ ಬಲೆಗೆ ರಾಜಪುತ್ರರು ತಗುಲಿಕೊಂಡುದಕ್ಕಾಗಿಯೂ ತನ್ಮೂಲಕ ಪದ್ಮಿನಿಯು ತನ್ನ ಪಾಳಯಕ್ಕೆ ಬರುವೆನೆಂದು ಹೇಳಿಕಳುಹಿಸಿದುದನ್ನು ಕೇಳಿಯೂ ಅಲ್ಲಾವುದ್ದೀನನು ಪರಮಾನಂದಪಟ್ಟು ತನ್ನನ್ನು ತಾನೇ ಮರೆತನು. ರಾಣೀ ಪದ್ಮಿನಿಯ ಪಾಲಕಿಯೂ ಆಕೆಯ ಪರಿವಾರವೂ ಬರುವ ಮಾರ್ಗದಲ್ಲಿ ವೃದ್ಧ ಸೇವಕರ ಮತ್ತು ಅಂತಃಪುರದ ಊಳಿಗಕ್ಕಿರುವ ನಪುಂಸಕರ ಪಡೆಯನ್ನು ಕಾವಲಿಗಾಗಿ ಇಟ್ಟನು. ಎಲ್ಲರೂ ಮಹಾರಾಣಿಯನ್ನು ಅತ್ಯಧಿಕ ಮರ್ಯಾದೆಯಿಂದ ಕಾಣಬೇಕೆಂದು ಮುಂತಾಗಿ ಆಜ್ಞಾಪಿಸಿ, ಆ ಪದ್ಮಿನಿಯು ಎಷ್ಟುಹೊತ್ತಿಗೆ ಬಂದಾಳು: ಎಷ್ಟು ಹೊತ್ತಿಗೆ ಆಕೆಯ

ಸುಂದರಮೂರ್ತಿಯ ಪ್ರತ್ಯಕ್ಷ ದರ್ಶನವಾದೀತು, ಎಷ್ಟು ಹೊತ್ತಿಗೆ ಆಕೆ ಯ ಸಮಾಗಮವಾದೀತು ಎಂದು ಮುಂತಾಗಿ ಕ್ಷಣಗಳನ್ನು ವರ್ಷಗಳೋ ಎಂಬಂತೆ ಬಹು ಕಷ್ಟನಿಂದ ಕಳೆಯುತ್ತಾ ಆ ಕಾಮುಕನು ನಿದ್ರಾಹಾರಗಳು ರುಚಿಸದೆ ತನ್ನ ಡೇರೆಯಲ್ಲಿ ಕುಳಿತಿದ್ದನು.

ಇತ್ತ ಚಿತ್ತೂರಿನಲ್ಲಿ ಪದ್ಮಿನಿಯು ಯವನ ಪಾಳಯಕ್ಕೆ ಹೊರಡಲು ಸಿದ್ಧ ಪಡಿಸಿಕೊಳ್ಳತೊಡಗಿದಳು. ರಾಜಪುತ್ರರು ವಿಶ್ವಾಸಘಾತುಕನಾದ ಆ ಯವನ ರಾಜನಿಗೆ ತಕ್ಕ ಪ್ರತೀಕಾರ ಮಾಡಬೇಕೆಂದು ಕೃತಸಂಕಲ್ಪರಾದರು. ತಮ್ಮ ಪ್ರಭುಗಳ ಮಾನ ಪ್ರಾಣಗಳನ್ನು ರಕ್ಷಿಸುವುದರಲ್ಲಿ ಅವರಲ್ಲೊಬ್ಬೊಬ್ಬನೂ ತನ್ನ ಪ್ರಾಣವನ್ನು ತೃಣವೆಂದು ಎಣಿಸಿದನು. ಯವನ ಪಾಳಯಕ್ಕೆ ಹೊರ ಡಲು ಏಳುನೂರು ಪಾಲಕಿಗಳು ಸಿದ್ಧವಾದುವು. ಅವುಗಳಲ್ಲೊಂದೊಂದ ರಲ್ಲೂ ಚಿತ್ತೂರಿನ ಮೂಲಬಲದ ಒಬ್ಬೊಬ್ಬ ಯುದ್ಧವೀರನು ಸಕಲಾಯುಧ ಸಜ್ಜಿತನಾಗಿ ಕುಳಿತನು. ಅದನ್ನು ಹೊರಲು ನಾಲ್ಕು ನಾಲ್ಕು ಮಂದಿ ಭೋಯಿಗಳೂ ಸಿದ್ಧರಾದರು. ಅವರೂ ಕ್ಷತ್ರಿಯ ವೀರರೇ! ಅವರಿಗೆ ಆವಶ್ಯಕವಾದ ಆಯುಧಗಳೂ ಆ ಪಾಲಕಿಯಲ್ಲಿಡಲ್ಪಟ್ಟಿದ್ದುವು. ಪಾಲಕಿಯನ್ನು ಸಂಪೂರ್ಣವಾಗಿ ಮರೆಮಾಡುವಂತೆ ಕಿನಕಾಪಿನ ಬುರಕೆಗಳು ಹೊದಿಸಲ್ಪ ಟ್ಟುವು. ಹೀಗೆ ಸರ್ವ ಸಿದ್ಧತೆಯೂ ಆಗಲಾಗಿ, ಆ ಪರಿವಾರವು ಚಿತ್ತೂರನ್ನು ಬಿಟ್ಟು ಯವನ ಸೇನಾಭಿಮುಖವಾಗಿ ಪ್ರಯಾಣ ಹೊರಟಿತು.

ಅಲ್ಲಾವುದ್ದೀನನು ಆ ರಾಜಪುತ್ರ ಪರಿವಾರವನ್ನು, ನೋಡಿ, ಅದ ರೊಂದಿಗೆ ತನ್ನ ಹೃದಯಾನಂದಿನಿಯಾದ ಪದ್ಮಿನೀ ರಾಣಿಯು, ತನ್ನ ಅಂತಃ ಪುರವನ್ನು ಶೋಭೆಗೊಳಿಸಲಿಕ್ಕಾಗಿ ಬರುತ್ತಿರುವಳೆಂದು ಭಾವಿಸಿ ಉಬ್ಬಿ ಹೋದನು. ಆ ಪರಿವಾರದ ಮುಂಭಾಗದಲ್ಲಿ ಗೋರಾಸಿಂಹನು ಒಂದು ಚಪಲ ಹಯವನ್ನೇರಿ ತೀಕ್ಷ್ಣವಾದ ಖಡ್ಗಧಾರಿಯಾಗಿ ಪ್ರಯಾಣ ಮಾಡಿದ್ದನು. ಬಿಚ್ಚುಕತ್ತಿ ಭರ್ಚಿಗಳನ್ನು ಹಿಡಿದ ರಾಜಪುತ್ರಯೋಧರು, ಮಹಾರಾಣಿಯ ಅಂಗರಕ್ಷಣೆಗೆಂದು ಆ ಪರಿವಾರದೊಂದಿಗೆ ಸಾಗಿದ್ದರು. ಅಲ್ಲಾವುದ್ದೀನನು ಅಷ್ಟು ಪಾಲಕಿಗಳಲ್ಲೂ ಇರುವವರು ಯಾರು ಎಂದು ಪ್ರಶ್ನಿಸಿದನು. ಗೋರಾ ಸಿಂಹನು—" ಅವರೆಲ್ಲರೂ ಪದ್ಮಿನೀದೇವಿಯ ಅಂತರಂಗದ ಊಳಿಗದ ದಾಸಿಯ ರು; ಮತ್ತು ಸಖಿಯರು. ಅವರೆಲ್ಲರೂ ಆಕೆಯ ಅಗಲಿಕೆಯನ್ನು ಸಹಿಸಲಾರದೆ

ಜೊತೆಗೇ ಬಂದಿದ್ದಾರೆ" ಎಂದನು. ಪ್ರತ್ಯುತ್ತರಕ್ಕೆ ಅಲ್ಲಾವುದ್ದೀನನು ಶಂಕಿಸ ಲಿಲ್ಲ. ಸುಲ್ತಾನನ ಪಾಳಯದ ಸಮೀಪಕ್ಕೆ ಬಂದೊಡನೆಯೇ, ಗೋರಾ ಸಿಂಹನು, ಆ ಏಳುನೂರು ಪಾಲಕಿಗಳಲ್ಲೂ ಅತಿಶಯ ಸುಂದರವಾದುದೂ ಬಂಗಾರದ ಜರೀಕೆಲಸದ ಬುರಕೆಯಿಂದ ಶೋಭಿಸುತ್ತಿದ್ದುದೂ ಆದ, ಪದ್ಮಿನಿಯು ಕುಳಿತಿದ್ದುದೆಂದು ಬೋಧೆಯಾಗುತ್ತಿದ್ದ ಪಾಲಕಿಯ ಪಕ್ಕಕ್ಕೆ ಬಂದು ಒಳಗಿದ್ದಾಕೆಯನ್ನು ಉದ್ದೇಶಿಸಿ ಹೇಳುವವನಂತೆ' ಸಹೋದರೀ ಸುಲ್ತಾನರ ಪಾಳಯಕ್ಕೆ ಬಂದಿದ್ದೇವೆ! ಮುಂದೆ ಮಾಡಬೇಕಾದುದೇನು." ಎಂದು ಪ್ರಶ್ನಿಸಿ, ಒಳಗಿನಿಂದ ಬಂದ ಪ್ರತ್ಯುತ್ತರವನ್ನು ಗ್ರಹಿಸಿದವನಂತೆ ಸುಲ್ತಾನನ ಸಮೀಪಕ್ಕೆ ಹೋಗಿ— ' ಸುಲ್ತಾನರೇ, ನನ್ನ ಸಹೋದರಿ ಪದ್ಮಿನೀ ದೇವಿಯು ಕೊನೆಯದಾಗಿ ಒಂದು ಸಾರಿ ತನ್ನ ಭರ್ತನನ್ನು ನೋಡಿ, ಆತನೊಂದಿಗೆ ಸಂಭಾಷಿಸಲು ಬಯಸುತ್ತಾಳೆ. ಅದಕ್ಕಾಗಿ ತಮ್ಮ ಅನುಜ್ಞೆಯನ್ನು ಪಡೆಯ ಬೇಕೆಂದು ನನಗೆ ಆಜ್ಞಾಪಿಸಿದ್ದಾಳೆ. ಇಲ್ಲಿಂದ ಹೊರಟು ದಿಲ್ಲಿಯಲ್ಲಿನ ತಮ್ಮ ಅಂತಃಪುರವನ್ನು ಸೇರಿದ ತರುವಾಯ ಪುನಃ ಚಿತ್ತೂರಿಗೆ ಹಿಂದಿರುಗುವ ಆಶೋತ್ತರವಿಲ್ಲವಲ್ಲವೆ! ಆದುದರಿಂದ ತನ್ನ ಈಯೊಂದು ಬಿನ್ನಹವನ್ನು ದಯೆಪಾಲಿಸಬೇಕೆಂದು ಕೇಳಿಕೊಳ್ಳುತ್ತಾಳೆ" ಎಂದನು.

ತಾನು ಯಾರನ್ನು ತನ್ನ ಪ್ರೇಯಸಿಯೆಂದು ಭಾವಿಸಿದ್ದನೋ ಆಕೆಯ ಅಷ್ಟು ಸ್ವಲ್ಪ ಪ್ರಾರ್ಥನೆಯನ್ನು ನಡೆಯಿಸಿಕೊಡಲಾರದ ಅಂತಹ ಅರಸಿಕನೇ ಸುಲ್ತಾನನು? ಒಡನೆಯೇ ಆ ಪಾಲಕಿಯು ಭೀಮಸಿಂಹನು ಬಂದಿಯಾಗಿದ್ದ ಡೇರೆಯೊಳಕ್ಕೆ ಒಯ್ಯಲ್ಪಟ್ಟಿತು. ಅಲ್ಲಿದ್ದ ಸುಲ್ತಾನನ ಸೇವಕರೆಲ್ಲರೂ ಆ ದಂಪತಿ ಗಳ ಅಂತ್ಯಕಾಲದ ಪ್ರೇಮಾನುಬಂಧ ಸಂಭಾಷಣೆಗಳಿಗೆ ವಿಘ್ನವುಂಟಾಗ ಬಾರದೆಂದು ಹೊರಕ್ಕೆ ನಡೆದರು. ಡೇರೆಯ ಬಾಗಿಲುಗಳ ತೆರೆಗಳೆಲ್ಲವೂ ಮುಚ್ಚಲ್ಪಟ್ಟುವು. ರಾಣಾನು ತನ್ನ ಪತ್ನಿ ಪದ್ಮಿನಿಯೇ ಬಂದಿದ್ದಾಳೆಂದು ಭ್ರಮಿಸಿದ್ದನು. ಆದರೆ ಆ ಪಾಲಕಿಯಿಂದ ವೀರಬಾಲಕ ಬಾದಳನು ಹೊರಕ್ಕೆ ಬಂದು, ಶೀಘ್ರದಲ್ಲೇ ರಾಣನ ಕೈ ಕಾಲುಗಳಿಗೆ ಬಿಗಿಸಿದ್ದ ಸಂಕಲೆ ಗಳನ್ನೆಲ್ಲ ತುಂಡಿಸಿದನು. ಭೀಮಸಿಂಹನು ಆ ವೀರ ಬಾಲಕನ ಚಪಲತನ ವನ್ನು ಕಂಡು ಪರಮಾನಂದಪಟ್ಟು, ಪದ್ಮಿನಿಯ ವೃತ್ತಾಂತವೇನೆಂದು ಪ್ರಶ್ನಿಸಿದನು. ಬಾದಳನು, ಆಕೆಯ ಕ್ಷೇಮ ವಾರ್ತೆಯನ್ನೂ. ತಮ್ಮ ಸಿದ್ಧ

ಶೆಯನ್ನೂ ತಿಳಿಸಿ ಡೇರೆಯ ಹೊರಗಿದ್ದ ದಿವ್ಯಾಶ್ವವನ್ನೇರಿ ಚಿತ್ತೂರು ಕಡೆಗೆ ಪ್ರಯಾಣಮಾಡಿರೆಂದು ವಿಜ್ಞಾಪಿಸಿಕೊಂಡನು. ಭೀಮಸಿಂಹನು ನಿಸ್ಸಹಾಯಕನಾದ ಅವನನ್ನು ಅಲ್ಲೇ ಬಿಟ್ಟು ಹೋಗಲು ಶಂಕಿಸುತ್ತಿರಲು ಬಾದಳನು ಪಾಲಕಿಯಲ್ಲಿರುವವರೂ, ಪಾಲಕಿಯನ್ನು ಹೊತ್ತ ಬೋಯಿಗಳೂ ಎಲ್ಲರೂ ಯುದ್ಧವೀರರೇ ಎಂಬ ವಾರ್ತೆಯನ್ನು ತಿಳಿಸಲು, ಭೀಮಸಿಂಹನು ಕಡು ಸಂತೋಷಪಟ್ಟು ಡೇರೆಯಹೊರಕ್ಕೆ ಬಂದು ಅಲ್ಲೇ ಇದ್ದ ದಿವ್ಯಾಶ್ವವನ್ನೇರಿ, ಕ್ಷಣಮಾತ್ರದಲ್ಲಿ ಸುಲ್ತಾನನ ಪಾಳಯವನ್ನು ಬಿಟ್ಟು ವಾಯುವೇಗದಿಂದ ಚಿತ್ತೂರು ಕೋಟೆಯ ಕಡೆಗೆ ಕುದುರೆಯನ್ನು ಓಡಿಸಿದನು.

ಸೆರೆಯಲ್ಲಿದ್ದ ರಾಣಾನು ತಪ್ಪಿಸಿಕೊಂಡು ಹೋದನೆಂಬ ವಾರ್ತೆಯು ಕ್ಷಣದಲ್ಲೇ ಸುಲ್ತಾನನಿಗೆ ವರದಿಯಾಯಿತು. ಅದನ್ನು ಕೇಳಿದ ಅವನು ಉರಿದೆದ್ದನು. ಆದರೆ ಸಾವಕಾಶಮಾಡಲು ವೇಳೆಯಿಲ್ಲ. ಭೀಮಸಿಂಹನನ್ನು ಸೆರೆಯಿಟ್ಟಿದ್ದ ಡೇರೆಯೊಳಕ್ಕೆ-ತನ್ನಲ್ಲಿಗೆ ಬಂದಿದ್ದ ಪದ್ಮಿನಿಯನ್ನಾದರೂ ನೋಡೋಣವೆಂದು ಅಲ್ಲಿಗೆ ಬಂದನು. ಆವೇಳೆಗೆ ಸರದಾರ ಗೋರಾಸಿಂಹನ ಮುಂದಾಳ್ತನದಿಂದ ಸಕಲ ರಾಜಪುತ್ರ ಸೈನಿಕರೂ ತಮ್ಮ ತಮ್ಮ ಆಯುಧಗಳನ್ನು ಹಿಡಿದು ಯವನರನ್ನು ಎದುರಿಸಲು ಸಿದ್ಧರಾಗಿ ನಿಂತಿದ್ದರು. ಅಲ್ಲಾವುದ್ದೀನನು, ರಾಜಪುತ್ರರು ತಾನು ಮಾಡಿದ ವಂಚನೆಗೆ, ತನ್ನ ಮೋರೆಗೆ ಸುಣ್ಣದ ಬೊಟ್ಟನ್ನಿಟ್ಟಂತೆ ಮಾಡಿದ ಪ್ರತಿವಂಚನೆಯಿಂದ, ಎದುರಿಸಲ್ಪಟ್ಟ ಈದ ಹೆಬ್ಬುಲಿಯಂತೆ ರೋಷಗೊಂಡು, ಕಣ್ಣುಗಳನ್ನು ಕೆಂಪುಮಾಡಿಕೊಂಡು ಕಟಕಟನೆಂದು ಹಲ್ಕಡಿಯುತ್ತ, ಆ ರಾಜಪುತ್ರ ಸೈನಿಕರನ್ನೆಲ್ಲ ಸಂಹರಿಸಿರೆಂದು ತನ್ನ ಸೇನೆಯವರಿಗೆ ಆಜ್ಞಾಪಿಸಿದನು. ಒಡನೆ ಯವನ ರಾಜಪುತ್ರ ಸೈನಿಕರಿಗೊಂದು ಭಯಂಕರ ಕದನವು ಕೈಗಟ್ಟಿತು. ಪರಸ್ಪರರ ಆಯುಧಗಳು ಒಂದಕ್ಕೊಂದು ತಗುಲಿ ಖಣಿಲು ಖಣಿಲೆಂದು ಶಬ್ದಮಾಡುತ್ತಾ ಮುರಿದು ಬಿದ್ದುವು. ರಾಜಪುತ್ರರು ವೀರಾವೇಶದಿಂದ ನುಗ್ಗಿ ಎದುರಾಳಿ ಯವನರನ್ನು ಒತ್ತಿಕೊಂಡು ಅವರಲ್ಲನೇಕರ ಕೈ ಕಾಲುಗಳನ್ನು ಕತ್ತರಿಸಿದರು. ಬಾಯ್ತೆರೆದು ಬೈವವರ ನಾಲಿಗೆಗಳನ್ನು ಸೀಳಿದರು. ಎದೆಗಳಲ್ಲಿ ಭರ್ಜಿಗಳನ್ನು ನೆಟ್ಟರು. ಕತ್ತುಗಳನ್ನು ಕತ್ತರಿಸಿದರು. ರಕ್ತವು ಪ್ರವಾಹವಾಗಿ ಹೊರಟಿತು. ಈ ಅಕಸ್ಮಾತ್ ಪ್ರಹಾರಕ್ಕೆ ಸಿದ್ಧವಾಗಿಲ್ಲದಿದ್ದ ಯವನ

ಸೇನೆಯು ಬಹುಮಟ್ಟಿಗೆ ಹತವಾಯಿತು. ಅಷ್ಟು ಮಾತ್ರವಲ್ಲ, ಆವೇಳೆಗೆ ಇತ್ತ ಚಿತ್ತೂರನ್ನು ಸೇರಿದ್ದ ಭೀಮಸಿಂಹನು ಒಡನೆ ಸ್ನಾನಮಾಡಿ, ಅಲ್ಪಾಹಾರ ಸ್ವೀಕಾರಮಾಡಿ, ಯುದ್ಧ ಕವಚಾದಿಗಳನ್ನು ತೊಟ್ಟು ಆಯುಧಗಳನ್ನು ಧರಿಸಿ ಸ್ವಲ್ಪ ಪರಿವಾರವನ್ನೂ ಸಂಗಡ ತೆಗೆದುಕೊಂಡು ಸುಲ್ತಾನನ ಶಿಬಿರದ ಕಡೆಗೆ ಕುದುರೆಯನ್ನೋಡಿಸಿಕೊಂಡು ಬರುತ್ತಿದ್ದನು ಆವೇಳೆಗೇ ಹಣ್ಣಾಗಿದ್ದ ಸುಲ್ತಾನನ ಸೈನ್ಯವು ರಾಜಪುತ್ರರ ಹೊಡೆತವನ್ನು ತಾಳಲಾರದೆ ಪಲಾಯನ ಮಾಡತೊಡಗಿತು. ಸುಲ್ತಾನನು ತನ್ನ ಪರಾಭವಕ್ಕಾಗಿ ಚಿಂತಿಸುತ್ತ ಮುತ್ತಿಗೆಯನ್ನೆತ್ತಿ ಪ್ರಯಾಣ ಮಾಡಿಕೊಂಡು ಹೊರಟು, ಮೂಗು ಹೋದವನಂತೆ ಡಿಲ್ಲಿ ರಾಜಧಾನಿಯನ್ನು ಹೊಕ್ಕನು.

ಅಂದಿನ ಯುದ್ಧದಲ್ಲಿ ಹೋರಾಡಿದ ಬಾದಳನ ಪರಾಕ್ರಮವನ್ನು ವರ್ಣಿಸಲಸದಳವು. ಆ ವೀರಬಾಲಕನ ಅಂದಿನ ಚಪಲತನ—ಯುದ್ಧ ಚಾತುರ್ಯಗಳು ಹಿಂದಿನ ಮಹಾಭಾರತದ ಬಾಲವೀರ ಅಭಿಮನ್ಯುವನ್ನು ಜ್ಞಾಪಿಸುವಂತಿದ್ದುವು. ಜನ್ಮಾವಧಿ ಶಸ್ತ್ರಧಾರಿಗಳಾಗಿದ್ದ ತುರುಷ್ಕ ವೀರಸರದಾರರು ಸಹ ಆದಿನದ ಆಬಾಲಕನ ವೀರ್ಯವನ್ನು ಕಂಡು ಅದ್ಭುತ ಪಟ್ಟರು. ಇಂತು ಬಾದಳನು ಪರಾಕ್ರಮದಿಂದ ಕಾದಿದನಾದರೂ—ಅಲ್ಲಾವುದ್ದೀನನು ಮುಖದ ಮೇಲೆ ಬಟ್ಟೆಯನ್ನು ಹಾಕಿಕೊಂಡು ಬಂದದಾರಿಯಲ್ಲಿ ಹಿಂದಕ್ಕೆ ಓಡಿದನಾದರೂ ರಾಜಪುತ್ರರಿಗೆ ಅದು ಉತ್ಸಾಹಕಾರಿಯಾದ ವಿಜಯವಾಗಲಿಲ್ಲ. ಆಯುದ್ಧದಲ್ಲಿ ಅವರ ನಾಯಕ ಗೋರಾಸಿಂಹನು ಶತ್ರುಗಳೊಂದಿಗೆ ಹೋರಾಡುತ್ತಾ ದೇಹತ್ಯಾಗಮಾಡಿದನು. ಬಾದಳನು ಆತನ ಮರಣ ವಾರ್ತೆಯನ್ನು, ಆತನ ಪತ್ನಿಯಾದ ತನ್ನ ಚಿಕ್ಕಮ್ಮನಿಗೆ ತಿಳಿಸಿದನು. ತನ್ನ ಪತಿಯು ಯುದ್ಧದಲ್ಲಿ ಪ್ರದರ್ಶನ ಮಾಡಿದ ಶಕ್ತಿ ಸಾಹಸಗಳ ವರ್ಣನೆಯನ್ನು ಕೇಳಲು ಕಿವಿಗಳನ್ನು ಮೊರದಗಲ ಮಾಡಿಕೊಂಡಷ್ಟು ಉತ್ಸಾಹದಿಂದ ಇದ್ದ ಆ ವೀರಪತ್ನಿಯು ಸಂತೋಷದಿಂದ ಆತನೊಂದಿಗೆ ಸಹಗಮನ ಮಾಡಲು ಸಿದ್ಧಳಾದಳು. ತನ್ನ ಭರ್ತನ ವೀರ್ಯವನ್ನು ಕುರಿತು ಎಷ್ಟು ಕೇಳಿದರೂ ಆಕೆಗೆ ತೃಪ್ತಿಯೇ ತೋರದೆ—'ಮಗು ಬಾದಳ ಹೇಳು ಹೇಳು; ನನ್ನ ಆ ಪ್ರಿಯತಮನು ಹೇಗೆ ಯುದ್ಧಮಾಡಿದನು; ಶತ್ರುಗಳನ್ನು ಹೇಗೆ ದಮನ ಮಾಡಿದನು? ಹೇಗೆ ಪ್ರಾಣತ್ಯಾಗ ಮಾಡಿದನು" ಎನ್ನುತ್ತಿರುವಳು.—'ತಾಯೇ, ಆ

ಕ್ಷತ್ರಿಯವೀರನ ಯುದ್ಧವನ್ನು ಏನೆಂದು ವರ್ಣಿಸಲಿ! ಯವನ ಸೈನ್ಯವೆಂಬ ಹೊಲವನ್ನು ಪ್ರವೇಶಿಸಿದ ನಿನ್ನ ಪತಿಯು ಸೈನಿಕರೆಂಬ ಪೈರನ್ನು ಮನಸಾರೆ ಕೊಯ್ದು, ಹೆಣಗಳ ಬಣವೆಯನ್ನೊಟ್ಟಿದನು. ಕೊನೆಗೊಬ್ಬ ಯವನ ರಾಜನ ದೇಹವನ್ನೇ ತಲೆದಿಂಬಾಗಿಯೂ ಶತ್ರುಗಳ ದೇಹಗಳನ್ನೇ ಹಾಸಿಗೆಯನ್ನಾಗಿಯೂ ಮಾಡಿಕೊಂಡು ಸುತ್ತಲೂ ಬಿದ್ದಿರುವ ಶತ್ರುಶವಗಳ ಮಧ್ಯಭಾಗದಲ್ಲಿ ನಿನ್ನ ಪತಿಯು ರಣಕ್ಷೇತ್ರದಲ್ಲಿ-ವೀರಶಯ್ಯೆಯಲ್ಲಿ ಪವಡಿಸಿದ್ದಾನಮ್ಮಾ'' ಎಂದನು. ಆ ಮಾತುಗಳನ್ನು ಕೇಳಿದ ಆಕೆಯು-'ಬಾಲಕಾ ಹೇಳು ಹೇಳು. ಪ್ರಿಯನ ಯುದ್ಧವಾರ್ತೆಯನ್ನು ಪುನಃ ಪುನಃ ಹೇಳು. ನಾನು ಆತನ ದೇಹದೊಂದಿಗೆ ಗಮನಮಾಡುವ ಮೊದಲು ಆತನು ಯುದ್ಧಮಾಡಿದ ರೀತಿಯನ್ನು ಮತ್ತೊಮ್ಮೆ ಹೇಳು' ಎಂದಳು.—'ತಾಯೇ, ಆ ವೀರನ ಶೌರ್ಯಪ್ರತಾಪಾದಿಗಳನ್ನು ಎಷ್ಟೆಂದು ವರ್ಣಿಸಲಿ! ಆತನು ತನ್ನ ಪರಾಕ್ರಮವನ್ನು ಕಂಡು ಬೆದರುವುದಕ್ಕಾಗಲೀ, ಅಥವ ತನ್ನನ್ನು ಹೊಗಳಲಿಕ್ಕಾಗಲೀ, ಶತ್ರುಗಳಪೈಕಿ ಯಾರನ್ನೂ ಉಳಿಸಲಿಲ್ಲ' ಎಂದನು. ತನ್ನ ಗಂಡನ ಪರಾಕ್ರಮವನ್ನು ಕಿವಿಯಾರೆ ಕೇಳಿದ ಆ ವೀರವನಿತೆಯು ಆನಂದ ಬಾಷ್ಪವನ್ನು ಸುರಿಸುತ್ತಾ ನಡೆದು, ಪತಿಯ ಕಳೇಬರವನ್ನು ಅಪ್ಪಿಕೊಂಡು, ಚಿತಿಯನ್ನು ಹೊಕ್ಕಳು.

ಇಂತು ಅಂದು ಚಿತ್ತೂರಿನ ಮಾನವು ವೀರಬಾಲಬಾದಳ-ಗೋರಾಸಿಂಗರಿಂದ ಸುರಕ್ಷಿತವಾಯಿತು.



**ಅಧ್ಯಾಯ ೫** **"ಜೋಹಾರ್"**

ಪ್ರಪಂಚದಲ್ಲಿ ನಡೆವ ಪ್ರಚಾಕ್ಷಯ-ಪ್ರಳಯಗಳಿಗೆಲ್ಲ ಹೊನ್ನು ಹೆಣ್ಣು ಮಣ್ಣುಗಳೇ ಮುಖ್ಯ ಕಾರಣಗಳಾಗಿವೆ. ಇವು ಇಂದು ನಿನ್ನೆ ಏರ್ಪಟ್ಟುವಲ್ಲ-ಆದಿಕಾಲದಿಂದಲೂ ನಡೆದು ಬಂದುವು. ರಾಮಾಯಣ ಕಾಲದಲ್ಲಿ ಸೀತಾದೇವಿಯ ಮೂಲಕವಾಗಿ ರಾವಣಾದಿ ಅಸಂಖ್ಯ ರಾಕ್ಷಸರ ವಧೆಯಾಯಿತು. ದ್ವಾಪರದಲ್ಲಿ ಕೀಚಕ ದುರ್ಯೋಧನಾದಿಗಳು ಇವುಗಳ ಮೋಹಕ್ಕೋಳಗಾಗಿ ತಲೆಗಳನ್ನು ತೆತ್ತರು. ಇವುಗಳ ಮೂಲಕವಾಗಿ ನಡೆಯುತ್ತಿರುವ ವಿವಿಧ ಕಾರ್ಯಕಲಾಪಗಳೇ ಪ್ರಪಂಚದ ಅಖಿಳ ಜೀವಿಗಳನ್ನು—ಮುಖ್ಯವಾಗಿ ಮನುಷ್ಯರನ್ನು, ಲೋಕನಾಟಕದ ರಂಗಸ್ಥಳದಲ್ಲಿ ವಿವಿಧ ವೇಷಗಳಿಂದ ಆಡಿ

ಸುತ್ತಿವೆ. ಪ್ರಪಂಚದಲ್ಲಿ ನಡೆವ ಯುದ್ಧ ಕೊಲೆ ಕೊಳ್ಳೆ ಸುಲಿಗೆ ಮೋಸ ಕಾಪಟ್ಯ ವ್ಯಾಜ್ಯ ವ್ಯವಹಾರ ಮುಂತಾದುವುಗಳಿಗೆಲ್ಲ ಮೂಲ ಜನ್ಮಸ್ಥಾನವು ಈ ಮೂರರಲ್ಲಿ ಒಂದೆರಡನ್ನು ಆಶ್ರಯಿಸದೆ ಇಲ್ಲ! ಆದುದರಿಂದಲೇ ಶಾಂತಿ ಸ್ಥಾಪಕರಾದ ಪೂರ್ವದ ಋಷಿಮುನಿಗಳೂ, ಭಾರತ ದೇಶದ ಸಾಧುವರ್ಯರೂ ವೈರಾಗ್ಯವನ್ನೂ, ಪ್ರಾಪಂಚಿಕ ವಸ್ತುಗಳ ಅಶಾಶ್ವತ ಸ್ಥಿತಿಯನ್ನೂ ಆದಿಕಾಲ ದಿಂದಲೂ ಬೇಸರವಿಲ್ಲದೆ ಬೋಧಿಸುತ್ತ ಬಂದರು. ಮೇಲ್ಕಂಡ ವಸ್ತು ಗಳಲ್ಲಿ ಅಪೇಕ್ಷೆ ಪಡಬೇಕೆಂಬುದನ್ನು ಯಾರೂ -ಬೋಧಿಸಬೇಕಾದುದಿಲ್ಲ.— ಅದು ಸ್ವಾಭಾವಿಕವಾಗಿ ಮನುಷ್ಯ ಸಾಮಾನ್ಯ ವಿಷಯವಾಗಿ ಬಿಟ್ಟದೆ. ಅದು ಬೇಡ—ಅದು ಶಾಶ್ವತವಲ್ಲ, ಅದರ ವಿಷಯದಲ್ಲಿ ಮೋಹಗೊಳ್ಳಬೇಡಿರೆಂಬು ದನ್ನೇ ಹಿಂದಿನ ಮಹನೀಯರೆಲ್ಲರೂ ಒತ್ತಿ ಒತ್ತಿ ಹೇಳುತ್ತಿದ್ದುದಕ್ಕೆ ಇದೇ ಕಾರಣ! ಪ್ರಕೃತ ಪ್ರಪಂಚ ಸ್ಥಿತಿಯಲ್ಲಿ ಇವುಗಳ ಸಂಬಂಧವಾದ ಆಶಾ ಮೋಹಾದಿಗಳನ್ನು ಪ್ರೇರಿಸಿ ಬೋಧಿಸಿ ಉತ್ತೇಜನಗೊಳಿಸತಕ್ಕವರ ಸಂಖ್ಯೆಯೇ ದಿನದಿನಕ್ಕೆ ಹೆಚ್ಚುತ್ತಿದೆ. ಅದೇ ಅಭಿವೃದ್ಧಿಮಾರ್ಗವೆಂಬ ಭ್ರಾಂತಿಯೂ ಜನ ಮನವನ್ನಾವರಿಸಿದೆ. ಆದುದರಿಂದಲೇ ಲೋಕದಲ್ಲಿ ಸರ್ವತ್ರ ಇಷ್ಟುಮಟ್ಟಿನ ಅಸಂತುಷ್ಟಿ, ಮೋಸ, ಅಪನಂಬಿಕೆ, ಕ್ಷುದ್ರತನ, ಯುದ್ಧ—ಪ್ರಳಯಗಳು ನಿತ್ಯಕೃತ್ಯಗಳೋ ಎಂಬಂತೆ ಅತಿಶಯವಾಗಿ ನಡೆಯಲು ಕಾರಣವಾಗಿದೆ. ಕಾಲಾಯತಸ್ಮೈನಮಃ—

ಡಿಲ್ಲಿಗೆ ಹಿಂದಿರುಗಿದ ಅಲ್ಲಾವುದ್ದೀನನು ಪದ್ಮಿನಿಯ ಆಸೆಯನ್ನು ಬಿಟ್ಟು ರಾಜಪುತ್ರರು ಅಜೇಯರೆಂದು ತಿಳಿದು, ಮುಂದೆ ಶಾಂತಗೊಳ್ಳಲಿಲ್ಲ. ತನ್ನ ಮೋಸಕ್ಕೆ ಅವರು ಮಾಡಿದ ಪ್ರತೀಕಾರವು ಅವನನ್ನು ಅಳತೆಗೆಟ್ಟು ರೇಗಿಸಿತು. ಚಿತ್ತೂರನ್ನು ನೆಲಸಮಮಾಡಿ, ತನ್ನನ್ನು ಹಾಗೆ ಅಪಮಾನಗೊಳಿಸಿದ ಆ ರಾಜ ಪುತ್ರ ಪರಿವಾರವನ್ನು ನಿರ್ನಾಮಗೊಳಿಸಬೇಕೆಂದು ದೃಢಸಂಕಲ್ಪ ಮಾಡಿ ದನು. ಚಿತ್ತೂರಿನಲ್ಲಿ ತನಗಾದ ಪರಾಭವವು ಅವನ ಹೃದಯ-ಅಂತಃಕರಣ ಗಳನ್ನು ದಹಿಸುತ್ತಿದ್ದಿತು. ಆದರೂ ಪದ್ಮಿನಿಯಮೇಲಿನ ಆಸೆಯಳಿಯಲಿಲ್ಲ. ತನ್ನ ಆಧಿಪತ್ಯಕ್ಕೊಳಪಟ್ಟ ರಾಜ್ಯದಲ್ಲಿ ಪ್ರಜೆಗಳಮೇಲೆ ದುರ್ಭರವಾದ ಕಂದಾಯ ಕೌಳಿಗೆಗಳನ್ನು ಹೇರಿ ಅಮಿತ ಧನವನ್ನು ಸಂಗ್ರಹಿಸಿದನು. ಪುನಃ ಅಸಂಖ್ಯ ಸೇನಾಬಲದಿಂದ ಚಿತ್ತೂರಿನಮೇಲೆ ದಂಡೆತ್ತಿ ನಡೆದನು.

ಅಲ್ಲಾವುದ್ದೀನನು ಚಿತ್ತೂರು ಕೋಟೆಯನ್ನು ಮುತ್ತಿ—ಮುಂಚಿನಂತೆಯೇ ಹೊರಗಿನಿಂದ ಯಾವ ಪದಾರ್ಥವೂ ಕೋಟೆಯೊಳಕ್ಕೆ ಬಾರದಂತೆ ತಡೆಗಟ್ಟಿದನು. ಮೊದಲು ಮೊದಲು ರಾಜಪುತ್ರರು, ಅವನ ಪ್ರಯತ್ನವನ್ನು ಕಂಡು ಅಪಹಾಸ್ಯ ಮಾಡಿದರು. ಆದರೆ, ಅಲ್ಲಾವುದ್ದೀನನ ಪ್ರಯತ್ನವು ನಿರಂತರವಾಗಿ ನಡೆಯುತ್ತಿತ್ತು. ಚಿತ್ತೂರು ಕೋಟೆಯು ಅಗಾಧವಾದ ಕಲ್ಲುಬಂಡೆಯಮೇಲೆ ಕಟ್ಟಲ್ಪಟ್ಟು ದುರ್ಭೇದ್ಯವಾಗಿದ್ದಿತು. ಅದರ ಪೂರ್ವ ಭಾಗದಲ್ಲಿಮಾತ್ರ ನೆಲವು ಸ್ವಲ್ಪ ತಗ್ಗಾಗಿದ್ದುದರಿಂದ, ಸುಲ್ತಾನನು ಅದನ್ನು ಮುಚ್ಚಿಸಿ ಅಲ್ಲೊಂದು ಮಣ್ಣಿನ ದಿಬ್ಬವನ್ನೆಬ್ಬಿಸಿ ಅದರ ಸಹಾಯದಿಂದ ಕೋಟೆಯಮೇಲೇರಿ ಕೋಟೆಯ ರಕ್ಷಕ ಭಟರನ್ನು ಬಂಧಿಸಬಹುದೆಂದು ಯೋಚಿಸಿ, ಹಾಗೆ ಮಾಡುವಂತೆ ಸೇನೆಗೆ ಆಜ್ಞಾಪಿಸಿದನು. ಬಹುದೂರದ ಬೆಟ್ಟದ ಅಡಿಭಾಗದಿಂದ ಮಣ್ಣು ತಂದು ಅದಕ್ಕೆ ಹಾಕಬೇಕಾಗಿದ್ದಿತು. ಹೀಗೆ ಗುಡ್ಡಕ್ಕೆ ಮಣ್ಣು ಕಲ್ಲು ಹೊತ್ತ ಈ ಕಾರ್ಯಕ್ಕಾಗಿ, ಸುಲ್ತಾನನು ಮುಕ್ತಹಸ್ತನಾಗಿ ದ್ರವ್ಯವನ್ನು ಸೂರೆಮಾಡಿದನು. ಒಂದೊಂದು ಬುಟ್ಟಿ ಮಣ್ಣು ತಂದುಹಾಕಿದ್ದಕ್ಕೆ ಒಂದೊಂದು ಚಿನ್ನದ ನಾಣ್ಯದಂತೆ ಕೊಡುತ್ತಾ ಬಂದನು. ರಾತ್ರೆ ಹಗಲು-ಹಗಲು ರಾತ್ರೆಗಳೆನ್ನದೆ ಬಹುದಿನಗಳು ಕೆಲಸ ನಡೆಯುತ್ತಲೇ ಇದ್ದಿತು.

ರಾಜಪುತ್ರರಿಗೆ ದೇಹದಲ್ಲಿ ಬಲವೂ ಮನಸ್ಸಿನಲ್ಲಿ ಧೈರ್ಯವೂ ಕ್ರಿಯೆಯಲ್ಲಿ ಸಾಹಸ ಪರಾಕ್ರಮಗಳೂ ಅಕ್ಷಯವಾಗಿದ್ದುವಲ್ಲದೆ, ಅವರಲ್ಲಿ ತುರುಷ್ಕ ಸೈನ್ಯದಲ್ಲಿದ್ದಷ್ಟು ಯುದ್ಧ ಸಾಮಗ್ರಿಗಳಾಗಲೀ ಶತ್ರು ಸೈನ್ಯಕ್ಷಯಕಾರಿಗಳಾದ ಯಂತ್ರ ಸಾಮಾಗ್ರಿಗಳಾಗಲೀ ಇರಲಿಲ್ಲ. ಅಲ್ಲದೆ, ಈ ಹಿಂದೆ ನಡೆದಿದ್ದ ಯುದ್ಧದಲ್ಲಿ ಆದ ಪ್ರಜಾ ಕ್ಷಯದಿಂದಲೇ ಅಧಿಕ ನಷ್ಟಹೊಂದಿದ್ದುದರಿಂದ ಇನ್ನೂ ವೀರಸೈನ್ಯವೂ ಏರ್ಪಟ್ಟಿರಲಿಲ್ಲ. ಈ ಸಾರಿಯ ಯುದ್ಧದಲ್ಲಿ ದುರಾಗ್ರಹಿಯಾದ ಸುಲ್ತಾನನಿಂದ ತಾವೆಲ್ಲರೂ ನಿಶ್ಶೇಷವಾಗಿ ಹತವಾಗತಕ್ಕವರೇ ಎಂಬುದು ಎಲ್ಲರಿಗೂ ತಿಳಿದಿದ್ದಿತು. ಆದರೂ ಅವರೇನು ಬೆದರಲಿಲ್ಲ. ಜೀವಗಳ್ಳರಾಗಿ ಅಂಜಿ ಓಡಿಹೋಗಲೂ ಬಯಸಲಿಲ್ಲ! ಈಮಧ್ಯೆ ಒಂದು ದಿನ ರಾತ್ರೆ ಭೀಮಸಿಂಹನು ಮಲಗಿಕೊಂಡೇ, ಮುಂದೆ ಸ್ವಲ್ಪ ದಿನಗಳಲ್ಲೇ ಚಿತ್ತೂರಿಗೆ ಪ್ರಾಪ್ತವಾಗಲಿದ್ದ ಮಹೋಪದ್ರವವನ್ನು ಕುರಿತು ಚಿಂತಾಮಗ್ನ

ನಾಗಿರುತ್ತಿರುವಲ್ಲಿ, ಆತನ ಶಯ್ಯಾಗೃಹದ ಒಂದು ಮೂಲೆಯಿಂದ “ಮೈ ಭೂಕಾಹೂ ನನಗೆ ಹಸಿವೆಯಾಗುತ್ತದೆ-ಹಸಿವೆಯಾಗುತ್ತದೆ' ಎಂಬೊಂದು ಕರಾಳ ಸ್ವರವು ಬಂದುದನ್ನು ಕೇಳಿದನು. ಒಡನೆ ಆಶ್ಚರ್ಯದಿಂದ ಕಣ್ಣು ಬಿಟ್ಟು ನೋಡಿದ ಭೀಮಸಿಂಹನು ಕಂಭಗಳ ನಡುವೆ ಚಿತ್ತೂರಿನ ನಗರ ಸಂರಕ್ಷಿಣಿಯ ಭಯಂಕರ ರೂಪವನ್ನು ಕಂಡು ಒಡನೆ ಮೇಲೆಕ್ಕೆದ್ದು, ಕೈಮುಗಿದುಕೊಂಡು-'ತಾಯೀ ಮೊನ್ನೆ ತಾನೇ ಎಂಟುಸಹಸ್ರಮಂದಿ ರಾಜಪುತ್ರರ ರಕ್ತವನ್ನು ಪಾನ ಮಾಡಿದೆಯಲ್ಲ—ಇನ್ನೂ ತೃಪ್ತಿಯಾಗಲಿಲ್ಲವೆ?” ಎಂದನು.—“ಇಲ್ಲ ಇಲ್ಲ. ನನಗೆ ರಾಜರಕಂಠರಕ್ತಬೇಕು. ಹನ್ನೆರಡುಮಂದಿ ಮಕುಟಾಭಿಷಿಕ್ತರಾದ ರಾಜರು ತಮ್ಮ ' ದೇಹವನ್ನು ಬಲಿಕೊಟ್ಟರೆ ಸರಿ, ಹಾಗಿಲ್ಲದಿದ್ದರೆ ಚಿತ್ತೂರಿನ ಈ ರಾಜವಂಶವು ಕ್ಷಯವಾಗುವುದು” ಎಂದು ಆ ಅದ್ಭುತ ರೂಪವು ನುಡಿದಂತೆ ಕೇಳಿಸಿತು.

ಭೀಮಸಿಂಹನು ಪರಮಾಶ್ಚರ್ಯ ಮಗ್ನನಾಗಿ, ಮಾರನೆಯ ಪ್ರಾತಃಕಾಲ, ಸಭೆಯನ್ನು ನೆರೆಯಿಸಿ, ರಾತ್ರೆ ತಾನು ಕಂಡ ದೃಶ್ಯವನ್ನೂ, ಕೇಳಿದ ಭೀಕರ ಮಾತುಗಳನ್ನೂ ಎಲ್ಲರಿಗೂ ವಿಶದಿಸಿ ಹೇಳಿದನು. ಆದರೆ ಅವರೆಲ್ಲರೂ ನಂಬಲಿಲ್ಲ.—ಬಹುಶಃ ಚಿಂತಾ ಮಗ್ನವಾಗಿದ್ದ ಮನಸ್ಸಿನ ಕಳವಳವೇ-ಭ್ರಾಂತಿಯೋ ಹಾಗೆ ತೋರಿರಬಹುದೆಂದರು. ಭೀಮಸಿಂಹನು ಆ ರಾತ್ರೆ ಆ ಸರದಾರರೆಲ್ಲರನ್ನೂ ತನ್ನ ಮನೆಗೆ ಬರಹೇಳಿ, ಹಿಂದಿನ ರಾತ್ರೆಯಂತೆಯೇ ಪ್ರತ್ಯಕ್ಷವಾಗಿ ಹೇಳೆಂದು ಕೋರಿದನು. ಪುನಃ ಆ ಭೂತಾಕಾರವು ಹಾಗೆಯೇ ಪ್ರತ್ಯಕ್ಷವಾಗಿ-' ನನಗೆ ರಾಜರ ರಕ್ತಬೇಕು. ಸಹಸ್ರಾರುಮಂದಿ ಸಾಮಾನ್ಯರ ರಕ್ತದಿಂದಲೂ ನನಗೆ ತೃಪ್ತಿಯಾಗದು. ಪ್ರತಿದಿನಕ್ಕೊಬ್ಬನಂತೆ ರಾಜನಿಗೆ ಪಟ್ಟಗಟ್ಟಿರಿ. ಛತ್ರ ಚಾಮರ ಪತಾಕೆ ಮೊದಲಾದ ರಾಜಚಿಹ್ನೆಗಳಿಂದ ಅವನ ರಾಜತ್ವವನ್ನು ಪ್ರಕಟಿಸಿರಿ. ಅವನು ಮೂರುದಿನ ನಿರಂಕುಶನಾಗಿ ಅಧಿಪತ್ಯಮಾಡಿ, ನಾಲ್ಕನೆಯ ದಿನ ಯುದ್ಧಕ್ಕೆ ನಡೆದು ಶತ್ರುವನ್ನು ಎದುರಿಸಿ, ತನ್ನ ಗತಿಯನ್ನು ನಿರ್ಧರಿಸಿಕೊಳ್ಳಲಿ. ಹಾಗಾದರೆ ಮಾತ್ರವೇ ನಾನು ನಿಮ್ಮ ಕುಲಕ್ಕೆ ದಕ್ಕುವೆನು” ಎಂದು ಹೇಳಿದ ಮಾತು ಎಲ್ಲರಿಗೂ ಕೇಳಿಸಿತು. ಸರದಾರರಿಗೆ ಸಂಶಯವು ಉಳಿಯಲಿಲ್ಲ. ಮಾರನೆಯ ದಿನವೇ ರಾಣಾ ಭೀಮಸಿಂಹನ ಹಿರಿಯ ಮಗನಿಗೆ ಪಟ್ಟಗಟ್ಟಿದರು. ಅವನು ಮೂರುದಿನ ರಾಜ್ಯಭಾರಮಾಡಿ ನಾಲ್ಕನೆಯ ದಿನ ಸುಲ್ತಾನನಮೇಲೆ ಏರಿಹೋಗಿ ಯುದ್ಧಮಾಡಿ, ರಣರಂಗ

ದಲ್ಲೇ ಹತನಾದನು. ತರುವಾಯ, ಇನ್ನೊಬ್ಬ-ಮತ್ತೊಬ್ಬ! ಮತ್ತೊಬ್ಬ-ಇನ್ನೊಬ್ಬ; ಹೀಗೆ ಭೀಮಸಿಂಹನ ಹನ್ನೊಂದು ಮಂದಿ ಮಕ್ಕಳೂ ಪಟ್ಟಾಭಿಷಿಕ್ತರಾಗಿ ಮೂರು ಮೂರು ದಿನ ರಾಜ್ಯವಾಳಿ, ನಾಲ್ಕನೆಯ ದಿನ ಯುದ್ಧ ಮಾಡಿ ತಲೆಗಳನ್ನು ತೆತ್ತರು. ಕೊನೆಯ ಮಗನಾದ ಅಜೇಯಿಸ ಎಂಬವನ ಸರದಿಯು ಬಂದಾಗ್ಗೆ ಭೀಮಸಿಂಹನು ತನ್ನ ಪುತ್ರನೊಂದಿಗೆ-'ಮಗೂ ನಾನು ಹೆತ್ತ ಹನ್ನೆರಡು ಮಂದಿ ಮಕ್ಕಳಲ್ಲಿ ವಂಶದ ಹೆಸರು ಹೇಳುವುದಕ್ಕೆ ನೀನೊಬ್ಬನಾದರೂ ಜೀವಿಸು. ಹನ್ನೆರಡನೆಯ ರಾಜನಾಗಿ ನಾನೇ ತಲೆಯನ್ನು ತೆತ್ತು ಪುರದೇವತೆಯ ಕ್ಷುಧೆಯನ್ನು ತೃಪ್ತಿಪಡಿಸುತ್ತೇನೆ' ಎಂದು ಬಹು ಬಗೆಯಿಂದ ಹೇಳಿ ಒಪ್ಪಿಸಿದನು. ಆ ಪಿತೃ ಭಕ್ತನಾದ ಪುತ್ರನು, ಬಹು ದುಃಖದಿಂದ ಆ ಮಾತಿಗೆ ಒಪ್ಪಿ, ಕೆಲಮಂದಿ ಆಪ್ತ ಭೃತ್ಯರನ್ನೊಡಗೊಂಡು ಮಾತಾ ಪಿತೃಗಳ ಪಾದಕ್ಕೆ ಬಿದ್ದು ಪುನಃ ಅವರನ್ನು ಕಾಣುವ ಆಸೆಯು ಉಳಿಯದಿರಲು ಕಣ್ಣೀರಿಡುತ್ತ ವಿಧಿಯಿಲ್ಲದೆ ಎಂತೂ ಹೊರಟು ಶತ್ರುದಳವನ್ನು ಭೇಧಿಸಿ ಮಾರ್ಗಮಾಡಿಕೊಂಡು ಕೈಲವಾರವೆಂಬ ಸ್ಥಳಕ್ಕೆ ಹೋಗಿ ಸುರಕ್ಷಿತವಾಗಿ ಮುಟ್ಟಿದನು.

ಇಂತು ತನ್ನ ವಂಶಾಂಕುರವು ಬೆಳೆವ ಆಸೆಯೊಂದು ಭೀಮಸಿಂಹನಿಗೆ ಉಂಟಾದುದರಿಂದ, ತಾನು ಹನ್ನೆರಡನೆಯವನಾಗಿ ಪಟ್ಟಾಭಿಷೇಕ ಮಾಡಿಸಿಕೊಂಡು ಮೂರು ದಿನ ರಾಜ್ಯವಾಳಿ ನಾಲ್ಕನೆಯ ದಿನ ಯುದ್ಧಕ್ಕೆ ಸಿದ್ಧನಾದನು. ಅದೇ ಕೊನೆಯ ಯುದ್ಧವೆಂದು ರಾಜಪುತ್ರರೆಲ್ಲರಿಗೂ ನಿಶ್ಚಯವಾಯಿತು. ತಮ್ಮ ಕುಲಗೌರವ ರಕ್ಷಣೆಗಾಗಿ ಪ್ರಾಣಬಿಡಲು ಎಲ್ಲರೂ ಸಿದ್ಧರಾದರು. ಎಲ್ಲರೂ ರಕ್ತ ವಸ್ತ್ರಗಳನ್ನು ಧರಿಸಿದರು. ಕೊರಳಲ್ಲಿ ರುದ್ರಾಕ್ಷಿ ತುಲಸೀ ಮಣಿಗಳನ್ನು ಧಾರಣ ಮಾಡಿಕೊಂಡರು. ಕೊನೆಯ ಬಾರಿ ತಮ್ಮ ಪ್ರಿಯ ಭಾರ್ಯೆಯರನ್ನು ಆಲಿಂಗಿಸಿ ಹೊರಹೊರಟರು. ಕೋಟೆಯ ಬಾಗಿಲನ್ನು ವಿಶಾಲವಾಗಿ ತೆರೆದು—'ಹರ ಹರ ಮಹಾದೇವ' ಎಂದು ಜಯಘೋಷ ಮಾಡುತ್ತ ದೇಹದಮೇಲೆ ಸ್ಮೃತಿಯಿಲ್ಲದವರಂತೆ ಶತ್ರು ಸೈನ್ಯದಮೇಲೆ ನುಗ್ಗಿದರು. ಒಂದೊಂದು ಪ್ರಹಾರಕ್ಕೆ ಎರಡೆರಡು ಮೂರು ಮೂರರಂತೆ ಅರಿ ಸೈನಿಕರ ದೇಹಗಳನ್ನು ನೆಲಕ್ಕುರುಳಿಸುತ್ತ ರಣಮತ್ತರಾಗಿ ಕಾದತೊಡಗಿದರು. ಯುದ್ಧವು ಅಭೂತಪೂರ್ವ ಭಯಂಕರ ಸ್ಥಿತಿಯಿಂದ ನಡೆಯಲಾಗಿತು.

ರಾಜಪುತ್ರರು, ಇನ್ನು ತಮ್ಮ ರಕ್ಷಣೆಗೆ ಉಪಾಯವಿಲ್ಲವೆಂದು ತೋರಿದಾಗ ಹೇಡಿಗಳಾಗಿ ಜೀವಗಳ್ಳರಾಗಿ ಶತ್ರುಗಳನ್ನು ಬೇಡಿ ಬದುಕಲಿಚ್ಛಿಸುವುದಿಲ್ಲ. ಆಗ ತಮ್ಮ ಅಶೇಷ ಬಲದೊಂದಿಗೆ ಶತ್ರು ಸೇನೆಯಮೇಲೆ ಬಿದ್ದು ಜಯಿಸುವುದಾದರೆ ಜಯಿಸುವರು, ಇಲ್ಲವೇ ನಿಶ್ಶೇಷವಾಗಿ ಕ್ಷಯಿಸುವರು. ಇತ್ತ ಸ್ತ್ರೀಯರಾದರೂ ಹಾಗೆಯೇ! ಪರಧರ್ಮೀಯರ ದೃಷ್ಟಿಗೂ-ಕೈಗೂ ದಕ್ಕದಂತೆ ಅಗ್ನಿಪ್ರವೇಶಮಾಡಿ ದೇಹತ್ಯಾಗ ಮಾಡುವರು. ಇದಕ್ಕೇ ಜೋಹಾರ್ ವ್ರತವೆಂದು ಹೆಸರು. ಆ ಭೀಕರ ವ್ರತವನ್ನು ಚಿತ್ತೂರಿನ ವೀರ ರಾಜಪುತ್ರರು ಇಂದು ಕೈಕೊಂಡರು.

ರಾಜಪುತ್ರ ಪುರುಷರೆಲ್ಲರೂ ಮೇಲ್ಕಂಡಂತೆ ಕೊನೆಯಸಾರಿ, ಯುದ್ಧಕ್ಕೆಂದು ಹೊರಡಲು ಸಿದ್ಧರಾದೊಡನೆಯೇ ಇತ್ತ ಅಶೇಷ ಸ್ತ್ರೀವೃಂದವೂ ಸಿದ್ಧವಾಯಿತು. ಅವರಿಗೆಲ್ಲರಿಗೂ ಪದ್ಮಿನಿಯೇ ನಾಯಿಕೆಯಾದಳು. ಎಲ್ಲರೂ ಮಂಗಳಸ್ನಾನಮಾಡಿದರು. ಅರಿಸಿನ ವಸ್ತ್ರಗಳನ್ನುಟ್ಟರು. ವಿವಾಹಕಾಲದಲ್ಲಿ ವಧುವಿನಂತೆಯೇ ವಸ್ತ್ರಭೂಷಣ ಗಂಧಮಾಲ್ಯಾದಿಗಳಿಂದ ಅಲಂಕೃತರಾದರು. ತಮ್ಮ ಪತಿಗಳ ಕಂಠಗಳಿಗೆ ಹೂಮಾಲೆಗಳನ್ನು ಹಾಕಿ, ಕೊನೆಯ ಬಾರಿ ಆಲಂಗಿಸಿ ಪಾದಗಳಿಗೆ ಬಿದ್ದು—ಆ ಧೂಳಿಯನ್ನು ಶಿರಸ್ಸಿನಲ್ಲಿ ಧಾರಣ ಮಾಡಿದರು. ಪದ್ಮಿನಿಯೂ, ತನ್ನ ಪ್ರಿಯಪತಿಯಾದ ರಾಣಾಭೀಮಸಿಂಹನ ಪಾದಗಳನ್ನು ಪೂಜಿಸಿ, ಮುಂದೆ ಜನ್ಮಜನ್ಮದಲ್ಲೂ ಆತನನ್ನೇ ತನಗೆ ಪತಿಯನ್ನಾಗಿ ಕರುಣಿಸೆಂದು ಭಗವತಿಯನ್ನು ಪ್ರಾರ್ಥಿಸಿಕೊಂಡಳು. ಎಲ್ಲವೂ ಸಿದ್ಧವಾಯಿತು. ಪದ್ಮಿನಿಯು ಸಹಸ್ರಾರುಮಂದಿ ಆ ಸ್ತ್ರೀ ವೃಂದಕ್ಕೆ ಮುಂದಾಳಾಗಿ, ಒಂದು ಭೀಕರವಾದ ಗುಪ್ತ ಗುಹೆಯನ್ನು ಪ್ರವೇಶಿಸಿದಳು. ಅಲ್ಲಿ ಅಗಾಧವಾದ ಅಗ್ನಿಕುಂಡವು ಸಿದ್ಧವಾಗಿದ್ದಿತು. ಸ್ತ್ರೀಯರೆಲ್ಲರೂ, ತಮ್ಮ ಮನಸಾರೆ ಪತಿಪಾದಗಳನ್ನೂ, ಭಗವತಿಯ ಪವಿತ್ರನಾಮಗಳನ್ನೂ ಸ್ಮರಿಸಿಕೊಂಡು ಒಬ್ಬೊಬ್ಬರಾಗಿ ಜಯ ಭಗವತಿ, ಎಂಬ ನಾಮೋಚ್ಚಾರದಿಂದ ಅಗ್ನಿಯಲ್ಲಿ ಧುಮುಕಿದರು. ಅಗ್ನಿಯು ಪ್ರಳಯಾಗ್ನಿಯಂತೆ ಭಯಂಕರವಾಗಿ ಉರಿಯತೊಡಗಿ, ಕೋಮಲದೇಹದ ಅಷ್ಟುಮಂದಿ ರಾಜಪುತ್ರ ಸ್ತ್ರೀಯರನ್ನೂ ಕ್ಷಣಮಾತ್ರದಲ್ಲಿ ದಹಿಸಿ ಬೂದಿಮಾಡಿತು. ಇಂತು ಪವಿತ್ರವಾದ ಈ ಜೋಹಾರ್ ವ್ರತದಿಂದ ರಾಜಪುತ್ರರು, ಧರ್ಮರಕ್ಷಣೆ-ಸ್ವಾಭಿಮಾನ

ರಕ್ಷಣೆ ಪಾತಿವ್ರತ್ಯ ರಕ್ಷಣೆಗಳಲ್ಲಿ ಜಗತ್ತಿನಲ್ಲೇ ಅದ್ವಿತೀಯರೆಂಬ ತಮ್ಮ ಕೀರ್ತಿ ಪ್ರತಿಷ್ಠೆಗಳನ್ನು ಸಂಪಾದಿಸಿದರು. ಆ ಧೀರರು ಪ್ರಾಣಬಿಟ್ಟು ಮಾನವನ್ನು ಆಚಂದ್ರಾರ್ಕ ಗಳಿಸಿಕೊಂಡರು. ನಶ್ವರವಾದ ಬಾಳ್ವೆಗಾಗಿ ಮಾನವನ್ನು ಸೂರೆಗೊಡುವ ಹುಲುಮಾನವರು ಆ ಸಿಂಹ-ಶಾರ್ದೂಲಗಳ ಹೆಸರನ್ನು ಸ್ಮರಿಸಲಿಕ್ಕಾದರೂ ಯೋಗ್ಯರೆನಿಸುವರೇ ?

# ಉಪಸಂಹಾರ

ರಾಜಪುತ್ರರು ಪ್ರಾಣದಾಸೆಯಿಲ್ಲದೆ ಹೋರಾಡಿದರಾದರೂ ಅಪಾರವಾದ ಯವನಸೈನ್ಯವನ್ನು ಜಯಿಸಲಾರದೆ, ಒಬ್ಬನುಳಿಯದಂತೆ ಎಲ್ಲರೂ ಹತರಾದರು. ರಾಜಪುತ್ರರ ಸೈನ್ಯವನ್ನು ನಿಶ್ಶೇಷವಾಗಿ ಹತಗೊಳಿಸಿದ ತರುವಾಯ ಅಲ್ಲಾವುದ್ದೀನನು ಜಯಘೋಷಮಾಡುತ್ತ ಬಹು ವಿಜೃಂಭಣೆಯಿಂದ ಪುರಪ್ರವೇಶ ಮಾಡಿದನು. ತನ್ನ ಸಕಲ ವೈಭವಗಳನ್ನೂ ಆ ಪದ್ಮಿನಿಯ ಎದುರಿಗೆ ಮೆರೆಯಿಸಿ ಆಕೆಯ ಹಸ್ತಗ್ರಹಣಮಾಡಿ ಸುಖಿಸಬೇಕೆಂಬುದು ಆ ದುರುಳನ ಆಂತರ್ಯಾಪೇಕ್ಷೆ ! ಆದರೆ ಚಿತ್ತೂರು ನಗರದಲ್ಲಿ ಎಲ್ಲಿ ನೋಡಿದರೂ ಒಂದು ನರಪ್ರಾಣಿಯೂ ಇಲ್ಲ. ರಾಜಪುತ್ರರ ಮಕ್ಕಳು ಮರಿಗಳು ಸಹ ಇಲ್ಲ.! ಜೋಹಾರನ್ನು ಆಚರಿಸಿದ ಸ್ತ್ರೀಯರು, ಸಣ್ಣ ಸಣ್ಣ ಮಕ್ಕಳೊಂದಿಗೇ ಚಿತಿಯನ್ನು ಹೊಕ್ಕಿದ್ದರು. ಯವನ ಸೈನಿಕರು ಪರಮಾದ್ಭುತಗೊಂಡು, ಎಲ್ಲಾ ಪ್ರದೇಶಗಳನ್ನೂ ಹುಡುಕಿದರು. ಎಲ್ಲೂ ಯಾರ ಸುಳಿವೂ ಗೋಚರಿಸಲಿಲ್ಲ. ಕೊನೆಗೆ ಒಂದು ಮೂಲೆಯಿಂದ ಅಗಾಧ ಹೊಗೆಯೂ ಕೆಂಪು ಉರಿಯೂ ಏಳುತ್ತಿದ್ದುದನ್ನು ಕಂಡು ಅಲ್ಲಾವುದ್ದೀನನು ಅದೇನೆಂದು ನೋಡಲು ಅಲ್ಲಿಗೆ ನುಗ್ಗಿದನು. ಆ ದೃಶ್ಯವನ್ನು ಏನೆಂದು ನೋಡಬಹುದು! ಅದನ್ನು ಏನೆಂದು ವರ್ಣಿಸಬಹುದು. ಸುಂದರ ಸ್ತ್ರೀಯರ ಸಹಸ್ರಾರು ದೇಹಗಳು ಏಕಕಾಲದಲ್ಲಿ ಪ್ರಳಯಾಗ್ನಿಯಲ್ಲಿ ಬಿದ್ದಿದ್ದಂತೆ ಹತ್ತಿ ಉರಿಯುತ್ತಿವೆ. ಅದರ ಹತ್ತಿರಕ್ಕೆ ಹೋಗುವ ಧೈರ್ಯವು ಯಾರಿಗಿರುವುದು ! ಅಲ್ಲಾವುದ್ದೀನನು ಹತಾಶನಾಗಿ ಹಿಂದಿರುಗಿದನು. ತನ್ನ ಅಭಿಲಾಷೆಯು ಹಾಗೆ ಭಗ್ನವಾದುದು ಆ ದುರುಳ ಯವನನನ್ನು ಹುಚ್ಚನನ್ನಾಗಿ ಮಾಡಿತು. ಒಡನೆ ಆ ಸುಂದರ ನಗರವನ್ನೆಲ್ಲ ಧ್ವಂಸ ಮಾಡಿಬಿಡಿರೆಂದು ಸೈನಿಕರಿಗೆ ಆಜ್ಞಾಪಿಸಿದನು. ಬಹು ಪುರಾತನ ಕಾಲದಿಂದ ಪ್ರಸಿದ್ಧವಾಗಿದ್ದ ಬಹು ಸುಂದರವಾದ ಮನೆ ದೇವಾಲಯ ಛತ್ರ ಚಾವಡಿ ಮುಂತಾದ ಕಟ್ಟಡಗಳೆಲ್ಲ ಮುರಿದು ಬಿದ್ದುವು. ಸೇವಕರು ಅರಮನೆಯನ್ನು ಒಡೆಯಲು ಬಂದಾಗ ಮಾತ್ರ,—ಅದರಲ್ಲಿ ತನ್ನ ನೇತ್ರಾನಂದದಾಯಿನಿಯಾಗಿದ್ದ ಪದ್ಮಿನೀ ರಾಣಿಯು ವಾಸಿಸಿದ್ದಳೆಂದು ಇರಬಹುದು-ಅದೊಂದನ್ನು ಮಾತ್ರ ಒಡೆಯಬೇಡಿರೆಂದು

ಉಳಿಸಿದನು. ಅದೊಂದು ಅರಮನೆಯೂ, ಅದರ ಬಳಿ ಇರುವ ಸುಂದರ ಸರೋವರವೂ, ಮಾತ್ರ ಭಗ್ನಾವಶೇಷವಾಗಿ ಪೂರ್ವದ ಚಿತ್ತೂರಿನ ವೈಭವವನ್ನು ಪ್ರದರ್ಶಿಸುತ್ತ ಇಂದಿಗೂ ಜೀವದೊಂದಿಗಿವೆ!

ರಾಜಪುತ್ರ ಸ್ತ್ರೀಯರು ಜೋಹಾರು ವ್ರತವನ್ನು ಆಚರಿಸಿದ ಆ ಭೀಕರ ಗುಹೆಯ ಬಳಿಗೆ ಈಗಲೂ ಯಾರೂ ಹೋಗಲು ಸಾಧ್ಯವಿಲ್ಲವಂತೆ! ಅಸಹ್ಯ ದುರ್ವಾಸನೆಯೂ, ಹಾವು ಚೇಳು ಜರಿ ಮುಂತಾದ ದುಷ್ಟಪ್ರಾಣಿಗಳೂ, ಅಗಾಧ ಕತ್ತಲೆಯೂ ಅದರ ಬಳಿಗೆ ಎಂತಹ ಧೈರ್ಯಶಾಲಿಯೂ ಹೋಗದಂತೆ ಹೊರತಳ್ಳುತ್ತಿವೆಯಂತೆ! ಈಚೀಚೆಗೆ ಅದರ ದ್ವಾರಪ್ರದೇಶ ಸಹ ಮುಚ್ಚಿಹೋಗಿ, ಅದು ಇದ್ದ ಸ್ಥಳದ ಗುರುತು ಸಹ ಸಿಕ್ಕುವುದಿಲ್ಲವೆಂದು ಹೇಳುತ್ತಾರೆ!

ಇಂತು ಕ್ರಿ. ಶ. ೧೩೦೩ ರಲ್ಲಿ ಅಲ್ಲಾಉದ್ದೀನನಿಂದ ಚಿತ್ತೂರಿನ ಸರ್ವನಾಶವಾಯಿತು. ರಾಣಾಭೀಮಸಿಂಹನ ಆದೇಶದಂತೆ ಹೊರಹೊರಟು ಕೈಲವಾರವನ್ನು ಸೇರಿದ ಅಜೇಯ್ಸಿಯಿಂದ ಚಿತ್ತೂರಿನ ರಾಜವಂಶವು ಪುನಃ ಬೆಳೆಯಿತು. ಅವನ ತರುವಾಯ ಹಮೀರನೆಂಬ ಪ್ರತಾಪಿಯು ಗಾದಿಯನ್ನೇರಿ ಅರುವತ್ತನಾಲ್ಕು ವರ್ಷಕಾಲ ರಾಜ್ಯಭಾರಮಾಡಿದನು.—ವೀರಮಾತೆಯಾದ ಮೇವಾರು ತನ್ನ ಸಾರ್ಥಕನಾಮವನ್ನು ದಕ್ಕಿಸಿಕೊಂಡಿತು. ಅದರ ಪುತ್ರಪುತ್ರಿಯರು, ಎಂತೂ ನಶ್ವರವಾದ ಭೌತಿಕ ಕಾಯಗಳಿಂದಲ್ಲ-ಯಶಃಕಾಯಗಳಿಂದ ಅಮರತ್ವವನ್ನು ಗಳಿಸಿಕೊಂಡರು.

ಧರ್ಮಾಭಿಮಾನಿಗಳೂ, ನಿಸ್ಪೃಹರೂ ಆದ ಭಾರತೀಯರಿಗೆ ಮೇಲೆ ಮೇಲೆ ಇಂತಹ ಕಷ್ಟನಷ್ಟಗಳಿಗೆ ತಲೆಯೊಡ್ಡಬೇಕಾದ ಸ್ಥಿತಿಯೊದಗುತ್ತಿರುವುದು. ಆಗಲೆಲ್ಲ ಅವರಿಗೆ, ತಮ್ಮ ಪೂರ್ವಿಕ ಪುರುಷಪುಂಗವರ, ಸ್ತ್ರೀಶಿರೋಮಣಿಯರ ಪವಿತ್ರ ಕೃತ್ಯಗಳೂ ಉದಾಹರಣೆಗಳಾಗಿ ಬಂದು ಮಾರ್ಗದರ್ಶಕವಾಗಬೇಕಾಗಿದೆ. ಪ್ರಕೃತ ಅಂತಹ ಒಂದು ಬಗೆಯ ಸಂದಿಗ್ಧ ಸ್ಥಿತಿಯಲ್ಲಿ ಜೀವಿಸಬೇಕಾಗಿರುವ ಭಾರತ ಪುತ್ರ ಪುತ್ರಿಯರೂ, ಪ್ರಾಣವನ್ನಾದರೂ ಬಿಟ್ಟು ಮಾನವನ್ನು ದಕ್ಕಿಸಿಕೊಂಡ,-ಧನಕನಕಗಳನ್ನಾದರೂ ಸೂರೆಮಾಡಿ ಧರ್ಮವನ್ನು ರಕ್ಷಿಸಿಕೊಂಡ, ಹೆಚ್ಚೇನು ಲೌಕಿಕವಾದ ಸರ್ವಸ್ವವನ್ನೂ ಬಿಟ್ಟಾದರೂ ತಮ್ಮ ಮಾತೃಭೂಮಿಯ ಗೌರವವನ್ನು ಕಾಪಾಡಿಕೊಂಡ ಆ ಧನ್ಯಜೀವಿಗಳನ್ನು ಮತ್ತೊಮ್ಮೆ ಸ್ಮರಿಸಿಕೊಳ್ಳಲಿ.-ಅವರಲ್ಲೂ ಧೈರ್ಯಸಾಹಸಗಳೂ, ನಿಸ್ಪೃಹತೆ ನಿರ್ಮಮತೆಗಳೂ, ದೇಶಾಭಿಮಾನ ಧರ್ಮಾಭಿಮಾನಗಳೂ ಉಂಟಾಗಲಿ! ತಮ್ಮ ಮಾತೃಭೂಮಿಗೆ ವೀರಮಾತೆಯೆಂಬ ಕೀರ್ತಿಯನ್ನು ತರಲು ಹೆಣಗುವ ಕ್ಷಾತ್ರ ತೇಜವು ಪ್ರತಿಯೊಬ್ಬ ಭಾರತ ಪುತ್ರನಲ್ಲೂ ಪುತ್ರಿಯಲ್ಲೂ ಉದಯವಾಗಿ ಸ್ಫುಟವಾಗಿ ಪ್ರಕಾಶಿಸಲಿ!

ತಥಾಸ್ತು

॥ ಶ್ರೀರಾಮಸಹಾಯಂ ॥

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸ ಪುಸ್ತಕಾವಳಿ)



**ಮುನ್ನುಡಿ:—**

ನಮ್ಮ ಪ್ರಕೃತ ಚರಿತ್ರನಾಯಕರು ಮಹಾದೇವ ಗೋವಿಂದ ರಾನಡೇ ಮಹಾಶಯರು. ಇವರು ೧೯ನೆಯ ಶತಮಾನದಲ್ಲಿ ಜನಿಸಿ, ಭಾರತ ದೇಶೋದ್ಧಾರಕ್ಕಾಗಿ ಶ್ರಮಿಸಿದ ಮಹಾಪುರುಷರಲ್ಲೊಬ್ಬರು. ಇವರ ಪರಿಚಯವನ್ನು ನಮ್ಮ ವಾಚಕವೃಂದಕ್ಕೆ ತಿಳಿಸಿಕೊಡುವ ಒಂದು ಸುಲಭ ಮಾರ್ಗವುಂಟು. ಜಗದ್ವಿಖ್ಯಾತರಾದ ಮಹಾತ್ಮಾ ಗಾಂಧಿಯವರ ಪವಿತ್ರನಾಮವನ್ನು ಕೇಳದವರಾರು! ಈ ಗಾಂಧಿಯವರು, ಯಾವ ಸ್ವರ್ಗವಾಸಿ ಶ್ರೀ ಗೋಪಾಲ ಕೃಷ್ಣ ಗೋಖಲೆಯವರನ್ನು ತಮ್ಮ ರಾಜ್ಯ ಗುರುಗಳೆಂದೆಣಿಸಿದ್ದರೋ, ಆ ಗೋಖಲೆಯವರು ನಮ್ಮ ಕಥಾನಾಯಕರ ಪಾದಮೂಲದಲ್ಲಿ ಕುಳಿತು ರಾಜನೀತಿಯನ್ನೂ ಅರ್ಥಶಾಸ್ತ್ರ ಮರ್ಮಗಳನ್ನೂ ಗ್ರಹಿಸಿ ಅವರ ಶಿಷ್ಯೋತ್ತಮರೆನ್ನಿಸಿದ್ದರು. ಇದರಿಂದ ರಾನಡೇಯವರು ದೇಶಾಭಿವೃದ್ಧಿಕರವಾದ ಯಾವ ಕಾರ್ಯ ಕ್ಷೇತ್ರದಲ್ಲಿ ತಮ್ಮ ವ್ಯವಸಾಯವನ್ನು ನಡೆಸಿದ್ದರೆಂಬುದನ್ನೂ ಸ್ವಲ್ಪ ಮಟ್ಟಿಗೆ ಗ್ರಹಿಸಬಹುದಲ್ಲವೆ! ಅಷ್ಟುಮಾತ್ರವೇ ಅಲ್ಲ:-ರಾನಡೇಯವರು ಮುಂಬಯಿ ಹೈಕೋರ್ಟಿನಲ್ಲಿ ಮಹಾ ಪ್ರತಿಭಾಶಾಲಿಯಾದ ನ್ಯಾಯಮೂರ್ತಿಯೆಂದು ಪ್ರಸಿದ್ಧರಾದವರು. ಅದ್ವಿತೀಯ ಸಮಾಜ ಸೇವಾಧುರೀಣರು. ಅರ್ಥಶಾಸ್ತ್ರ ವಿಶಾರದರು. ದೇಶಚರಿತ್ರಜ್ಞರಲ್ಲಿ ಅದ್ವಿತೀಯರು. ಉಜ್ವಲ ಲೇಖಕರು. ದೇಶಾಭಿಮಾನಿ-ಧರ್ಮಾಭಿಮಾನಿಗಳಲ್ಲಿ ಪ್ರಥಮ ತರಗತಿಯ ಪ್ರಥಮವ್ಯಕ್ತಿಯೆಂದು ಹೆಸರ್ಗೊಂಡವರು! ಈ ಮಹನೀಯರ ಜೀವಿತವು ದೇಶಾಭಿವೃದ್ಧಿ ಸಾಧಕವಾದ ವಿವಿಧಕಾರ್ಯಕಲಾಪಗಳಿಂದ ಲೋಕೋಪಕಾರಕವಾಯಿತು. ಆದುದರಿಂದ ಇವರು ಕೇವಲ ಶ್ರೀಮಂತಕುಟುಂಬದಲ್ಲಿ ಅಲ್ಲದಿದ್ದರೂ-ಹುಟ್ಟಿಬೆಳೆದು ವಿದ್ಯಾಭ್ಯಾಸಮಾಡಿ ಕ್ರಮಕ್ರಮವಾಗಿ ಪ್ರಖ್ಯಾತ ಮಾತೃದೇಶಸೇವಕರೆನಿಸಿಕೊಳ್ಳಲು ಯೋಗ್ಯವಾದ ಮಹತ್ಕಾರ್ಯಗಳನ್ನು

ಮಾಡತೊಡಗಿದುದರ ವಿವರಣೆಯು ತರುಣ ಜನಾಂಗಕ್ಕೆ ಉತ್ತೇಜಕ ಪಾಠವಾಗಲಾರದೆ ? ಆ ದೃಷ್ಟಿಯಿಂದ ಈ ಮಹನೀಯರ ಚರಿತ್ರೆಯನ್ನು ಕುರಿತು ಇಲ್ಲಿ ಪ್ರಸ್ತಾಪಿಸಲೆಳಸುತ್ತೇವೆ.

ನಮ್ಮಲ್ಲಿ ಒಂದು ಬಗೆಯ ವಿಜಾತೀಯ ಸ್ವಭಾವವಿದೆ. ಅದನ್ನು ಗುಣವೆಂದು ಹೇಳುವುದಕ್ಕಿಂತಲೂ ಲೋಪವೆಂದು ಕರೆಯುವುದೇ ಹೆಚ್ಚು ಸಮಂಜಸ! ಏಕೆಂದರೆ ಆ ಸ್ವಭಾವವು, ನಮ್ಮಲ್ಲಿಯ ಮಹಾತ್ಕಾರ್ಯ ಸಾಧಕರಲ್ಲಿರುವ ಅಂತರ್ಯೋದ್ದೇಶವನ್ನೂ ಗುಣಾಧಿಕ್ಯತೆಯನ್ನೂ ಗ್ರಹಿಸಲಾರದು-ಗ್ರಹಿಸಿ ಆನಂದಿಸಲಾರದು; ಆನಂದಿಸಿ ಪ್ರೋತ್ಸಾಹಿಸಲಾರದು. ನಮ್ಮ ದೇಶೀಯರ ಈ ಬಗೆಯ ಮನೋಭಾವನೆಗೂ ಕಾರಣವು ಇಲ್ಲವೆಂದಲ್ಲ:-ನಮ್ಮವರಿಗೆ, ದೃಷ್ಟಿಗೋಚರವಾಗದ ಪರಲೋಕದಲ್ಲಿರುವಷ್ಟು ನಂಬಿಕೆಯು-ಹುಟ್ಟಿ ಬೆಳೆದು ಬದುಕಿದ್ದಷ್ಟುದಿನವೂ ಕಷ್ಟ ಸಂಕಟಗಳನ್ನನುಭವಿಸುತ್ತಾ, ಎದ್ದು ಬಿದ್ದು ಸಾಗಬೇಕಾಗಿರುವ ಇಹಲೋಕ ಜೀವಿತದಲ್ಲಿಲ್ಲ! "ಯಾವನು ಎಷ್ಟು ಓದಿದರೇನು, ಎಷ್ಟು ದುಡ್ಡುಗಳಿಸಿದರೇನು; ಏನುಕೆಲಸ ಮಾಡಿದರೇನು ! ಒಂದು ದಿನ ಕಣ್ಣುಮುಚ್ಚಿಕೊಳ್ಳದಿದ್ದರೆ ತೀರದೋ! " ಎಂದು ಮುಕ್ತಾಯ ಹೇಳಿ ತಮ್ಮ ಅಧ್ಯಾತ್ಮ ಪ್ರಜ್ಞಾಧ್ವಜವನ್ನು ಎತ್ತಲೆಳಸುವ ಸುಜ್ಞಾನಿಗಳಿಗೆ ನಮ್ಮಲ್ಲಿ ಕೊರತೆಯಿಲ್ಲ. ಈ ಬಗೆಯ ಅಭಾವ ವೈರಾಗ್ಯದಿಂದಲೇ ನಾವು ಇಂದು, ಪ್ರಪಂಚದ ಜನಾಂಗಗಳೆದುರಿಗೆ ಎಂತಹ ಕೆಲಸಕ್ಕೆ ಬಾರದ ಕಸ ಭೂಮಿಭಾರಕ ಪಶು, ಎಂಬಂತಹ ಸ್ಥಿತಿಗೆ ಇಳಿದಿದ್ದೇವೆಂಬುದನ್ನು ಅವರು ಅರಿಯರು. ಅವರ ಆ ಮಾತನ್ನು ಕೇಳುವವರಾದರೂ, ಅದನ್ನು ಮೆಚ್ಚಿ ಹೌದೆಂದು ತಲೆದೂಗುವರಲ್ಲದೆ "ಹಾಗೆ ಕೊನೆಯದಾಗಿ ಕಣ್ಣುಮುಚ್ಚಿಕೊಳ್ಳುವವರೆಗಾದರೂ ಕಣ್ಣುತೆರೆದುಕೊಂಡು ಬದುಕಿರಬೇಕಲ್ಲವೋ !" ಎಂದು ಯೋಚಿಸುವುದಿಲ್ಲ. ಇದರಿಂದ ನಮ್ಮಲ್ಲಿ ಕೇವಲ ನಿರುತ್ಸಾಹ, ಜೀವಿತದಲ್ಲಿ ನಿರಾಸೆ, ನ್ಯಾಯವಾದ ಪರಿಶ್ರಮದಲ್ಲೂ ಬೇಸರ, ಅಭಿವೃದ್ಧಿಮಾರ್ಗಗಮನದಲ್ಲಿ ಅನಪೇಕ್ಷೆ, ಮುಂತಾದುವುಗಳೆಲ್ಲವೂ ಉಂಟಾಗಿ, ನಮ್ಮ ಮುದುಕರಂತಿರಲಿ, ಕಳಕಳನೆಂದು ಉದ್ದೀಪಿಸಿ-ಕಾರ್ಯಕ್ಕೆಂದರೆ ಕೊಡಹಿಕೊಂಡೇಳಬೇಕಾಗಿರುವ ಯುವಕರೂ ಸಹ-"ಎಂದಿದ್ದರೂ ಸಾಯಬೇಕಾಗಿರುವ ನಾವು

ಏನು ಮಾಡಿ, ಗಳಿಸುವುದೇನನ್ನು!" ಎಂಬ ಪಲ್ಲವಿಯನ್ನು ಹಾಡುತ್ತಾ, ತಾವು ಕುಳಿತ ಸ್ಥಳದಿಂದ ಏಳದೆ ಅಪ್ರಯೋಜಕರಾಗುತ್ತಿರಲು ಕಾರಣವಾಗಿದೆ.

ಜನಾಂಗದ ಮನಸ್ಸು ಇಂತಹ ನಿಸ್ತೇಜಸ್ಕಸ್ಥಿತಿಯಲ್ಲಿದ್ದಾಗ ಅದನ್ನು ಉದ್ದೀಪಿಸಿ, ಕಾರ್ಯಕ್ಷೇತ್ರಕ್ಕಿಳಿವಂತೆ ಪ್ರೇರಿಸಲು ನಮ್ಮ ಚರಿತ್ರನಾಯಕರಂತಹ ಮಹತ್ಕಾರ್ಯ ಸಾಧಕರ ಜೀವಿತಗಳು ಪ್ರದರ್ಶಿಸಲ್ಪಡಬೇಕಾದುದು ಅತ್ಯಾವಶ್ಯಕಕಾರ್ಯವು. ನಮ್ಮಲ್ಲಿ ಯಾವುದೊಂದು ಮಹತ್ಕಾರ್ಯ ಸಾಧಕನನ್ನು ಅವತಾರಪುರುಷನೆಂದು ಹೇಳಿ-ಒಡನೆ ಆತನನ್ನು ದೇವದೇವತೆಗಳ ಪಙ್ತಿಗೆ ಸೇರಿಸಿಬಿಡುವ ಸಂಪ್ರದಾಯವೊಂದು ನೆಲೆಸಿದೆ. ಇದರಿಂದ ಆತನಲ್ಲಿ ಶ್ರದ್ಧಾಭಕ್ತಿಗಳು ಉಂಟಾಗಲು ಒಂದು ಬಗೆಯ ಸಹಾಯವಾಗಬಹುದಾದರೂ ಇದರಿಂದಲೌಕಿಕವಾಗಿ ಒಂದು ಬಗೆಯ ಹಾನಿಯೂ ಉಂಟಾಗುತ್ತಿದೆ. ಅದನ್ನೂ ನಾವು ಗಮನಿಸಬೇಕಾಗಿದೆ. "ಅವತಾರ ಪುರುಷನಾದ ಆತನು ಸಾಧಿಸಿದ ಕಾರ್ಯವನ್ನು ಹುಲುಮಾನವರಾದ ನಾವು ಹೇಗೆ ಮಾಡಬಲ್ಲೆವು" ಎಂಬ ಹೇಡಿಭಾವವು ಒಡನೆ ನಮ್ಮ ಮನಸ್ಸನ್ನು ಆಕ್ರಮಿಸಿ ಬಿಡುವುದರಿಂದ ಮುಂದೆ ನಾವು ಕೇವಲ ಆತನ ಚಿತ್ರಪಟಕ್ಕೆ ಹೂಮಾಲೆಗಳನ್ನು ಹಾಕಿ ನಾಮಭಜನೆಮಾಡುತ್ತಾ ಆತನ ಹೆಸರು ಹೇಳಿಕೊಂಡು ಪ್ರಸಾದ ಗ್ರಹಣ ಮಾಡಲು ಸಿದ್ಧರಾಗುವೆವಲ್ಲದೆ, ಆತನು ಮಾಡಿದ ಕೆಲಸವನ್ನು ನಾವೂ ಮಾಡಲು ಸಾಧ್ಯವೆ ಎಂದು ಪ್ರಯತ್ನಿಸ ತೊಡಗುವುದಿಲ್ಲ. ಆದುದರಿಂದ ಒಬ್ಬಾನೊಬ್ಬ ಮಹತ್ಕಾರ್ಯ ಸಾಧಕನು ಭಗವಂತನ ಅವತಾರಿಯೋ ಅಥವ ಮನುಷ್ಯ ಮಾತ್ರನೋ ಎಂಬ ವಿಚಾರವನ್ನು ಅವರೋಕ್ಷಜ್ಞಾನಿಗಳಾದ ಮಹನೀಯರ ಪಾಲಿಗೆ ಬಿಟ್ಟು, ನಮ್ಮಂತೆಯೇ ಎರಡುಕಾಲು ಎರಡುಕಣ್ಣುಗಳನ್ನುಳ್ಳ ಆ ವ್ಯಕ್ತಿಗೆ ಸಾಧ್ಯವಾಗುವ ಕಾರ್ಯವನ್ನು ಸಾಧಿಸಲು, ನಾನೂ ಏಕೆ ಪ್ರಯತ್ನಿಸಬಾರದು ! ಎಂಬ ಮನೋಭಾವನೆಯು ನಮ್ಮವರಲ್ಲಿ ಮೂಡಬೇಕಾಗಿದೆ.

ಇಷ್ಟಾದರೂ ಅದೃಷ್ಟ-ಪ್ರಯತ್ನಗಳ ಬಡಿದಾಟ ಬೇರೆ ಉಂಟಲ್ಲ-'ಎಷ್ಟು ಪ್ರಯತ್ನ ಮಾಡಿದರೂ ಫಲವಾಗದಿದ್ದರೆ ಮಾಡುವುದೇನು ? ನಮಗೆ ಅದೃಷ್ಟವಿಲ್ಲವಲ್ಲ, ಎಂದ-ಕೆಲಸಕ್ಕೆ ಪ್ರಾರಂಭಿಸಿ ಪ್ರಯತ್ನವು ಸಾಗದೆ ನಷ್ಟಪಟ್ಟನಂತರವಲ್ಲ-ಅದನ್ನು ಕುರಿತು ಯೋಚಿಸುತ್ತಿರುವಾಗಲೇ ನುಡಿದು, ಸೋಮಾರಿತನದಿಂದ ನುಸುಳಿಕೊಳ್ಳುತ್ತಿರುವ ಹೇಡಿತನಕ್ಕೂ ನಮ್ಮಲ್ಲಿ

ಕೊರತೆಯಿಲ್ಲ. ನಿಸ್ಪೃಹಚಿತ್ತವೃತ್ತಿಯಿಂದ ಶಕ್ತಿಲೋಪವಿಲ್ಲದೆ ಮನಸಾಕ್ಷಿಗೆ ವಿರೋಧವಿಲ್ಲದಂತೆ ಕಾರ್ಯಮಾಡುವುದರಲ್ಲಿ ನಮ್ಮ ದೃಷ್ಟಿಯಿರಬೇಕಲ್ಲದೆ ಅದರ ಫಲದಲ್ಲಲ್ಲ-ಉತ್ತಮರೀತಿಯಿಂದ ನಡೆದ ಕಾರ್ಯವು ಫಲಕೊಡದೆ ಮಾಡುವುದೇನನ್ನು ? ನಮ್ಮ ಕಥಾನಾಯಕರಂತಹ ಉದ್ಯೋಗಶೀಲ ಚಿತ್ತವೃತ್ತಿಯ ವ್ಯಕ್ತಿಶ್ರೇಷ್ಠರು ಉದಾಹರಣಸ್ವರೂಪರಾಗಿರಲು ನಮ್ಮ ತರುಣರು ದೃಢಮುಷ್ಟಿಯನ್ನು ಮುಂದುಮಾಡಿ-''ಒಂದು ಕೆಲಸಕ್ಕಾಗಿ ನೂರುಸಾರಿ ಪ್ರಯತ್ನಿಸುತ್ತೇನೆ. ನೂರುಸಾರಿಯಾ ಫಲಪ್ರದವಾಗದಿದ್ದರೆ ನೂರೊಂದನೆಯಸಾರಿ ಪ್ರಯತ್ನಿಸಿ ಅದನ್ನು ಸಾಧಿಸುತ್ತೇನೆ'' ಎಂಬ ಮನೋಭಾವನೆಯನ್ನು ತಳೆದು ಲೋಕಯಾತ್ರೆಯಲ್ಲಿ ಹೊರಡಲು ಸಿದ್ಧರಾಗಬೇಕು. ಆದರೆ ಇದರಲ್ಲಿ ಗಮನಿಸತಕ್ಕ ಅಂಶವೊಂದುಂಟು! ಯಾವುದೊಂದೇ ಕೆಲಸವು ಎಲ್ಲರಿಗೂ ಯೋಗ್ಯವೆನಿಸದು. ಆದುದರಿಂದ ಒಬ್ಬನು ಒಂದು ಕೆಲಸವನ್ನು ಚುನಾಯಿಸಿಕೊಳ್ಳುವಲ್ಲಿ. ತನ್ನ ದೇಹಬಲ, ಬುದ್ಧಿಬಲ, ಅದರ ವಿಷಯದಲ್ಲಿ ತನಗಿರುವ ಸ್ವಾಭಾವಸಿದ್ಧ ಅಭಿಲಾಷೆ, ಈ ಮುಂತಾದ ಅಲ್ಪಸ್ವಲ್ಪ ಅನುಕೂಲತೆಗಳನ್ನಾದರೂ ಗಮನಿಸದೆ-ಕೇವಲ ಗುಡ್ಡಕ್ಕೆ ಕಲ್ಲುಹೊತ್ತಂತೆ ವಿಚಾರವಿಲ್ಲದೆ ಕೆಲಸಕ್ಕೆ ತೊಡಗಿ ಅದೃಷ್ಟವಿಲ್ಲವೆಂದು ಅಳತೊಡಗಬಾರದು. ಶಿಪಾಯಿಯ ಚಿತ್ತವೃತ್ತಿಯವನು ವೈದ್ಯನಾಗಲಾರನು. ವ್ಯಾಪಾರಿಯು ಧರ್ಮಪ್ರಚಾರಕನಾಗಲಾರನು. ಉಪಾಧ್ಯಾಯನು ಯೋಧನಾಗಲಾರನು.

ನಮ್ಮ ಕಥಾನಾಯಕರು ತಮಗಿದ್ದ ಅನುಕೂಲತೆಗಳನ್ನು ಸಂಪೂರ್ಣವಾಗಿ ಉಪಯೋಗಿಸಿಕೊಂಡು ತಮ್ಮ ದೇಹಮನೋಬುದ್ಧಿಗಳನ್ನು ಸ್ವಜನರ ಸ್ವದೇಶೀಯರ ಸೇವೆಗಾಗಿ ಎಷ್ಟು ಉತ್ತಮರೀತಿಯಿಂದ ವಿನಿಯೋಗಿಸಬಹುದೋ ಅಷ್ಟು ವಿನಿಯೋಗಿಸಿ ಕೃತಕೃತ್ಯರಾದವರು. ಇವರ ಈ ಚರಿತ್ರೆಯೂ ನಮ್ಮ ದೇಶೀಯರ ಈಗಿನ ಅಭಿವೃದ್ಧಿಯಾತ್ರೆಯಲ್ಲಿ ಲೇಶಮಾತ್ರ ಪ್ರಕಾಶವನ್ನುಂಟುಮಾಡಿ ಮಾರ್ಗದರ್ಶಕವಾಗದಿರದು. ಕರ್ಣಾಟಕ ಮಹಾಜನರು-ಇದನ್ನೂ ಯಥಾಪೂರ್ವ ಅಭಿಮಾನದಿಂದ ಸ್ವೀಕರಿಸಿ ಗ್ರಂಥಮಾಲೆಯನ್ನು ಪ್ರೋತ್ಸಾಹಿಸಲೆಂದು ಕೋರುತ್ತೇನೆ.

ಬೆಂಗಳೂರು.
ತಾ|| ೮-೪-೧೯೨೮

ಇತಿ ಸುಜನವಿಧೇಯ
**ಯಂ. ರಾಮರಾವ್**

ಶ್ರೀರಾಮಸಹಾಯಂ

## ಸುಪ್ರಸಿದ್ಧ ನ್ಯಾಯಮೂರ್ತಿ

# ಮಹಾದೇವ ಗೋವಿಂದ ರಾನಡೇಯವರು



**ಅಧ್ಯಾಯ ೧.** **"ಕುವರ-ಕನ್ಯೆ"**

ನಮ್ಮ-ನಿಮ್ಮ ಜನ್ಮಭೂಮಿಯಾದ ಭಾರತದೇಶವು 'ನಮ್ಮ ಮಾತೃಸ್ವರೂಪಿಣಿ' ಎಂದು ಅಡಿಗಡಿಗೆ ನಾವು ಹೇಳಿಕೊಂಡು ಬರುತ್ತಿರುವುದು-ಇಂಗ್ಲೀಯರು, ತಾವು ಗೆದ್ದು ಆಳುತ್ತಿದ್ದೇವೆಂದು ಹೇಳಿಕೊಳ್ಳುತ್ತಿರುವ, ಕಲ್ಲುಮಣ್ಣು ಮರ ಬೆಟ್ಟಗಳಿಂದ ಕೂಡಿ ಚತುರ್ದಿಗಳಿಂದ ನಿರ್ದೇಶಿತವಾಗುವ ಹಿಂದೂಸ್ಥಾನವೆಂಬ ಹೆಸರನ್ನು ಕುರಿತು, ಎಂದು ಸಂಕುಚಿತಾರ್ಥಮಾಡಬಾರದು. ಅವರು ಇದನ್ನು ವ್ಯಾಪಾರಕ್ಕೆ ಅನುಕೂಲಸ್ಥಳವೆಂದಾಗಲೀ, ಉದ್ಯೋಗಕ್ಕೆ ಲಾಭಕರವಾದ ಉತ್ತಮಕ್ಷೇತ್ರವೆಂದಾಗಲೀ, ಕೈಗಾರಿಕೆಗೆ ಉಪಯೋಗವಾಗುವ ಪದಾರ್ಥ ಸಂಗ್ರಹಣಕ್ಕೆ ತಕ್ಕಸ್ಥಳವೆಂದಾಗಲೀ ಇಂತು ಯಾವಭಾವನೆಯಿಂದಾಗಲೀ ತಿಳಿದು, ಮೂಕಪಶುವಿನ ಕಾಲುಬಾಲಗಳನ್ನು ಕಟ್ಟಿ-ಕೊಂಬುಹಿಡಿದು ಕೆಚ್ಚಲಿಂದ ರಕ್ತಬರುವವರೆಗೂ ಹಿಂಡುವ ಕಟುಗಗೌಳಿಗನಂತೆ, ಇದರಿಂದ ಸಾಧ್ಯವಿದ್ದಷ್ಟು ಪ್ರಯೋಜನವನ್ನೂ ಹೊಂದಲಪೇಕ್ಷಿಸಬಹುದು! ಮೇಲೆ ಹೇಳಿದ ಗೌಳಿಗನಿಗೆ ತಾನು ಕರೆವ ಹಾಲಿನ ಪ್ರಮಾಣವು ಹೆಚ್ಚಾಗಿ, ಅದರಿಂದ ತನಗೆ ಹೆಚ್ಚು ದುಡ್ಡು ಬರಬೇಕೆಂಬ ಅತ್ಯಾಸೆಯೊಂದಲ್ಲದೆ, ತಾನು ಹಾಲುಕರೆಯುತ್ತಿರುವ ಹಸುವಿಗೆ ಪ್ರಾಣವಿದೆ; ಅದಕ್ಕೂ ನೋವು ಬಾಧೆಗಳುಂಟಾಗುತ್ತವೆ, ಎಂಬ ಭಾವನೆಯುಂಟಾಗುವುದೆ? ಹಾಗೆಯೇ ಇತರ ವಿಷಯವೂ! ಆದರೆ ಆ ಗೌಳಿಗನು ಹಾಗೆ ಭಾವಿಸಿಕೊಳ್ಳದಿದ್ದರೂ ಹಸುವಿಗೆ ಪ್ರಾಣವಿಲ್ಲವೆ? ಚೈತನ್ಯವಿಲ್ಲವೆ? ಅದಕ್ಕೆ ಕಷ್ಟದುಃಖಗಳ ಅನುಭವವುಂಟಾಗುವುದಿಲ್ಲವೆ? ಹಸಿವು ಬಾಯಾರಿಕೆಗಳಿಲ್ಲವೆ! ಹಾಗೆಯೆ

ನಮ್ಮ ಮಾತೃಭೂಮಿಯನ್ನು ಕುರಿತು ಕೇವಲ ಲಾಭಾಕಾಂಕ್ಷಿಗಳಾದ ಪರದೇಶೀಯರು ಯಾವದೃಷ್ಟಿಯಿಂದ ನೋಡಬಹುದಾದರೂ, ನಾವು ಮಾತ್ರ ಅದನ್ನು ಚೈತನ್ಯ ದೃಷ್ಟಿಯಿಂದಲೇ ನೋಡಬೇಕಾಗಿದೆ. ಏಕೆಂದರೆ ನಾವು ಆಕೆಯಿಂದ ಹೊರಗಿರುವರುವವರಲ್ಲ! ಆಕೆಯ ಗರ್ಭವಾಸಿಗಳು. ಆಕೆಯ ಕಷ್ಟಸುಖಗಳಲ್ಲಿ ಭಾಗಿಗಳು ! ಭಾರತದೇಶಾಧಿದೇವತೆಯಾದ ನಮ್ಮ ಮಾತ್ರಿಗೆ ಚೈತನ್ಯವಿಲ್ಲದಿಲ್ಲ-ಪ್ರಜ್ಞೆಯಿಲ್ಲದಿಲ್ಲ. ಆಕೆಯ ಪವಿತ್ರೋದರದಲ್ಲಿ ಅಸಂಖ್ಯ ಮಹಾಮಹಿಮರು ಜನ್ಮಿಸಿಲ್ಲವೆ? ಅಸಂಖ್ಯ ಖಗಮೃಗಾದಿ ಪ್ರಾಣಿವರ್ಗಗಳು ಜನ್ಮಿಸಿಲ್ಲವೆ ! ಅಸಂಖ್ಯಾಸಂಖ್ಯ ಗಿಡವೃಕ್ಷ ಲತೆತೃಣಾದಿ ಸಸ್ಯವರ್ಗಗಳು ಜನ್ಮಿಸುತ್ತಿಲ್ಲವೆ! ಚೈತನ್ಯವಿರಹಿತವಾದ ಶುಷ್ಕ ಜಡಪ್ರಕೃತಿಯು ಮಹಾಚೈತನ್ಯ ಜನ್ಯಗಳಾದ ಇಷ್ಟು ವಸ್ತುಸಮುದಾಯವನ್ನು ಹೆರುವುದು ಹೇಗೆಸಾಧ್ಯ! ಇಂತು ಸರ್ವಕಾಲ ಸರ್ವಾವಸ್ಥೆಗಳಲ್ಲೂ ಪೂಜನೀಯಳೂ ಪ್ರಾತಃಸ್ಮರಣೀಯಳೂ ಆದ ಭಾರತ ಭೂಮಾತೆಯನ್ನು ಮತ್ತೊಮ್ಮೆ ಸ್ಮರಿಸುತ್ತೇವೆ. ಪುನಃ ಪುನಃ ಸ್ಮರಿಸುತ್ತೇವೆ. ಅದಕ್ಕಾಗಿ ಯಾರೂ ಬೇಸರಗೊಳ್ಳಬಾರದು.

ಭಾರತದೇಶದ ಒಂದೊಂದು ಭಾಗವೂ ಪ್ರತಿಭಾವಂತವಾದುದು. ಕರ್ಣಾಟಕ ಆಂಧ್ರ ದ್ರಾವಿಡ ಕಾಶ್ಮೀರ ಪಾಂಚಾಲ (ಪಂಜಾಬ್) ಗೌಡ (ಬಂಗಾಳ) ಘೂರ್ಜರ (ಗುಜರಾತ್) ರಾಜಪುತ್ರಸ್ಥಾನ ಮಹಾರಾಷ್ಟ್ರ ಮುಂತಾದ ಯಾವ ಪ್ರಾಂತವನ್ನು ನೋಡಿದರೂ ಅಲ್ಲೆಲ್ಲಾ ಅದ್ವಿತೀಯ ದೇಶಾಭಿಮಾನಿಗಳೂ ಧರ್ಮಾಭಿಮಾನಿಗಳೂ, ಭಗವದ್ಭಕ್ತರೂ, ರಣಶೂರರೂ ದಾನವೀರರೂ ಜನ್ಮಿಸಿ ವಿಖ್ಯಾತರಾಗಿರುವರು. ಆದ್ಯಂತ ಭರತಖಂಡವೆಂಬ ಈ ವೃಕ್ಷದಲ್ಲಿ ಉದಯಿಸುವ ಈ ಅಮೌಲ್ಯ ಕುಸುಮಗಳನ್ನು ಎಣಿಸಿ, ಅವುಗಳ ವರ್ಣ-ಪರಿಮಳಗಳನ್ನು ಚಿತ್ರಿಸಿ, ಕೀರ್ತಿಸಿ ಧನ್ಯನಾಗವ ಸುಕೃತಶಾಲಿಯಾವನು! ಅಂತಹ ಅಸಂಖ್ಯಪುಷ್ಪಗಳಲ್ಲ ಕೋಟ್ಯಾನುಕೋಟಿ, ಚೆನ್ನಾಗಿ ಬೆಳೆದ ವಿಕಸಿತವಾಗುವ ಮೊದಲೇ ಸಸ್ಯಾಹಾರಸಾಲದ ಬಡತನವೆಂಬ ಸೂರ್ಯನ ತಾಪದಿಂದ ಬಾಡಿ ಬಸವಳಿದು ನಾಶವಾಗುವುವು. ಲಕ್ಷಾನುಲಕ್ಷ ಇಂತಹ ಪುಷ್ಪಗಳನ್ನು ಮಧುರ ಮಕರಂದ ಪಾನಾಪೇಕ್ಷಿಯಾದ ಸ್ವಾರ್ಥಿಭೃಂಗವು ಪ್ರವೇಶಿಸಿ ಕೊಳ್ಳೆಹೊಡೆದು ನಿಸ್ತೇಜಗೊಳಿಸುವುದು. ಇನ್ನಿತರ ಅಸಂ

ಷ್ಯ ಪುಷ್ಪಗಳು ತಮ್ಮ ಸೌಂದರ್ಯ ಸೌರಭಗಳ ಕಾರಣದಿಂದ ಸ್ವಾರ್ಥಿಗಳಾದ ಜನರಿಂದ ಬಂಧಿಸಲ್ಪಟ್ಟು ಅವರಮುಡಿಗಳಲ್ಲಿ ಸೆರೆಬಿದ್ದು ದೆಸೆಗಾಣದೆ ಬಾಡಿ ಒಣಗಿ ನಾಶವಾಗುವುವು. ಈ ಬಗೆಯ ಪುಷ್ಪಕೋಟಿಗಳಲ್ಲಿ ಎಲ್ಲೋ ಬಹು ಸ್ವಲ್ಪ ಸಂಖ್ಯೆಯುವು ಮಾತ್ರ, ದಾರದಿಂದ ಕಟ್ಟಲ್ಪಟ್ಟರೂ ಪರಮಾತ್ಮ ನ ಶಿರಿಮುಡಿಯನ್ನೇರಿ ಶೋಭಿಸುವುವು. ಅಲ್ಲದೆ ಬಿಡಿಹೂಗಳನ್ನು ಪರಿಸುವು ದೂ ಉಂಟಲ್ಲವೆ? ಸಾಕು, ಅಷ್ಟೇಸಾಕು! ಆ ಒಂದೊಂದು ಪುಷ್ಪವೇ ಇದು ಸಂಪಿಗೆ ಇದು ಮಲ್ಲಿಗೆ ಇದು ಪಾರಿಜಾತ ಇದು ಸುಗಂಧರಾಜ, ಎಂದು ತನಗೆ ಜನ್ಮವಿತ್ತ ಗಿಡಮರಬಳ್ಳಿಗಳ ಕೀರ್ತಿಯನ್ನು ಚಿರಗೊಳಿಸಿ. ಅವುಗಳ ಜನ್ಮ ಸಾರ್ಥಕ್ಯಕ್ಕೆ ಯೋಗ್ಯವಾಗುವುವಲ್ಲವೆ? ಹಾಗೆಯೇ, ಮೇಲ್ಕಂಡ ಭರತ ಖಂಡ ಮಹಾವೃಕ್ಷದ ವಂಗ ಮಹಾರಾಷ್ಟ್ರಾದಿ ಶಾಖೆಗಳಲ್ಲಿ ಬಿಟ್ಟು ಮಾತೃ ಸೇವೆಗೆ ವಿನಿಯೋಗವಾಗುವ ಒಂದೊಂದು ಪುಷ್ಪವೂ ಆ ಮಹಾ ವೃಕ್ಷಕ್ಕೆ ಕೀರ್ತಿತರಬಲ್ಲುದು! ಅದರ ಜನ್ಮವನ್ನು ಸಾರ್ಥಕಗೊಳಿಸಲುಳ್ಳದು. ಆದ್ಯಂತ ಭಾರತದೇಶವನ್ನು ಈ ದೃಷ್ಟಿಯಿಂದ ಪರಿಶೀಲಿಸಿ ದೇಶಾಭಿಮಾನವನ್ನು ತಳೆವ ಸೌಜನ್ಯವೂ ಔದಾರ್ಯವೂ ನಮ್ಮಲ್ಲುಂಟಾಗಲಿ! ಅದು ಮಾತ್ರವೇ ನಮ್ಮಲ್ಲಿ ಐಕಮತ್ಯ ಭ್ರಾತೃ ಭಾವಗಳನ್ನು ಸ್ಥಾಪಿಸಲು ಸಹಕಾರಿಯಾಗು ವುದು! ಅಲ್ಲವೆ?

ನಮ್ಮ ಕಥಾನಾಯಕರನ್ನು ಹೆತ್ತುದು ಮಹಾರಾಷ್ಟ್ರದಲ್ಲಿ ಸುಪ್ರ ಸಿದ್ಧವಾದುದೆನಿಸಿದ ಚಿತ್ಪಾವನ ಬ್ರಾಹ್ಮಣಸಮಾಜವು. ಈ ಸಮಾಜದಲ್ಲೇ ಪೂರ್ವದಲ್ಲಿ ಬಾಜಿರಾವ್ ನಾನಾಪಡ್ನವೀಸ್—ಈಚೆಗೆ ಲೋಕಮಾನ್ಯತಿಲಕ್ ಗೋಖಲೇ ಮುಂತಾದ ಮಹನೀಯರೂ ದೇಶಾಸೇವಾದೀಕ್ಷಿತರೂ ಜನನ ಹೊಂದಿದುದು. ನಮ್ಮ ಕಥಾನಾಯಕರ ಪೂರ್ವಿಕರು, ನಾಲ್ಕಾರು ತಲಾಂತರ ಗಳ ಹಿಂದೆ, ರತ್ನಾಗಿರಿ ಜಿಲ್ಲೆಯಲ್ಲಿ ವಾಸವಾಗಿದ್ದು, ಅಲ್ಲಿ ಗೃಹಕೃತ್ಯದಲ್ಲಿನ ತಾಪತ್ರಯ-ಒಳಜಗಳಗಳಿಂದ ಬೇಸತ್ತು ಸ್ವಗ್ರಾಮದಿಂದ ಹೊರಟು ಷೋ ಲಾಪುರ ಜಿಲ್ಲೆಗೆ ಬಂದು, ಮುಂದೆ ಅಲ್ಲೇ ನೆಲೆಸಿದರೆಂದು ಅವರ ವಂಶಚರಿತ್ರೆ ಯಲ್ಲಿ ಉದಾಹೃತವಾಗಿದೆ. ಇವರ ಪೂರ್ವಿಕರಲ್ಲಿ ಎಷ್ಟುಮಟ್ಟಿನ ಶ್ರದ್ಧಾ ಭಕ್ತಿ ಗಳಿದ್ದುವು ಎಂಬುದನ್ನು ಪ್ರದರ್ಶಿಸಲು, ನಮ್ಮ ಕಥಾನಾಯಕರ ತಂದೆಯ ಪ್ರಪಿತಾಮಹೀಗೆ ಸಂಬಂಧಿಸಿದ ಒಂದು ವಿಚಾರವು ಹೇಳಲ್ಪಟ್ಟಿದೆ. ಆಕೆಗೆ

ಜನಿಸಿದ ಹತ್ತೊಂಬತ್ತು ಮಂದಿ ಮಕ್ಕಳಲ್ಲಿ ಒಬ್ಬನೂ ಬದುಕದೆ-ಸತ್ತು ಸತ್ತು ಹೋಗುತ್ತಿದ್ದುದರಿಂದ, ಆಕೆಯು ಕೊನೆಗೆ ಬಹುಕಠಿಣದ ಒಂದು ವ್ರತಾಚರಣೆಯನ್ನು ಕೈಕೊಂಡಳಂತೆ! ಆ ವ್ರತವನ್ನು ಹನ್ನೆರಡು ವರ್ಷಕಾಲ ಸಾಂಗವಾಗಿ ನೆರವೇರಿಸಿದಳಂತೆ! ಆಕೆಯು ಆ ವ್ರತಸಾಧನೆಗಾಗಿ ಕೈಕೊಂಡ ಭಗವತ್ಸೇವಾದಿ ಕಾರ್ಯಗಳಲ್ಲದೆ, ಮತ್ತೊಂದು ವಿಚಾರವು ಅತಿಕೌತುಕವಾದುದಿದೆ. ಆಕೆಯು ಒಂದು ಗೋವಿಗೆ ಒಂದುಲಕ್ಷ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡುತ್ತೇನೆಂದು ಸಂಕಲ್ಪಿಸಿ, ಅದಕ್ಕೆ ಜೋಳವನ್ನು ತಿನಲಿಟ್ಟು ಅದರ ದೇಹದಲ್ಲಿ ಜೀರ್ಣಿಸದೆ ಹೊರಬಿದ್ದ ಕಾಳುಗಳನ್ನು ಬೀಸಿಕೊಂಡು ಆ ಹಿಟ್ಟಿನಿಂದ ಮಾಡಿದ ರೊಟ್ಟಿಯನ್ನು ಆ ವ್ರತಕಾಲದಲ್ಲಿ ತಿಂದು ಜೀವಿಸಿದ್ದಳೆಂದೂ ಉದಾಹೃತವಾಗಿದೆ! ಈ ಬಗೆಯ ಕಠಿಣ ವ್ರತಪಾಲನೆಯಿಂದ ಕೊನೆಗೆ ಭಾಸ್ಕರ ಅಪ್ಪಾರಾವ್ ಎಂಬೊಬ್ಬ ಮಗನು ಹುಟ್ಟಿ-ಜೀವಿಸಿ ವಂಶೋದ್ಧಾರಕನಾದನು.

ಈತನು ವಿದ್ಯಾ ಬುದ್ಧಿಗಳನ್ನು ಕಲಿತು ಪ್ರಬುದ್ಧನಾದಮೇಲೆ, ಸೈನ್ಯದಲ್ಲಿ ಒಂದು ಉದ್ಯೋಗಕ್ಕೆ ಸೇರಿದನು. ಮುಂದೆ ಒಂದಾನೊಂದುವೇಳೆ ಮೊಗಲ್ ಸೈನ್ಯದಮೇಲೆ ದಂಡೆತ್ತಿಹೋದಕಾಲದಲ್ಲಿ ಜಯ ಹೊಂದಲಾಗಿ. ಆತನು ತನ್ನ ಕಡೆಯವರೆಲ್ಲರೂ, ಶತ್ರುಸೈನ್ಯದ ಸರ್ವಸ್ವವನ್ನೂ ಕೊಳ್ಳೆಗೊಳ್ಳುತ್ತಿದ್ದರೂ, ತಾನು ಮಾತ್ರ ಅದರಲ್ಲಿ ಪ್ರವೇಶಿಸಿ ತನ್ನ ಹಸ್ತಗಳನ್ನು ಕಳಂಕಗೊಳಿಸಿಕೊಳ್ಳಲು ಒಪ್ಪಲಿಲ್ಲವಂತೆ! ಈ ಬಗೆಯ ನಿಸ್ಪೃಹತೆಗೆ ತಕ್ಕ ಪ್ರತಿಫಲವು ದೊರೆಯದಿದ್ದೀತೆ? ಕಾಲಕ್ರಮದಲ್ಲಿ ಆತನು ಉನ್ನತೋನ್ನತ ಉದ್ಯೋಗಗಳನ್ನು ಹೊಂದುತ್ತಾ, ಕೊನೆಗೆ ಸಾಂಗ್ಲಿ ಸಂಸ್ಥಾನದ ರಾಯಭಾರಿಯಾಗಿ ಪೂನಾದಲ್ಲಿ ಪೇಷ್ವೆಯ ಆಸ್ಥಾನದಲ್ಲಿ ವಾಸಿಸಿದನು. ಆತನ ಧೈರ್ಯಸಾಹಸಗಳೂ, ಅಂತೆಯೇ ನಿಸ್ಪೃಹತೆ ಭಗವದ್ಭಕ್ತಿಗಳೂ-ವ್ಯವಹಾರಜ್ಞಾನ, ಚಾತುರ್ಯಾದಿಗಳೂ ಪ್ರಶಂಸನೀಯವಾಗಿದ್ದುವು. ಆತನು ೯೫ ವರ್ಷಕಾಲ ಜೀವಿಸಿದರೂ, ಕೊನೆಯವರೆಗೂ 'ಯಾವುದೊಂದು ಅಂಗ—ಇಂದ್ರಿಯ ವೈಕಲ್ಯವನ್ನೂ ಹೊಂದದೆ, ದಂತಗಳೂ ಸಡಲದೆ ದೃಢಾಂಗನಾಗಿದ್ದನಂತೆ! ಸಾಯುವುದಕ್ಕೆ ಆರುತಿಂಗಳು ಮುಂಚಿನವರೆಗೆ, ಆತನು ಯಾರೊಬ್ಬರ ಸಹಾಯವನ್ನೂ ಅಪೇಕ್ಷಿಸದೆ ಕುದುರೆಯನ್ನೇರಿ ಅದು ದಣಿಯುವಂತೆ ಸವಾ

ರ ಮಾಡುತ್ತಿದ್ದನೆಂದು ಹೇಳಲ್ಪಟ್ಟಿದೆ. ಮಾತಾಪಿತೃಗಳ ಜಿತೇಂದ್ರಿಯತ್ವವು ಮಕ್ಕಳ ದೇಹಾರೋಗ್ಯಕ್ಕೆ ಸಾಧನೀಭೂತವೆಂಬುದಕ್ಕೆ ಇದಕ್ಕಿಂತಲೂ ಉತ್ತಮ ಉದಾಹರಣೆಯು ಎಲ್ಲಿ ಸಿಕ್ಕೀತು!

ರಾನಡೇಯವರ ಪಿತಾಮಹನು ಭಾಸ್ಕರ ಅಪ್ಪಾರಾಯನ ಮಗನಾದ ಅಮೃತರಾವ್ ಎಂಬಾತನು. ಈತನಾದರೂ ತಂದೆಯಂತೆಯೇ ದೃಢಾಂಗನೂ ಆಜಾನುಬಾಹುವೂ ಕುದುರೆಯೋಟದಲ್ಲಿ ಅದ್ವಿತೀಯನೂ ಆಗಿದ್ದನು. ಈತನಿಗೆ ಸಂಸ್ಕೃತಭಾಷೆಯಲ್ಲೂ ಹಿಂದೂಮತ ಸಿದ್ಧಾಂತಗಳಲ್ಲೂ ಅತಿಶಯ ಭಕ್ತಿಶ್ರದ್ಧೆಗಳಿದ್ದುವು. ಈತನು ಮಹಾರಾಷ್ಟ್ರ ಭಾಷೆಯಲ್ಲಿ 'ಪುರುಷಸೂಕ್ತ'ಕ್ಕೆ ವ್ಯಾಖ್ಯಾನವನ್ನು ಬರೆದಿದ್ದನೆಂದೂ ಉಲ್ಲೇಖವಿದೆ. ಅಮೃತರಾಯನು ಪೇಷ್ವೆಯವರ ಅಧಿಕಾರದಲ್ಲಿ ರಾಜ್ಯಾಂಗ ಉದ್ಯೋಗಕ್ಕೆ ಸೇರಿ ಮಾಮಲೇದಾರನಾಗಿ-ನಿಸ್ಪೃಹತೆಯಲ್ಲಿ ತನ್ನ ತಂದೆಗೆ ಕಡಮೆಯೆನಿಸಿಕೊಳ್ಳದ ಕೀರ್ತಿಶರೀರಿಯಾದನು.

ಅಮೃತರಾಯನ ಗರ್ಭಸಂಭೂತರಾದ ನಾಲ್ಕು ಮಂದಿಯಲ್ಲಿ ನಮ್ಮ ಕಥಾನಾಯಕರ ತಂದೆಯಾದ ಗೋವಿಂದರಾಯನು ದ್ವಿತೀಯಪುತ್ರನು. ಆತನು ನಿಪ್ಪಾಣಿ ಎಂಬ ತಾಲ್ಲೂಕಿನಲ್ಲಿ ಬಹುಕಾಲ ಸರ್ಕಾರಿ ಗುಮಾಸ್ತೆಯಾಗಿದ್ದು ನಮ್ಮ ಕಥಾನಾಯಕನು ಹುಟ್ಟಿದಮೇಲೆ, ಕೊಲ್ಹಾಪುರದ ಸಂಸ್ಥಾನಾಧಿಪತಿಗೆ ಖಾಸಗಿ ಕಾರುಭಾರಿಯಾಗಿ ನಿಯಮಿತನಾದನು. ಆ ಉದ್ಯೋಗಕ್ಕೆ ತಿಂಗಳೊಂದಕ್ಕೆ ೩೫೦ ರೂ. ಗಳ ಸಂಬಳವಿದ್ದು ಮುಂದೆ ಆತನು ಉತ್ತಮ ರೀತಿಯಿಂದ ಗೃಹಕೃತ್ಯ ಸಾಗಿಸಲು ಅನುವಾಯಿತು. ಗೋವಿಂದರಾಯನೂ ತನ್ನ ತಂದೆ ತಾತಂದಿರಂತೆಯೇ ನಿಸ್ಪೃಹಿಯು, ಸತ್ಯಪ್ರಿಯನು, ಋಜುಮಾರ್ಗಾನುವರ್ತಿಯು, ಮಿತಭಾಷಿಯು, ದೃಢಚಿತ್ತನು. ಆದರೂ ಆತನಲ್ಲಿ ಉದಾರತೆಗೂ, ಅಣ್ಣತಮ್ಮಂದಿರಲ್ಲಿ ಪ್ರೇಮಸ್ನೇಹಾನುಬಂಧಗಳಿಗೂ ಕೊರತೆ ಇರಲಿಲ್ಲ. ತನ್ನ ನೆಂಟರಿಷ್ಟರಿಗೆ ಮದುವೆ ಮುಂಜಿಯ ಕಾಲಗಳಲ್ಲೂ ಹಬ್ಬ ಹುಣ್ಣಿಮೆಗಳಲ್ಲೂ ಅವರ ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸುವುದರಲ್ಲೂ ತಾನು ಸಾಲಗಾರನಾಗಬಹುದೆಂಬುದನ್ನು ಸಹ ಯೋಚಿಸದೆ ಬಹು ಧಾರಾಳವಾಗಿ ಸಹಾಯ ಮಾಡುವನು. ಈತನು ಗೋಪಿಕಾಬಾಯಿ ಎಂಬ ಕನ್ಯಾರತ್ನವನ್ನು ಪರಿಗ್ರಹಿಸಿ, ಯುಕ್ತ ಗೃಹಧರ್ಮಪಾಲನೆ ಮಾಡು

ತ್ರ. ಆಕೆಯು ಉದರದಲ್ಲಿ ೧೮೬೩ನೆ ಸಂ| ದ ಜನವರಿ ೧೮ನೆಯ ದಿನ ಮಹಾದೇವನೆಂಬ ಕುವರನನ್ನು ಪಡೆದನು. ಈ ಕುವರನೇ ಮಹಾದೇವಗೋವಿಂದ ರಾನಡೇ ಎಂದು ಪ್ರಸಿದ್ಧನಾದ ನಮ್ಮ ಕಥಾನಾಯಕನು.

ನಾವು ಯಾವನೊಬ್ಬ ಮಹಾಪುರುಷನ ಚರಿತ್ರೆಯನ್ನು ಕೊಡುವಾಗಲೂ, ಆತನ ಮಾತಾಪಿತೃಗಳ ವಿಚಾರವನ್ನು ಇಷ್ಟು ವಿಸ್ತಾರವಾಗಿ ಹೇಳುವುದೇಕೆಂದು ಯಾರಾದರೂ ಯೋಚಿಸಬಹುದು! ಅದಕ್ಕೆ ಅರ್ಥವಿಲ್ಲವೆಂದು ಎಣಿಸಬಾರದು ಲೋಕದಲ್ಲಿ ವಂಶವನ್ನು ವೃಕ್ಷಕ್ಕೆ ಹೋಲಿಸುವ ಪದ್ಧತಿಯುಂಟಲ್ಲವೆ! ನಾವು ಮಾವಿನ, ಹಲಸಿನ, ಬಾಳೆಯ, ಹಣ್ಣುಗಳನ್ನು ನೋಡಿ ಅವು ಕ್ರಮವಾಗಿ ಮಾವಿನಮರ-ಹಲಸಿನಮರ-ಬಾಳೆಯ ಮರಗಳಿಂದಲೇ ಜನಿಸಿ ಬಂದುವೆಂದು ನಿರ್ಧರಿಸುತ್ತೇವೆಯಲ್ಲದೆ, ಮಾವಿನಹಣ್ಣು ಹಲಸಿನಮರದಿಂದಲೂ ಹಲಸಿನಹಣ್ಣು ಬಾಳೆಯಮರದಿಂದಲೂ ಬಂದುದೆಂದು ಯೋಚಿಸುವುದಕ್ಕೆ ಕಾರಣವಿಲ್ಲವಷ್ಟೆ! ಏಕೆಂದರೆ, ಒಂದೊಂದು ಹಣ್ಣಿಗೂ ಅದದಕ್ಕೆ ಯುಕ್ತವಾದ-ಸ್ವಾಭಾವಿಕ ಗುಣವುಂಟು, ರುಚಿಯುಂಟು, ವಾಸನೆ-ಮಾಧುರ್ಯಗಳುಂಟು. ಹೀಗೆಯೇ ಮನುಷ್ಯ ವರ್ಗಕ್ಕೂ ಗೊತ್ತಾದ ಕೆಲವು ಗುಣಗಳುಂಟು, ಧರ್ಮಗಳುಂಟು, ಮನಸ್ಥಿತಿಗಳುಂಟು, ಸ್ವಭಾವಗಳುಂಟು, ಕರ್ಮಗಳುಂಟು! ಅವುಗಳನ್ನು ಅನುಸರಿಸಿ ಮನುಷ್ಯವರ್ಗದಲ್ಲೂ ವಿಂಗಡಗಳುಂಟಾಗುತ್ತವೆ. ಇದಂತಿರಲಿ! ಒಂದು ವಂಶದಲ್ಲಿನ ವ್ಯಕ್ತಿಗಳಲ್ಲಿ ತೋರಿಬಂದ ಗುಣಧರ್ಮ ಸ್ವಭಾವಾದಿಗಳೂ, ದೇಹದಾರ್ಢ್ಯ ಇಂದ್ರಿಯ ನಿಗ್ರಹಾದಿಗಳೂ, ಪರೋಪಕಾರ ಭಗವದ್ಭಕ್ತ್ಯಾದಿ ಸದ್ಭಾವಗಳೂ, ತಪ್ಪದೆ ಅವರ ಸಂತಾನರಲ್ಲಿ ಪ್ರತಿಫಲಿಸುವುವು. ಅಂತೆಯೇ ಅವರಲ್ಲಿದ್ದ ಸುಳ್ಳು ಕಳ್ಳತನ ಮೋಸ ಕಾಪಟ್ಯಾದಿ ದುರ್ಗುಣಗಳೂ, ನಾಸ್ತಿಕತೆ ಧರ್ಮಬಾಹಿರತೆಗಳೂ, ದುಂದುಗಾರಿಕೆ ವ್ಯಭಿಚಾರಾದಿ ದೋಷಗಳಾದರೂ ತಪ್ಪದೆ ಅವರ ಮಕ್ಕಳ ತಲೆಯಮೇಲೆ ಹೊರಿಸಿಟ್ಟ ಗಂಟುಗಳೆಂದೇ ಭಾವಿಸಬೇಕು. ಆದುದರಿಂದ ಮಾತಾಪಿತೃಗಳು ಈ ನಿಯಾಮಕ ತತ್ವವನ್ನು ತಿಳಿದು ನಡೆವುದರಿಂದ ಉತ್ತಮ ಸಂತಾನರನ್ನು ಪಡೆದು ವಂಶವನ್ನು ಉತ್ತಮಗೊಳಿಸಿಕೊಳ್ಳುವುದು ಕಷ್ಟನೆನಿಸಲಾರದು. ಕಾರ್ಯಕಾರಣಗಳ ವಿಧಾಯಕ ತತ್ವವನ್ನು ಅನುಸರಿಸಿ ನಡೆಯುತ್ತಿರುವ ಪ್ರಕೃತಿಯ ಈ ಧರ್ಮವು ಎಂದಿಗೂ ಹುಸಿಯಾಗದು ಎಂಬು

ದನ್ನು ನಾವು ಮರೆಯಬಾರದು. ಯಾವ ಕಾರಣವನ್ನು ಅನುಸರಿಸಿ ಯಾವ ಕಾರ್ಯವು ನಡೆವಿದೆ ಎಂಬುದು ಪ್ರತ್ಯಕ್ಷವಾಗಿ ನಮ್ಮ ದೃಷ್ಟಿಗೋಚರವಾಗದಿರಬಹುದು. ಆದರೇ ಅದು ಎಂದಿಗೂ ವ್ಯರ್ಥವಾಗದು. ಯಾವುದೊಂದು ವಂಶದಲ್ಲಿ ದಾನವೀರನೂ, ನ್ಯಾಯ ಮಾರ್ಗ ತತ್ಪರನೂ ಪರೋಪಕಾರನಿರತನೂ, ತತ್ವ ಜ್ಞಾನಿಯೂ, ಮೇಧಾವಿಯೂ ಜನಿಸಿದ್ದನೆಂದರೆ ಆತನ ಪೂರ್ವಿಕರಲ್ಲಿ ಯಾರೋ ಮಹನೀಯರು, ಅತಿಶಯುನಿಯಮವಂತರಾಗಿ-ಭಗವದ್ಭಕ್ತರಾಗಿ ಜನ್ಮಸಾರ್ಥಕತೆಗಾಗಿ ತಪಸ್ಸು ಮಾಡಿದ್ದರೆಂದೇ ಭಾವಿಸಬೇಕು-ಅಲ್ಲ ತಿಳಿಯಬೇಕು. ಏಕೆಂದರೆ ಹಾಗಲ್ಲದಿದ್ದರೆ ಆ ವಂಶ ವೃಕ್ಷವು ಅಂತಹ ಉತ್ತಮ ಫಲವನ್ನು ಬಿಡಲಾರದು. ಅದಕ್ಕೆ ಕಾರಣವಿರದು! ಹಾಗೆಯೇ ಉತ್ತಮ ಸಂತಾನರನ್ನು ಹೆತ್ತು, ತಮ್ಮ ವಂಶಕೀರ್ತಿಯನ್ನು ಆಚಂದ್ರಾರ್ಕ ಸ್ಥಿರಗೊಳಿಸಬೇಕೆಂದು ಅಪೇಕ್ಷಿಸುವ ಮಾತಾಪಿತೃಗಳು ಅಂತಹ ಉತ್ತಮ ಚೇತನರನ್ನು ಆಕರ್ಷಿಸುವಂತೆ ತಮ್ಮ ನಡತೆಯನ್ನೂ ದೇಹಮನೋ ಬುದ್ಧಿಗಳನ್ನೂ ಶುದ್ಧಪಡಿಸಿಕೊಂಡರಾಯಿತು. ಮಕ್ಕಳನ್ನು ಹೆತ್ತು, ಅವರನ್ನು 'ಐಶ್ವರ್ಯವಂತನಾಗು, ಭಾಗ್ಯವಂತನಾಗು, ಮದುವೆಯ ಮದುಮಗನಾಗು ಎಂದು ಹರೆಸುದರೊಂದಿಗೆ, ನಮ್ಮ ಕರ್ಣಾಟಕ ಮಾತೃಗಳು—' ಸತ್ಯಸಂಧನಾಗು, ಪ್ರಜ್ಞಾನಿಧಿಯಾಗಿ, ದೇಶೋದ್ಧಾರಕ್ಕಾಗಿ ದೇಹವನ್ನು ತೇಯುವವನಾಗು, ಎಂದೂ ಹರಸುವವರಾಗಲಿ! ಆ ಭಾವನೆಯಿಂದಲೇ ಮಕ್ಕಳನ್ನು ಪೋಷಿಸಲಿ! ಅಂದಿಗೆ ಕರ್ಣಾಟಕವು ಭಾರತದ ಇತರ ಪ್ರಾಂತಗಳನ್ನೂ, ಪೃಥ್ವಿಯ ಇತರ ಖಂಡಗಳನ್ನೂ ವಿಾರಿಸಲು ಏಕೆ ಶಕ್ತನಾಗಲಾರದು?

ಮಹಾದೇವನು ಎರೆಡೂವರೆ ಮೂರುವರ್ಷಗಳ ವಯಸ್ಕನಾಗಿದ್ದಾಗ ಆವನಿಗೆ ಬಹು ಆಶ್ಚರ್ಯಕರವಾದ ರೀತಿಯ ಒಂದು ಅಪಾಯ ಒದಗಿತು. ಗೋವಿಂದರಾಯನ ಪತ್ನಿಯಾದ ಗೋಪಿಕಾಬಾಯಿಯು ತನ್ನ ಆ ಮಗನನೂ ಕೈಗೂಸಾದ ದುರ್ಗಾ ಎಂಬ ಹೆಣ್ಣು ಮಗಳನ್ನೂ ಕರೆದುಕೊಂಡು, ಒಂದು ಎತ್ತಿನ ಗಾಡಿಯಲ್ಲಿ ನಿಪ್ಪಾಡಿಯಿಂದ ಪ್ರಯಾಣ ಹೊರಟಳು. ಆಕೆಯ ಮೈದುನನಾದ ವಿಠಲರಾಯನೆಂಬಾತನು ಕುದುರೆಯೇರಿ ಬಂಡಿಯ ಜೊತೆಗೆ ಹೊರಟಿದ್ದನು. ರಾತ್ರಿ ಸುಮಾರು ಎರಡು ಗಂಟೆಯವೇಳೆ; ಗಾಢಾಂಧಕಾರ. ಬೆಳಗಿನ ಜಾವದ ತಂಗಾಳಿಯು ಸೂಕ್ಷ್ಮವಾಗಿ ಚಲಿಸತೊಡಗಿದ್ದಿತು.

ಆವರೆಗೆ ನಿದ್ರೆಗೆಟ್ಟಿದ್ದುದರಿಂದ ಬಂಡಿಯಲ್ಲಿದ್ದವರಿಗೆಲ್ಲರಿಗೂ ನಿದ್ರೆ ಹತ್ತಿತು. ಎತ್ತುಗಳು ಮನಬಂದಂತೆ ಗಂಟೆಗೊಂದು ಹೆಜ್ಜೆಯನ್ನಿಡುತ್ತಾ ನಡೆಯುತ್ತಾಗಿದ್ದುವು. ಆವೇಳೆಗೆ ಸ್ವಲ್ಪ ಇಳಿಜಾರಾದ ರಸ್ತೆ ಸಿಕ್ಕಿದುದರಿಂದ ಎತ್ತುಗಳು ಓಡಲಾರಂಭಿಸಿದವು. ಮಗುವಾದ ಮಹಾದೇವನು ನಿದ್ರೆಯಲ್ಲಿ ಹೊರಳಿಕೊಂಡು ಬಂಡಿಯ ಒಂದು ಕೊನೆಗೆ ಬಂದಿದ್ದನು. ಆ ವೇಳೆಯಲ್ಲಿ ಎತ್ತುಗಳು ಒಂದು ಸಾರಿ ಎಡಹಿದುದರಿಂದ ಬಂಡಿಯಲ್ಲಿದ್ದವರನ್ನು ಎತ್ತಿ ಕುಕ್ಕಿದಂತೆ ಚಲನೆಯಾಗಲು, ಮಗುವು ಬಂಡಿಯಿಂದ ಕೆಳಕ್ಕುರುಳಿ ರಸ್ತೆಯಲ್ಲಿ ಬಿದ್ದನು. ಬಂಡಿಯಲ್ಲಿ ಯಾರಿಗೂ ಎಚ್ಚರವಿರಲಿಲ್ಲವಾಗಿ, ಮಗು ಬಿದ್ದ ಸಂಗತಿಯೂ ಯಾರಿಗೂ ತಿಳಿಯಲೇ ಇಲ್ಲ. ಬಂಡಿಯು ನಿದಾನವಾಗಿಯೇ ಸಾಗಿ, ಸುಮಾರು ಒಂದು ಒಂದೂವರೆ ಮೈಲುದೂರ ಹೊರಟುಹೋಯಿತು. ಕುದುರೆಯೇರಿ ಬರುತ್ತಿದ್ದ ವಿಠ್ಠಲರಾಯನು ಯಾವ ಕಾರಣದಿಂದಲೋ ಹಿಂದೆ ಬಿದ್ದಿದ್ದು ಮಗು ಕೆಳಗೆ ಬಿದ್ದ ಸುಮಾರು ಕಾಲುಗಂಟೆ-ಅರ್ಧಘಂಟೆಯಮೇಲೆ ಕುದುರೆಯನ್ನೋಡಿಸಿಕೊಂಡು ಆಸ್ಥಳಕ್ಕೆ ಬಂದನು. ಕುದುರೆಯ ಕಾಲುಗೊರಸುಗಳ ಶಬ್ದವನ್ನು ಕೇಳಿದ ಮಹಾದೇವನು—'ವಿಠ್ಠೂಕಾಕಾ, ಬಂಡಿಯಿಂದ ಬಿದ್ದು ನಾನು ಇಲ್ಲಿದ್ದೇನೆ' ಎಂದು ಕೂಗಿಕೊಂಡನು. ಆಗ- ನಡುರಾತ್ರಿಯ ಕತ್ತಲಲ್ಲಿ-ಅಲ್ಲಿ ಏಕಾಂಗಿಯಾಗಿ ಬಿದ್ದಿದ್ದ ಆ ಮಗುವಿನ ಧ್ವನಿಯನ್ನು ಕೇಳಿದಾಗ ಆತನಿಗೆ ಉಂಟಾದ ಆಶ್ಚರ್ಯ ಭಯಗಳನ್ನು ಹೇಗೆ ವರ್ಣಿಸಬಹುದು! ಒಡನೆ ಕೆಳಕ್ಕಿಳಿದು, ಮಗುವನ್ನು ಎತ್ತಿಕೊಂಡು, ಕುದುರೆಯನ್ನೋಡಿಸುತ್ತಾ ಹೊರಟು ಬಂಡಿಯ ಹತ್ತಿರಕ್ಕೆ ಬಂದು ನೋಡುತ್ತಾನೆ: ಒಬ್ಬರಿಗೂ ಎಚ್ಚರವಿಲ್ಲ—'ಗೋಪಿಕಾಬಾಯಿ, ಗೋಪಿಕಾಬಾಯಿ, ನೋಡು ಮಕ್ಕಳು ಬಂಡಿಯಲ್ಲಿದ್ದಾರೆಯೋ ಎಂದು! ಎಚ್ಚರವಾಗಿದ್ದೀಯಾ!' ಎಂದು ಕೂಗಿಕೊಂಡನು. ಆಕೆಯು ನಿದ್ರೆಗಣ್ಣಿನಲ್ಲೇ ಅಲ್ಲೆಲ್ಲಾ ತಡವಿನೋಡಿ, 'ಎಲ್ಲಾ ಸರಿಯಾಗಿದೆ' ಎಂದಳು.—'ಇಲ್ಲಾ ವಹಿನೀ ನಿನಗಿನ್ನೂ ನಿದ್ರೆ, ನೋಡು ಹುಡುಗರು ಇದ್ದಾರೆಯೋ ಎಂದು' ಎಂಬದಾಗಿ ಕೂಗಿಕೊಂಡನು. ಆ ಮಾತನ್ನು ಕೇಳಿ ಗಾಬರಿಗೊಂಡು ಚೆನ್ನಾಗಿ ನೋಡಿದ ಆಕೆಗೆ ಮಹಾದೇವನು ಬಂಡಿಯಲ್ಲಿಲ್ಲವೆಂಬ ವಿಚಾರವು ತಿಳಿವಳಿಕೆಗೆ ಬಂತು.—ವಿಠ್ಠಲರಾಯನು ನಡೆದ ಸಂಗತಿಯನ್ನು ತಿಳಿಸಿ, ಮಗುವನ್ನು ಕೊಟ್ಟು ಆಕೆಯ ಭಯವನ್ನು

ಹೋಗಲಾಡಿಸಿದನು. ಮಧ್ಯರಾತ್ರಿಯಲ್ಲಿ-ಕಾಡಿನ ಮಧ್ಯದಲ್ಲಿ ಬಿದ್ದ ಆ ಮಗುವನ್ನು ಸುರಕ್ಷಿತವಾಗಿ ಕಾಪಾಡಿದ್ದಕ್ಕಾಗಿ ಎಲ್ಲರೂ ಭಗವಾನನ ಕೃಪಾ ಪೂರ್ಣತೆಯನ್ನು ಕುರಿತು ಬಗೆಬಗೆಯಿಂದ ಹೊಗಳಿದರು.

ಮಹಾದೇವನಿಗೆ ಮೂರನೇ ವರುಷದಿಂದ ಹದಿಮೂರನೇ ವರ್ಷ ಪ್ರಾಯದವರೆಗೂ, ಅವನ ತಂದೆ ತಾಯಿಗಳು ಕೊಲ್ಹಾಪುರದಲ್ಲೇ ವಾಸಿಸಿದ್ದರು. ಬಾಲಕನು ಆರನೆಯ ವಯಸ್ಸಿನಲ್ಲಿ ಮರಾಠಿ ಪಾಠಶಾಲೆಗೆ ಕಳುಹಿಸಲ್ಪಟ್ಟನು. ೧೮೫೧ನೆಯ ವರ್ಷದಲ್ಲಿ ಎಂದರೆ ಅವನ ೯ನೆಯ ವಯಸ್ಸಿನಲ್ಲಿ ಇಂಗ್ಲಿಷ್ ಭಾಷಾಭ್ಯಾಸಕ್ಕೆ ಪ್ರಾರಂಭವಾಯಿತು. ಅಲ್ಲಿಯ ಇಂಗ್ಲಿಷ್ ಪಾಠಶಾಲಾ ಮುಖ್ಯೋಪಾಧ್ಯಾಯನಾದ ಕೃಷ್ಣರಾವ್ ಭಾಫಾಜಿ ಎಂಬಾತನ ಬೋಧನೆಯಿಂದ ಪ್ರಾರಂಭದಲ್ಲಿ ತನ್ನ ಮನಸ್ಸಿನ ಮೇಲುಂಟಾದ ಪರಿಣಾಮವನ್ನು ಕುರಿತು ಮಹಾದೇವನು ಮುಂದೆ ಬಹುದಿನಗಳವರೆಗೂ ಅತ್ಯಂತ ಅಭಿಮಾನದಿಂದ ಹೇಳಿಕೊಳ್ಳುತ್ತಿದ್ದನು. ನಮ್ಮ ಕಥಾನಾಯಕರು, ತಮ್ಮ ಪ್ರೌಢವಯಸ್ಸಿನಲ್ಲಿ ಸುಪ್ರಸಿದ್ಧರೆನ್ನಿಸಿದ್ದರಾದರೂ ಚಿಕ್ಕಂದಿನಲ್ಲಿ ಸರ್ವಸಾಮಾನ್ಯ ಸ್ಥಿತಿಯಲ್ಲೇ ಇದ್ದರಲ್ಲದೆ, ಅಷ್ಟೇನೂ ಅತಿಶಯ ಮೇಧಾವಿಯೆಂದು ಹೆಸರ್ಗೊಂಡಿರಲಿಲ್ಲ. ಬಾಲಕ ಮಹಾದೇವನು ವಿಶೇಷ ಚಟುವಟಿಕೆಯಿಲ್ಲದ ಮಂಕುಹುಡುಗನಂತೆ ಇದ್ದನು. ಸುಮಾರು ದೊಡ್ಡಹುಡುಗನಾಗುವವರೆಗೆ ಕೆಲಕೆಲವು ಅಕ್ಷರಗಳೇ ಅವನ ಬಾಯಿಯಲ್ಲಿ ಸರಿಯಾಗಿ ಉಚ್ಚಾರವಾಗುತ್ತಿರಲಿಲ್ಲ. 'ಕ'ವರ್ಗಕ್ಕೆ ಬದಲಾಗಿ 'ಟ' ವರ್ಗದ ಅಕ್ಷರಗಳನ್ನೇ ಉಪಯೋಗಿಸುವನು. ಗೋಪಿಕಾ ಬಾಯಿಯು ತನ್ನ ಮಗನ ಈ ಮೊದ್ದುತನವನ್ನು ಕುರಿತು ಬಹುವಿಚಾರಪಡುವಳು. "ಮುಂದೆ ನಮ್ಮ ಮಹಾದೇವನಿಗೆ ಏನುಗತಿ! ಇವನು ದೊಡ್ಡವನಾದ ಮೇಲೆ ತಿಂಗಳೊಂದಕ್ಕೆ ಹತ್ತುರೂಪಾಯಿಗಳನ್ನಾದರೂ ಸಂಪಾದಿಸಿ, ತನ್ನ ಹೆಂಡತಿಯನ್ನು ಕಾಪಾಡಲು ಹೇಗೆ ಶಕ್ತನಾದಾನು" ಎಂದು ಹಲುಬಿಕೊಳ್ಳುವಳು. ಬಾಲಕ ಮಹಾದೇವನು ಶುಭ್ರತೆಯಿಲ್ಲದೆ ಅಸಹ್ಯವಾಗಿಯೂ ಇರುತ್ತಿದ್ದನು.

ಸಾಧಾರಣವಾಗಿ ಇತರ ಹುಡುಗರು ಆತುರಪಟ್ಟು ಕಳವಳಪಟ್ಟು ರೇಗಿಬೀಳುವಂತಹ ಸಂದರ್ಭಗಳು ಪ್ರಾಪ್ತವಾದಾಗಲೂ ಅವನು ಸ್ವಲ್ಪವೂ ಉದ್ವೇಗಗೊಳ್ಳದೆ ಸಮಾಧಾನ ಚಿತ್ತವೃತ್ತಿಯಿಂದಲೇ ಇರುತ್ತಿದ್ದ ಅಭ್ಯಾ

ಸವು ಚಿಕ್ಕಂದಿನಿಂದಲೂ ಇದ್ದಿತು. ಅನೇಕ ಹುಡುಗರು ತಾವು ಕೇಳಿದ ಅಥವ ನೋಡಿದ ಒಂದು ಆಶ್ಚರ್ಯಕರವಿಚಾರವನ್ನು ಮನಸ್ಸಿನಲ್ಲಿಟ್ಟುಕೊಳ್ಳಲಾರದೆ, ಸಾಧ್ಯವಾದಷ್ಟು ಶೀಘ್ರವಾಗಿ ಇತರರೊಂದಿಗೆ ಹೇಳಿಬಿಡಲು ಆತುರಗೊಳ್ಳುವುದು ಸ್ವಾಭಾವಿಕವಾಗಿರುತ್ತಿರುವಲ್ಲಿ ನಮ್ಮ ಮಹಾದೇವ ಬಾಲಕನು ಎಂತಹ ಆಶ್ಚರ್ಯಕರ ವೃತ್ತಾಂತವನ್ನು ಕೇಳಿದರೂ, ಯಾವ ಕಳವಳವನ್ನೂ ಹೊಂದದೆ ಸಮಾಧಾನದಿಂದಲೇ ಇದ್ದುಬಿಡುವನು. ಇತರರು ತಾವು ಪರೀಕ್ಷೆಯಲ್ಲಿ ತೇರ್ಗಡೆಯಾದ ವಿಚಾರವನ್ನು, ಬಹುಸಂಭ್ರಮಗೊಂಡು ಓಡುತ್ತೋಡುತ್ತಾ ಬಂದು ತಮ್ಮ ಮನೆಯಲ್ಲಿ ಹೇಳಿ ಕುಣಿಕುಣಿದಾಡುತ್ತಿದ್ದರೆ, ಮಹಾದೇವನು ಆ ವಿಚಾರವನ್ನೇ ಮನೆಯಲ್ಲಿ ಎತ್ತಿದೆ, ಏನೂ ಸಂಭವಿಸಿರದಂತೆಯೇ ಇದ್ದುಬಿಡವನು. ಅವನು ತೇರ್ಗಡೆ ಹೊಂದಿದ ವಿಚಾರವನ್ನು ಇತರ ಹುಡುಗರಿಂದ ಕೇಳಿ-ಗೋಪಿಕಾಬಾಯಿಯು -"ಇದೇನೋ ಮಹಾದೇವ ನೀನು ಪರೀಕ್ಷೆಯಲ್ಲಿ ಉತ್ತೀರ್ಣನಾದ ಸಂತೋಷ ವಿಚಾರವನ್ನಾದರೂ ಮನೆಯಲ್ಲಿ ಹೇಳಿಬಾರದೇ? ಅದೆಂತಹ ಮೊದ್ದುತನವೊ" ಎನ್ನುವಳು. ಆಗ ಬಾಲಕನು-"ಅಮ್ಮ, ಅದನ್ನು ಕುರಿತು ಅಷ್ಟು ಅಟ್ಟಹಾಸದಿಂದ ಹೇಳಿಕೊಳ್ಳಲು ಏನು ಅಂತಹ ಆಶ್ಚರ್ಯ ವಿಚಾರವದು! ನಾವು ಪ್ರತಿದಿನವೂ ಪಾಠಶಾಲೆಗೆ ಹೋಗುತ್ತಾ ಪಾಠಗಳನ್ನು ಓದುತ್ತಿದ್ದವಾದರೆ, ತೇರ್ಗಡೆಯಾಗಿಯೇ ತೀರಬೇಕಲ್ಲವೆ" ಎಂದು ಹೇಳಿಬಿಡುವನು.

ಆದರೆ ಬಾಹ್ಯದೃಷ್ಟಿಗೆ ಮೇಲೆ ಹೇಳಿದಂತೆ ಮೊದ್ದು ಮೊದ್ದಾಗಿದ್ದಂತೆ ಕಾಣುತ್ತಿದ್ದರೂ, "ಬೆಳೆಯು ಮೊಳೆಯಲ್ಲೇತೋರುವುದು" ಎಂಬ ಆರ್ಯೋಕ್ತಿಯಂತೆ, ಮುಂದೆ ಆತನ ಜೀವಿತದಲ್ಲಿ ಮಾಡಿದ ಮಹತ್ಕಾರ್ಯಗಳಿಗೆ ಸಾಧಕವಾದ ಬುದ್ಧಿಸೂಕ್ಷ್ಮತೆಗೂ-ಕಾರ್ಯ ನಿಮಗ್ನತೆಗೂ ರಾನಡೇಯು ಚಿಕ್ಕವನಾಗಿರುವಾಗಲೇ ಉದಾಹರಣೆಯು ದೊರೆಯಿತು. ಇನ್ನೂ ಅಕ್ಷರಗಳನ್ನು ಕಲಿಯುತ್ತಿದ್ದಾಗಲೇ ಪಾಠಶಾಲೆಯಿಂದ ಮನೆಗೆ ಬಂದೊಡನೆಯೆ ಶಾಲೆಯಲ್ಲಿ ಕಲಿತ ಅಕ್ಷರಗಳನ್ನೇ ಸರ್ವದಾ ಹೇಳಿಕೊಳ್ಳುತ್ತಿರುವನು. ಬರೀಕೈಯಿಂದಲೇ ಆಯಾ ಅಕ್ಷರಗಳನ್ನು ಗೋಡೆಯ ಮೇಲೂ ಮಣ್ಣಿನಲ್ಲೂ ಬರೆಯುವನು. ಅವನ ಆಟವೆಂದರೂ ಪಾಠವೆಂದರೂ ಒಂದೇ ಆಗಿತ್ತು. ಆಟದಲ್ಲೂ ಪಾಠವನ್ನು ಮರೆಯುತ್ತಿರಲಿಲ್ಲ. ಪಾಠವನ್ನು ಆಟ

ವಾಡುವಂತೆ ಕಲಿತುಬಿಡುವನು. ಒಬ್ಬನೇ ಆಡುತ್ತಿರುವಂತೆ ಕಂಡರೂ ಆ ಹೊತ್ತಿನಲ್ಲಿ ಮಗ್ಗಿಗಳನ್ನಾದರೂ ಹೇಳಿಕೊಳ್ಳುತ್ತಿರುವನು.

ಮಹಾದೇವನಿಗೆ ಚಿಕ್ಕಂದಿನಿಂದಲೂ ಸರಿ-ತಪ್ಪುಗಳ ಜ್ಞಾನವು ಅತಿಶಯ ಸೂಕ್ಷ್ಮವಾಗಿತ್ತು. ಕೆಲಕೆಲವು ವಿಚಾರಗಳಲ್ಲಿ ಅವನು ಅತಿಶಯ ಆಶ್ಚರ್ಯಕರವಾದ ರೀತಿಯಲ್ಲಿ ನಡೆದುಕೊಳ್ಳುವನು. ಒಂದಾನೊಂದು ಸಾರಿ ಗೋಪಿಕಾಬಾಯಿಯು ಅವನ ಕೈಗೆ ಒಂದು ದೊಡ್ಡದು ಒಂದು ಸಣ್ಣದು ಹೀಗೆ ಎರಡು ರೊಟ್ಟಿಯ ಚೂರುಗಳನ್ನು ಕೊಟ್ಟು, ಅವುಗಳಲ್ಲೊಂದನ್ನು ಪಕ್ಕದಲ್ಲೇ ನಿಂತಿದ್ದ ಒಬ್ಬ ಬಡಹುಡುಗನಿಗೆ ಕೊಡೆಂದು ಹೇಳಿದಳು. ಮಹಾದೇವನು ದೊಡ್ಡಚೂರನ್ನು ಅವನಿಗೆ ಕೊಟ್ಟು ಸಣ್ಣಚೂರನ್ನು ತಾನು ಇಟ್ಟುಕೊಂಡನು. ಅದನ್ನು ಕಂಡು ಆಕೆಗೆ ಬಹಳ ಆಶ್ಚರ್ಯವಾಗಿ-''ನೀನು ಸಣ್ಣಚೂರನ್ನು ಅವನಿಗೆ ಕೊಟ್ಟು ದೊಡ್ಡಚೂರನ್ನು ನಿನಗಾಗಿ ಇಟ್ಟುಕೊಳ್ಳುತ್ತೀ ಎಂದು ಯೋಚಿಸಿದ್ದೆ'' ಎಂದಳು. ಅದನ್ನು ಕೇಳಿ ಮಹಾದೇವನು-''ಇಲ್ಲಮ್ಮ, ನಾನು ನೀನು ಯೋಚಿಸಿದ್ದಂತೆ ಮಾಡಲಿಲ್ಲ. ಆದರೆ, ನಾನು ಏನು ಮಾಡಬೇಕೆಂದು ಅಪೇಕ್ಷಿಸಿದ್ದೆಯೋ ಅದರಂತೆ ಮಾಡಿದ್ದೇನೆ'' ಎಂದನು.

ಚಿಕ್ಕತನದಲ್ಲಿ ಮಹಾದೇವನಿಗೆ, 'ಚೌಕ-ಭಾರ' ಎಂಬ ಕವಡೆಯಾಟದಲ್ಲಿ ಹೆಚ್ಚು ಅಭಿಲಾಷೆಯಿದ್ದಿತು. ಒಂದುಸಾರಿ, ಅವನೊಂದಿಗೆ ಆಡಲು ಜೊತೆಯವರಾರೂ ಸಿಕ್ಕದಿದ್ದುದರಿಂದ ಅವನು ತಮ್ಮ ಮನೆಯ ಜಗುಲಿಯ ಮೇಲಿದ್ದ ಒಂದು ಕಂಭದೆದುರಿಗೇ ಕುಳಿತು ಅದನ್ನೇ ಹುಡುಗನೆಂದು ಭಾವಿಸಿಕೊಂಡು ಆಟಕ್ಕೆ ಪ್ರಾರಂಭಿಸಿದನು. ಬಲಗೈಯ್ಯು ಕಂಭಕ್ಕೋಸ್ಕರವಾಗಿಯೂ ಎಡಗೈಯು ತನಗೋಸ್ಕರವಾಗಿಯೂ ಆಡಬೇಕೆಂದು ಗೊತ್ತುಮಾಡಿಕೊಂಡು ಕವಡೆಗಳನ್ನು ಹಾಕತೊಡಗಿದನು. ಆಟವು ಕೊನೆಯವರೆಗೂ ನಡೆದು-ಕೊನೆಗೆ ಕಂಭವೇ ಗೆದ್ದಿತು. ಹತ್ತಿರ ಇದ್ದವರು ಅದನ್ನು ಕಂಡು, ಅಪಹಾಸ್ಯ ಮಾಡಿ ನಗುತ್ತಾ-'ಅಯ್ಯಯ್ಯೋ, ಮಹಾದೇವನು ಕಂಭಕ್ಕೆ ಸೋತುಹೋದ' ಎಂದ ಹೀಯ್ಯಾಳಿಸ ತೊಡಗಲು, ಹುಡುಗನು ಕಾತರಗೊಳ್ಳದೆ-'ಅದಕ್ಕೇನು! ಕಂಭಕ್ಕೇ ಸರಿಯಾದ ಘಾಸಿಗಳು ಬಿದ್ದುವು, ಅದೇ ಗೆದ್ದಿತು, ಅದರಲ್ಲಿ ಮಾನವೇನು ಅವಮಾನವೇನು?''ಎಂದು ನುಡಿದನು.

ಇದರಲ್ಲಿ ಅಷ್ಟು ಆಶ್ಚರ್ಯಕರವಾದ ಸಂಗತಿಯೇನೂ ಇಲ್ಲದಿದ್ದರೂ, ತನ್ನದಾಗಲಿ ಪರರದಾಗಲಿ ನ್ಯಾಯವು ನ್ಯಾಯವೇ ಎಂದು ತನಗೆ ವಿರೋಧವಾದುದಾಗಿದ್ದರೂ ನ್ಯಾಯವನ್ನು ಮೆಚ್ಚಿಕೊಳ್ಳುತ್ತಿದ್ದ ಆ ಚಿಕ್ಕವನ ಮನೋಭಾವನೆಯು ಗಮನಿಸತಕ್ಕದಾಗಿದೆ!

ಅವನಿಗೆ ಒಡವೆ ವಸ್ತ್ರಗಳಲ್ಲೂ ಹೆಚ್ಚು ಅಪೇಕ್ಷೆಯಿರಲಿಲ್ಲ-ತಾಯಿಯು ಅವನಿಗೆ ಏನೇನೋ ಒಡವೆಗಳನ್ನಿಟ್ಟು ಸಿಂಗರಿಸಬೇಕೆಂದು ಅಪೇಕ್ಷಿಸಿದ್ದರೂ, ಅವನು ಅವುಗಳು ಕಾಣಿಸಿದಂತೆ ಬಟ್ಟೆಯಿಂದ ಮುಚ್ಚಿಕೊಂಡು ನಡೆಯಲು ಪ್ರಯತ್ನಿಸುವನು. ಕೈಬಳೆಯನ್ನು ಮುಂಗೈಯಿಂದ ಮೊಳಕೈಮೇಲಕ್ಕೆ ಏರಿಸಿಕೊಂಡು ಅಂಗಿಯ ತೋಳಿನಿಂದ ಮುಚ್ಚಿ ಹೋಗುವಂತೆಯೂ, ಉಂಗುರದ ಹರಳನ್ನು ಅಂಗೈಕಡೆಗೆ ತಿರುಗಿಸಿಕೊಂಡು ಕೈಮುಚ್ಚಿಕೊಂಡೂ ಮರೆಗೊಳಿಸುವನು. ನೋಡಿದವರು-'ಏಕೆ ಮಹಾದೇವ ಒಡವೆಗಳು ಎಲ್ಲರಿಗೂ ಕಾಣುವಂತೆ ಸರಿಯಾಗಿ ಇಟ್ಟುಕೊಳ್ಳಬಾರದು' ಎಂದರೆ, ಅವನು-"ನಮ್ಮ ಮನೆಗೆ ಭಿಕ್ಷಾನ್ನವಾರಾನ್ನಗಳಿಗೆ ಬರುವ ಬ್ರಾಹ್ಮಣ ಹುಡುಗರನ್ನು ನೋಡಿ-ಪಾಪ, ಅವರಿಗೆ ಪೂರ್ತಿ ಎರಡು ಹೊತ್ತು ಅನ್ನಕ್ಕೂ ಮಾರ್ಗವಿಲ್ಲದೆ ಇರುತ್ತಿರುವಲ್ಲಿ ನಾನು ಅವರ ಎದುರಿಗೆ ಇವುಗಳನ್ನು ಧರಿಸಿಕೊಂಡು ಮೆರೆಯುವುದು ನ್ಯಾಯವೇ?" ಎನ್ನುವನು.

ಸೌಭಾಗ್ಯವತಿ ಗೋಪಿಕಾಬಾಯಿಯು ಎಂಟುಮಂದಿ ಮಕ್ಕಳನ್ನು ಪ್ರಸವಿಸದಳಾದರೂ ಮಹಾದೇವ-ದುರ್ಗಾ ಇವರಲ್ಲದೆ ಮಿಕ್ಕ ಮಕ್ಕಳೆಲ್ಲವೂ ಶಿಶುತನದಲ್ಲೇ ಮೃತವಾದುವು. ಅಲ್ಲದೆ ಎಂಟನೆಯ ಪ್ರಸವವೇ ಆಕೆಗೆ ಮೃತ್ಯುವಾಗಿಯೂ ಪರಿಣಮಿಸಿತು. ಗೋವಿಂದರಾಯನು ಹದಿನಾರು ದಿನಗಳೊಳಗಾಗಿ ಪುನಃ ವಿವಾಹಿತನಾದನು. ಮುಂದೆ ಕೆಲವು ದಿನಗಳಲ್ಲೇ ಮಕ್ಕಳಿಬ್ಬರಿಗೂ ಮದುವೆಮಾಡಿದನು. ಮಹಾದೇವನ ಪ್ರಥಮಭಾರ್ಯೆಗೆ ಸಖೂಬಾಯಿ ಎಂದು ಹೆಸರಿತ್ತು.

೧೮೫೬ನೆಯ ವರ್ಷದ ವೇಳೆಗೆ, ಕೊಲ್ಹಾಪುರದಲ್ಲಿ ವಿದ್ಯಾಭ್ಯಾಸವು ಮುಗಿದು ಮಹಾದೇವನು ಬೊಂಬಾಯಿಗೆ ಕಳುಹಿಸಲ್ಪಟ್ಟನು. ಅಲ್ಲಿಯ 'ಎಲ್‌ಫಿನ್‌ಸ್ಟನ್ ಹೈಸ್ಕೂಲ್' ಎಂಬ ಪಾಠಶಾಲೆಯಲ್ಲಿ ವಿದ್ಯಾಭ್ಯಾಸವು ಮುಂದುವರಿಸಿತು. ಆ ವೇಳೆಗೆ ಹಿಂದಿನ ಮಂಕುತನ-ಮೂಢಹೇಡಿತನಗಳು

ಹೋಗಿ ಆತನ ಬುದ್ಧಿಯು ಬಹು ಚುರುಕಾಗಿತ್ತು. ಆತನ ಉಪಾಧ್ಯಾಯನು ಅನೇಕ ವೇಳೆ-'ಇವನು ಸಾಮಾನ್ಯ ಹುಡುಗನಲ್ಲ. ಬಹು ಮೇಧಾವಿಯಾಗಿದ್ದಾನೆ. ಮುಂದೆ ಮಹಾ ಪ್ರಖ್ಯಾತಪುರುಷನಾಗುವನು' ಎಂದು ಹೇಳುತ್ತಿದ್ದುದುಂಟು. ಆ ಪಾಠಶಾಲೆಯಲ್ಲಿ ಮಹಾದೇವನು ಮೂರುವರ್ಷ ಕಾಲವಿದ್ದನು. ಮೂರುವರ್ಷವೂ ಕ್ರಮವಾಗಿ ಹತ್ತು. ಹದಿನೈದು, ಇಪ್ಪತ್ತು ರೂಪಾಯಿಗಳ ವಿದ್ಯಾರ್ಥಿ ವೇತನವನ್ನು ಪಡೆಯುತ್ತಿದ್ದನು.



## ಅಧ್ಯಾಯ ೩ "ಪ್ರೌಢವಿದ್ಯಾಭ್ಯಾಸ"

೧೮೫೯ನೆಯ ಸಂವತ್ಸರದಲ್ಲಿ ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ತೇರ್ಗಡೆಯಾದ ಇಪ್ಪತ್ತೊಂದು ಮಂದಿ ವಿದ್ಯಾರ್ಥಿಗಳಲ್ಲಿ ನಮ್ಮ ಮಹಾದೇವರಾವ್ ರಾನಡೇಯವರೂ ಒಬ್ಬರಾಗಿದ್ದರು. ಪರೀಕ್ಷೆಯ ಈ ಫಲಿತಾಂಶವು ಪ್ರಕಟವಾದ ತರುವಾಯ ಅವರಿಗೆ ತಿಂಗಳೊಂದಕ್ಕೆ ೭೦ ರೂ. ಗಳಂತೆ ಮೂರುವರ್ಷಗಳ ವಿದ್ಯಾರ್ಥಿ ವೇತನವು ಮಂಜೂರಾಯಿತು. ೧೮೬೧ರಲ್ಲಿ ತಿಂಗಳೊಂದಕ್ಕೆ ೧೨೦ರೂ. ಗಳಂತೆ ಮೂರುವರ್ಷಗಳ ವಿದ್ಯಾರ್ಥಿ ವೇತನವನ್ನು ಪಡೆದು, ೧೮೬೨ನೆಯ ಸಂವತ್ಸರದಲ್ಲಿ ಬಿ. ಎ. ಪರೀಕ್ಷೆಯಲ್ಲೂ ಉತ್ತೀರ್ಣರಾದರು: ಪರೀಕ್ಷಕರು, ಅವರು ಪರೀಕ್ಷಾ ಪ್ರಶ್ನೆಗಳಿಗೆ ಉತ್ತರ ಬರೆಯುವುದರಲ್ಲಿ ಪ್ರಕಟಿಸಿದ್ದ ಜ್ಞಾನ, ದೀರ್ಘದೃಷ್ಟಿ, ವಿಷಯ ಸಂಗ್ರಹಣ ಮುಂತಾದುವುಗಳನು ಕಂಡು ಆತನ ಶಕ್ತಿ ಸಾಮರ್ಥ್ಯಗಳಿಗಾಗಿ ಅದ್ಭುತಪಟ್ಟು ತಮ್ಮ ತಮ್ಮಲ್ಲೇ ಚಂದಾ ಎತ್ತಿ ಇನ್ನೂರು ರೂಪಾಯಿಗಳನ್ನು ಶೇಖರಿಸಿ ಅವರಿಗೆ ಉಪಯುಕ್ತವಾದ ಅನೇಕ ಪುಸ್ತಕಗಳನ್ನು ಬಹುಮಾನವಾಗಿ ಕೊಟ್ಟರು.

೧೮೬೧ನೆಯ ಸಂ| ದಿಂದಲೆ ರಾನಡೇಯವರು ಎಲ್ಫಿನ್‌ಸ್ಟನ್ ನಿಲಯದಲ್ಲಿ ಅಧ್ಯಾಪಕವೃತ್ತಿಗೂ ನಿಯಮಿತರಾಗಿದ್ದರು. ೧೮೬೨ರಲ್ಲಿ ಬಿ.ಎ. ಪರೀಕ್ಷೆಯಲ್ಲಿ ಉತ್ತೀರ್ಣರಾದೊಡನೆಯೇ 'ಇಂದುಪ್ರಕಾಶ' ಎಂಬ ಆಂಗ್ಲ ಮಹಾರಾಷ್ಟ್ರ ವಾರಪತ್ರಿಕೆಯ ಸಂಪಾದಕತ್ವವೂ ಅವರಪಾಲಿಗೇ ಬಂತು. ದೇಶದ ರಾಜಕೀಯ ವಿಚಾರ, ಸಾಮಾಜಿಕ ವಿಚಾರ, ಆರ್ಥಿಕ ವಿಚಾರ ಇವುಗಳೇ

ಆ ಪತ್ರಿಕೆಯ ಮುಖ್ಯಧ್ಯೇಯಗಳಾಗಿರಲು, ನಮ್ಮ ಕಥಾನಾಯಕರು, ತಮ್ಮ ವಿಶಾಲವಿದ್ವತ್ತು ಗ್ರಂಥಾನುಭವಗಳಿಂದ ಆ ಪತ್ರಿಕೆಯನ್ನು ಸರ್ವರ ಪ್ರೇಮಾದರಗಳಿಗೂ ಪಾತ್ರವಾದುದನ್ನಾಗಿಸಿದರು. ೧೮೬೪ರಲ್ಲಿ ಎಂ. ಎ. ಪರೀಕ್ಷೆಗೆ ಕುಳಿತು ಅದರಲ್ಲೂ ಉತ್ತೀರ್ಣರಾದರು. ೧೮೬೫ ಎಂದರೆ, ಅವರ ಇಪ್ಪತ್ತೊಂದರನೆಯ ಪ್ರಾಯದಲ್ಲೇ, ಬೊಂಬಾಯಿ ವಿಶ್ವವಿದ್ಯಾನಿಲಯದ ಚಾಲಕರು ಅವರನ್ನು ತಮ್ಮ ಮಹಾಸಭೆಯ ಒಬ್ಬಸಭ್ಯರನ್ನಾಗಿ ಆರಿಸಿಕೊಂಡರು. ಮುಂದಿನ ವರ್ಷವೇ ಅವರು, ನ್ಯಾಯಶಾಸ್ತ್ರ ಪರೀಕ್ಷೆಗೂ ಕುಳಿತು, ಅದರಲ್ಲೂ ಉತ್ತಮರೀತಿಯಿಂದ ಉತ್ತೀರ್ಣರಾಗಿ ಎಲ್. ಎಲ್. ಬಿ, ಉಪಾಧಿಯನ್ನು ಗಳಿಸಿಕೊಂಡರು.

ನಮ್ಮ ಕಥಾನಾಯಕರ ವಾಚನಪದ್ಧತಿಯು ಅತಿಮಹತ್ವದ್ದಾಗಿದ್ದಿತು. ಒಂದಾನೊಂದುವೇಳೆ ಅವರ ಅಧ್ಯಾಪಕರಲ್ಲೊಬ್ಬ ಪ್ರೊಫೆಸರರು "ನಮ್ಮ ಕಾಲೇಜಿನ ವಿದ್ಯಾರ್ಥಿಗಳಲ್ಲೆಲ್ಲಾ ರಾನಡೆಯೊಬ್ಬಾತನೇ ಯೋಚನಾ ಪೂರ್ವಕ ಓದತಕ್ಕವನು-ಎಂದರೆ ವಿಮರ್ಶಾಪೂರ್ವಕ ಅಧ್ಯಯನ ಮಾಡತಕ್ಕವನು" ಎಂದರಂತೆ. ಅವರು ಓದಿದಗ್ರಂಥಗಳು, ಅವುಗಳ ವಿಷಯದಲ್ಲಿ ಬರೆದಿದ್ದ ಸೂಚನೆಗಳು, ವಿವಿಧವಿಷಯಗಳ ಮೇಲೆ ಬರೆದಿಟ್ಟ ವ್ಯಾಸಗಳು, ಇವುಗಳನ್ನು ನೋಡಿದರೆ ಅತ್ಯಾಶ್ಚರ್ಯವಾಗುವಷ್ಟಿವೆ! ಲೋಕದ ಜೀವನಯಾತ್ರೆಯಲ್ಲಿ ತಮ್ಮ ಗುರುತನ್ನು ಸ್ಥಾಪಿಸಬಲ್ಲ ಮಹನೀಯರನೇಕರಲ್ಲಿ ಕಂಡುಬರುವಂತಹ ಸೂಕ್ಷ್ಮಗ್ರಹಣಶಕ್ತಿಯೂ, ಧಾರಣಾಶಕ್ತಿಯೂ ಅವರಲ್ಲಿ ಅತಿಶಯವಾಗಿದ್ದುವು. ಒಂದುಸಾರಿ ಪುಸ್ತಕವನ್ನು ಓದಿ ಮುಗಿಸಿಬಿಟ್ಟನಂತರ ಆ ಪುಸ್ತಕದ ಮುಖ್ಯ ಮುಖ್ಯ ವಿಷಯಗಳನ್ನು ಯಥಾವತ್ತಾಗಿ ಬರೆದಿಡುವುದು ಅವರಿಗೆ ಸರ್ವಸಾಮಾನ್ಯಸಂಗತಿಯಾಗಿದ್ದಿತೆಂದು ಉದಾಹೃತವಾಗಿದೆ.

ಕಾಲೇಜಿನ ಉಪಾಧ್ಯಾಯರಲ್ಲೆಲ್ಲಾ ಸರ್ ಅಲೆಗ್ಜಾಂಡರ್ ಗ್ರಾಂಟ್ ಎಂಬಾತನಿಗೆ ನಮ್ಮ ಕಥನಾಯಕರ ಮೇಲಿದ್ದ ಪ್ರೇಮವಿಶ್ವಾಸಗಳಿಗೆ ಮಿತಿಯಿರಲಿಲ್ಲ. ರಾನಡೇಯವರಲ್ಲಿದ್ದ ಹಲವು ಸದ್ಗುಣಗಳಿಗಾಗಿ ಆ ಪ್ರೊಫೆಸರನು ಅತಿಶಯ ಲುಬ್ಧನಾಗಿದ್ದನು, ಆದರೇನು, ಆತನಿಗಿದ್ದ ಈ ಶಿಷ್ಯವಾತ್ಸಲ್ಯವು ತನ್ನ ಶಿಷ್ಯನಲ್ಲಿದ್ದ ಲೋಪಗಳನ್ನೂ ತಿದ್ದದಂತೆ ಮಾನಸಿಕವಾಡುವುದಾಗಲಿಲ್ಲ. ಪ್ರೇಮವು ವಿಚಾರವಿಹೀನವಾದ ಸಲಿಗೆಯ ಸ್ವರೂಪವನ್ನು

ಹೊಂದಲಿಲ್ಲ. ಸಾಮಾನ್ಯವಾಗಿ ಪ್ರಾಯಸ್ಥರಲ್ಲಿ ಕಂಡು ಬರುವ ಸ್ವದೇಶ ಪ್ರೇಮ ಉತ್ಸಾಹ ದುಡುಕುತನಗಳು ಅವರಲ್ಲೂ ಸ್ವಾಭಾವಿಕವಾಗಿದ್ದುವು. ಒಂದಾನೊಂದು ಸಾರಿ ರಾನಡೇಯವರು ಬಹು ತೀಕ್ಷ್ಣ ರೀತಿಯಿಂದ ಮಹಾರಾಷ್ಟ್ರರ ಮತ್ತು ಬ್ರಿಟಿಷರ ಆಳ್ವಿಕೆಗಳನ್ನು ತುಲನಮಾಡಿ ತಮ್ಮ ಅಭಿಪ್ರಾಯಗಳನ್ನು ಪ್ರಕಟಿಸಿದರು. ಗ್ರಾಂಟ್‌ಸಾಹೇಬನು ಅದನ್ನು ಕಂಡು ತನ್ನ ಶಿಷ್ಯರನ್ನು ಬಳಿಗೆ ಕರೆಸಿಕೊಂಡು ಅವರ ಅಭಿಪ್ರಾಯಗಳನ್ನು ಸ್ವತಃ ವಿಚಾರಿಸಿದನು. ಗುರುಶಿಷ್ಯರಿಗೆ ಬಹುದೂರ ತರ್ಕನಡೆಯಿತು. ಕೊನೆಗೆ ಗ್ರಾಂಟ್‌ಸಾಹೇಬನು ಅವರ ನ್ಯಾಯವಾದ ತರ್ಕಗಳನ್ನು ಒಪ್ಪಿದನಾದರೂ, ಅಭಿವೃದ್ಧಿಗೆ ಬರಲಿರುವ ಆ ಯುವಕರಲ್ಲಿ ಕೃತಘ್ನತಾಭಾವವು ಬೆಳೆಯಲವಕಾಶವಿರಬಾರದೆಂದೆಣಿಸಿ "ಮಹತ್ವಾಕಾಂಕ್ಷಿಯಾದ ಯುವಕನೇ, ಯಾವ ವಿಚಾರವು ಹೇಗಿದ್ದರೂ, ನಿನಗೆ ವಿದ್ಯಾದಾನ ಮಾಡುತ್ತಲೂ, ನಿನ್ನ ಸ್ವಜನರಿಗೆ ಎಷ್ಟೋ ಬಗೆಯ ಅಭಿವೃದ್ಧಿ ಮಾರ್ಗಗಳನ್ನು ಕಲ್ಪಿಸಿ ಕೊಡುತ್ತಲೂ ಇರುವ ಸರಕಾರವನ್ನು ಇಷ್ಟು ಬಗೆಯಿಂದ ಹೀಯಾಳಿಸಿ ನುಡಿವುದು ಉಚಿತವಲ್ಲ" ಎಂದು ನುಡಿದುದಲ್ಲದೆ, ಅವರಿಗಿದ್ದ ವಿದ್ಯಾರ್ಥಿ ವೇತನವನ್ನೂ ಆರು ತಿಂಗಳ ಕಾಲ ತಡೆದಿಟ್ಟಿದ್ದನು.

ವಿಶೇಷ ಗ್ರಂಥವ್ಯಾಸಂಗದಿಂದ ಅವರಿಗೆ ಲಭ್ಯವಾದ ಇಂಗ್ಲೀಷು ಭಾಷೆಯ ಉಪಯೋಗ ಸ್ವಾತಂತ್ರ್ಯವು ಅದ್ಭುತವಾಗಿತ್ತು. ಒಬ್ಬ ಭಾರತೀಯನು ಬರೆದ ಇಂಗ್ಲೀಷು ವ್ಯಾಸಗಳು ಎಷ್ಟು ಶುದ್ಧ-ಸರಳ ಸಮಂಜಸವಾಗಿರುವುವೆಂಬುದರ ಮಾದರಿಯನ್ನು ಆಂಗ್ಲೇಯ ವಿದ್ಯಾರ್ಥಿಗಳೆದುರಿಗೆ ಪ್ರದರ್ಶಿಸುವುದಕ್ಕಾಗಿ, ಆಗ ಮುಂಬಯಿ ಆಧಿಪತ್ಯದ ವಿದ್ಯಾಭ್ಯಾಸದ ಇಲಾಖಾ ಮುಖ್ಯಾಧಿಕಾರಿಯಾಗಿದ್ದ ಮಿ|| ಹೊವಾರ್ಡ್ ಸಾಹೇಬನು ರಾನಡೇಯವರು ಬರೆದ ಎಷ್ಟೋ ವ್ಯಾಸಗಳನ್ನು ಸಂಗ್ರಹಿಸಿ ಇಂಗ್ಲೆಂಡಿಗೆ ಕಳುಹಿಸಿದನು. ಇಂಗ್ಲೀಷ್ ವಿದ್ಯಾಭ್ಯಾಸದಿಂದ ಅವರು ಆಂಗ್ಲೇಯ ಸಂಸ್ಕೃತಿಯ ಹೃದಯಮೂಲವನ್ನೇ ಸ್ವಾಧೀನಗೊಂಡಿದ್ದರು. ಜಗಜೀವನದಲ್ಲಿ ವಿದ್ಯಾಸುಧಾರಣೆ ಧರ್ಮಸುಧಾರಣೆ ರಾಜಕೀಯಸುಧಾರಣೆ ಮತ್ತು ವೈಜ್ಞಾನಿಕೋನ್ನತಿ ಇವು ಇಂಗ್ಲೀಷ್ ಭಾಷೆಯಲ್ಲಿ ತಮ್ಮ ತಾಯಿಬೇರನ್ನು ಹುದುಗಿಸಿಟ್ಟಿವೆ. ಭಾರತೀಯ ಚಿತ್ತವೃತ್ತಿಯ ಮೂಲಸೂತ್ರವು ವೇದಗಳು ಉಪನಿಷತ್ತು-ಪುರಾಣಗಳು ಮತ್ತು ಅಮೌಲ್ಯ ಭಕ್ತಿಸಂಸ್ಥೆ ಇವುಗಳನ್ನೊಳಗೊಂ

ಇರುವ ಸಂಸ್ಕೃತ ಭಾಷೆಯಲ್ಲಿ ಅಡಗಿದೆ. ಇವು ಒಂದರಿಂದೊಂದು ಅತಿಶಯ ವ್ಯತ್ಯಾಸವಾಗಿವೆ. ಭಾರತೀಯ ವಿದ್ಯಾಸಂಸ್ಕೃತಿಯಿಂದ ಫಲವತ್ತಾಗಿದ್ದ ನಮ್ಮ ಕಥಾನಾಯಕರ ಮನೋಮಯ ಕ್ಷೇತ್ರದಲ್ಲಿ ಈ ಪಾಶ್ಚಾತ್ಯ ವಿದ್ಯಾಬೀಜವು ಉತ್ತಮ ಫಲವನ್ನು ಕೊಡದೆ ಎಂದಿಗೂ ವ್ಯರ್ಥವಾಗದಿಲ್ಲವೆ? ಇಂಗ್ಲಿಷ್ ವಿದ್ಯಾಭ್ಯಾಸದಿಂದ ಪಾಶ್ಚಾತ್ಯನಾಗರಿಕತೆಯ ಮೋಹಪಾಶಕ್ಕೆ ಬದ್ಧರಾಗಿ ತಮ್ಮ ಹಿರಿಯರ ಕುಲಜಾತಿಗೋತ್ರ ಸೂತ್ರಗಳನ್ನು ಮರೆತ ಅನೇಕರಿರಬಹುದು. ಆದರೆ ಅದೇ ಪಾಶ್ಚಾತ್ಯ ಸಂಸ್ಕೃತಿಯೇ ನಮ್ಮ ಕಥಾನಾಯಕರ ಮನಸ್ಸಿನ ಮೇಲೆ ಮೂಡಿಸಿದ ಮುದ್ರಿಕೆಯ ಪರಿಣಾಮವು ಅಮೌಲ್ಯವಾದುದಾಯಿತು.

ತಣಿಯದ ವ್ಯಾಸಂಗ ಕ್ಷುಧಾಪೀಡಿತರಾದ ರಾಮದೇವರಿಗೆ ೧೮೭೩ನೆಯ ಸಂ|| ದಲ್ಲಿ ನೇತ್ರ ರೋಗವುಂಟಾಗಿ ಆರುತಿಂಗಳ ಕಾಲ ಬಹು ಬಾಧೆ ಕೊಟ್ಟಿತು. ಆ ಕಾಲದಲ್ಲೆಲ್ಲಾ ಅವರ ಸಹಾಧ್ಯಾಯಿಗಳು ಆ ತಮ್ಮ ಮಿತ್ರರನ್ನು ಪ್ರತಿದಿನವೂ ವೈದ್ಯರಮನೆಗೆ ಕರೆದೊಯ್ಯುತ್ತಲೂ, ಸಮೀಪದಲ್ಲಿ ಕುಳಿತು ಗ್ರಂಥಗಳನ್ನೂ ವೃತ್ತಪತ್ರಿಕೆಗಳನ್ನೂ ಓದಿ ಹೇಳುತ್ತಲೂ, ಅವರಿಗೆ ಬೇಸರುಂಟಾಗದಂತೆ ಸಹಾಯಮಾಡುತ್ತಿದ್ದರು. ಆರುತಿಂಗಳಕಾಲ ಚಿಕಿತ್ಸೆ ಹೊಂದಿದ ಮೇಲೆ ನೇತ್ರಬಾಧೆಯು ಸ್ವಲ್ಪಮಟ್ಟಿಗೆ ಗುಣವಾಯಿತಾದರೂ ದೇಹಾಂತ್ಯದವರೆಗೂ ಆ ಇಂದ್ರಿಯವು ಊನವಾಗಿಯೇ ಇದ್ದಿತು.

ಮಾತೃದೇಶ ಸೇವೆಯಲ್ಲಿ ಮಹತ್ವದ ಕಾರ್ಯಗಳನ್ನೆಸಗಿದ ದೇಶ ಸೇವಕರನೇಕರು ತಮ್ಮ ಕಾರ್ಯ ಕ್ಷೇತ್ರವನ್ನು ಉಪಾಧ್ಯಾಯ ವೃತ್ತಿಯಿಂದಲೇ ಪ್ರಾರಂಭಿಸಿದ ಉದಾಹರಣೆಗಳು ಅನೇಕವಾಗಿ ದೊರೆಯುತ್ತಿವೆ. ಉಪಾಧ್ಯಾಯ ವೃತ್ತಿಯಲ್ಲಿ, ವಿಶೇಷ ದ್ರವ್ಯಸಂಪಾದನೆಗೆ ಅವಕಾಶವಿಲ್ಲದುದರಿಂದ ಅದು ಲೌಕಿಕವಾಗಿ ಲಾಭಕರವಾದುದಲ್ಲವೆಂದೂ ಆದುದರಿಂದ ಅಧಮವೃತ್ತಿಯೆಂದೂ ಹಳಿಯತೊಡಗುವವರಿಗೆ ಈಗಲೂ ನಮ್ಮಲ್ಲಿ ಕೊರತೆಯಿಲ್ಲ. ಜೀವನೋಪಾಯಕ್ಕೆ ಇತರ ಉಪಾಯವನ್ನು ಅರಿಯದೆ, ಆ ವೃತ್ತಿಯನ್ನೇ ನಂಬಿಕೊಂಡಿರುವಹಲವರು ಅದನ್ನು ಕೇಳಿ, ನಿರುತ್ಸಾಹಪಟ್ಟು ಕುಗ್ಗಿ ಧರೆಗಿಳಿದು-ಜೀವಿತ ಪ್ರಾರಂಭದಲ್ಲಿ ಕೆಲಸಕ್ಕೆ ಬಾರದ ಆ ವೃತ್ತಿಯನ್ನು ಅವಲಂಬಿಸಿದ ತಮ್ಮ ಬುದ್ಧಿಹೀನತೆಗಾಗಿ ತಮ್ಮನ್ನೇ ತಾವು ಹಳಿದುಕೊಂಡು-ವಿಧಿಯನ್ನು ನಿಂದಿಸಿ, ಅದು

ತಮ್ಮ ಹಣೆಯ ಬರಹವೆಂದು ಗೋಳಿಟ್ಟುಕೊಳ್ಳುವವರನ್ನು ಕಾಣುವುದೂ ದುರ್ಲಭವಲ್ಲ! ವಾಸ್ತವ, ಆ ಉದ್ಯೋಗದಲ್ಲಿ ಪೋಲೀಸು ಮಿಲಿಟರಿ ಮುಂತಾದುವುಗಳಂತೆ ಸೊಗಸಾಗಿ ವಸ್ತ್ರಗಳನ್ನು ಧರಿಸಿ, ದಂಭ ದರ್ಪಗಳಿಂದ ಮೆರೆಯಲು ಅವಕಾಶವಿಲ್ಲ: ನಿಜ, ಅದರಲ್ಲಿ ಇತರ ಕೆಲವು ಇಲಾಖೆಗಳಲ್ಲಿ ಇರುವಂತೆ ಕಂಡಂತೆ-ಕಾಣದಂತೆ ದ್ರವ್ಯ ಸಂಚಯಮಾಡಲು ಅವಕಾಶವಿಲ್ಲ! ಜನಗಳನ್ನು ಹೆದರಿಸಿ ಬೆದರಿಸಿ ಪೀಡಿಸಲು ಅವಕಾಶವಿಲ್ಲ, ನಿಜ. ಆದರೆ, ಜೀವಿತದ ಮುಖ್ಯೋದ್ದೇಶವಾದ ಚತುರ್ವಿಧ ಪುರುಷಾರ್ಥಗಳನ್ನೂ ಸಂಪಾದಿಸಲು ಈ ಉದ್ಯೋಗಕ್ಕಿಂತಲೂ ಮೇಲಾದುದು ಮತ್ತಾವುದಿರುವುದೆಂದು, ವಿಚಾರವಿಲ್ಲದೆ ಅದನ್ನು ದೂಷಿಸುವವರೂ—ಆ ದೂಷಣೆಯನ್ನು ಕೇಳಿ ಹೇಡಿತನದಿಂದ ತಲೆ ತಗ್ಗಿಸುವವರೂ ಯೋಚಿಸಲಿ! ಐಹಿಕದೊಂದಿಗೆ ಪಾರತ್ರಿಕ ಸಾಧನವನ್ನೂ ಮಾಡಿಕೊಳ್ಳಲು ಇದಕ್ಕಿಂತಲೂ ಉತ್ತಮ ಉದ್ಯೋಗವು ಮತ್ತಾವುದಿರುವುದೆಂದು ವಿಚಾರದೃಷ್ಟಿಯಿಂದ ನೋಡಲಿ! ಜನಾಂಗದ ಸಸಿಗಳನ್ನು, ವೀರರೂ ಧೀರರೂ ಪರೋಪಕಾರಧುರೀಣರೂ ದೇಶಸೇವಕರೂ ಆಗಿ ಮಾತೃದೇಶೋದ್ಧಾರಕರಾಗುವಂತಹ-ಭಗವದ್ಭಕ್ತರಾಗಿ ಆಸ್ತಿಕರಾಗಿ ಜನ್ಮ ಸಾರ್ಥಕ್ಯವನ್ನುಂಟುಮಾಡುವಂತಹ-ಅಮೃತಮಯ ಬೋಧನೆಗಳನ್ನು ಕೊಡುವ ಸೌಭಾಗ್ಯವು, ಮತ್ತಾವ ಉದ್ಯೋಗಿಗೆ ದೊರೆಯಲವಕಾಶವಿರುವುದು! ಇತರರ ಉದ್ಯೋಗವು ಕಾಳುಕಡ್ಡಿಗಳೊಂದಿಗೆ, ಕಾಸುವೀಸಗಳೊಂದಿಗೆ, ಕಾಗದ ಪತ್ರಗಳೊಂದಿಗೆ, ಮಣ್ಣು ಕಲ್ಲು ಮರ ಕಬ್ಬಿಣಗಳೊಂದಿಗೆ ಸಂಬಂಧ ಪಟ್ಟುದಾದರೆ ಉಪಾಧ್ಯಾಯನ ಪವಿತ್ರೋದ್ಯೋಗವು ಅವಿನಾಶಿಯಾದ ಜೀವಾತ್ಮನೊಂದಿಗೆ ಸಂಬಂಧಪಟ್ಟುದಾಗಿದೆ. ತನ್ನ ಮತ್ತು ತನ್ನಂತಹ ಇತರ ಅನೇಕರ ಆತ್ಮೋದ್ಧಾರಕ್ಕಾಗಿ ಪ್ರಯತ್ನಿಸುವುದು ಶ್ರೇಷ್ಠ ಉದ್ಯೋಗವಲ್ಲವೆ! ಅದನ್ನು ಅವಲಂಬಿಸಿರುವವರು ತಮ್ಮ ಜೀವಿತದಲ್ಲಿ ದೊರೆತಿರುವ ಆ ಸುಸಂಧಿಗಾಗಿ ಹೆಮ್ಮೆಪಡಬೇಡವೆ! ಆ ಉದ್ಯೋಗದ ಗೌರವವನ್ನರಿಯದೆ-ಅದನ್ನು, ಕಾಸು ವೀಸಗಳಿಂದ ಬೆಲೆ ಮಾಡಿ ದೂಷಿಸುವ ಅವಿವೇಕಿಗಳ ಅಲ್ಪತನಕ್ಕಾಗಿ ಪರಿತಾಪ ಪಡಬೇಕಲ್ಲದೆ, ತಲೆ ತಗ್ಗಿಸಬೇಕಾದುದೇಕೆ?

ಮಹದೇವರಾವ್ ರಾನಡೇಯವರು ೧೮೬೨ನೆಯ ಸಂ|| ದಲ್ಲಿ ಎಲ್ಫಿನ್‌ಸ್ಟನ್ ಕಾಲೇಜಿನಲ್ಲಿಯೇ ತಮ್ಮ ಉದ್ಯೋಗ ಪ್ರಾರಂಭ ಮಾಡಿದರು. ಕೆಳಗಿ

ನ ತರಗತಿಗಳಿಗೆ, ದೇಶಚರಿತ್ರೆ, ಭೂವಿವರಣೆ, ಗಣಿತಶಾಸ್ತ್ರ, ರಾಜನೀತಿಶಾಸ್ತ್ರ, ತರ್ಕಶಾಸ್ತ್ರ, ಇಂಗ್ಲಿಷ್ ವಾಕ್ಯರಚನೆ-ಇಂಗ್ಲಿಷ್ ಪದ್ಯಕಾವ್ಯಗಳು ಮುಂತಾದುವುಗಳನ್ನು ಬೋಧಿಸುವ ಕೆಲಸವು ಅವರ ಪಾಲಿಗೆ ಬಂದಿದ್ದಿತು. ಯಾವ ಪಾಠವನ್ನು ಬೋಧಿಸುವಾಗಲೂ, ಅರ್ಧಮರ್ಧವಾಗಿ ಅಲ್ಲದೆ ಸಂಪೂರ್ಣ ಶ್ರದ್ಧೆಯಿಂದ ಆ ಪಾಠದ ಹೃದಯ ಮೂಲಕ್ಕೇ ಪ್ರವೇಶಿಸಿ ಬೋಧಿಸುತ್ತಿದ್ದುದರಿಂದ ಅವರ ಬೋಧನೆಯು ವಿದ್ಯಾರ್ಥಿಗಳಿಗೆ ಅತ್ಯಂತ ಪ್ರಿಯಕರವಾಗಿದ್ದು, ಅವರ ಪಾಠಕ್ಕೆ ಯಾವನೊಬ್ಬನೂ ತಪ್ಪಿಸಿಕೊಳ್ಳದೆ ಹಾಜರಿರುವಂತೆ ಆಕರ್ಷಿಸುತ್ತಿದ್ದಿತು.-ಅವರು ತಾವು ಬೋಧಿಸಬೇಕಾದ ವಿಷಯಕ್ಕೆ ಸಂಬಂಧಿಸಿದ ಸಮಸ್ತ ವಿಷಯಗಳನ್ನೂ ಸ್ವತಃ ಪಾಠಮಾಡುವರು. ಈ ಸ್ವಭಾವದ ಉಪಾಧ್ಯಾಯರಾದುದರಿಂದ, ಅವರು ಕೇವಲ ಪರೀಕ್ಷೆಗಳಲ್ಲಿ ತೇರ್ಗಡೆಯಾಗುವುದಕ್ಕಾಗಿ ಮಾತ್ರ ಪಠ್ಯಪುಸ್ತಕಗಳಲ್ಲಿನ ವಿಷಯಭಾಗಗಳನ್ನು ಬಾಯಿಪಾಠ ಮಾಡಲು ಯಾವ ಹುಡುಗನಿಗೂ ಅವಕಾಶ ಕೊಡುತ್ತಿರಲಿಲ್ಲ. ಆಂಗ್ಲೇಯ ಅರ್ಥಶಾಸ್ತ್ರಾಚಾರ್ಯನೆಂದು ಹೆಸರಾಗಿದ್ದ ಜಾನ್‌ಸ್ಟ್ಯುಯರ್ಟ್‌ಮಿಲ್ ಸಾಹೇಬನ ಕೆಲ ಕೆಲವು ಸಿದ್ಧಾಂತಗಳ ವಿಷಯದಲ್ಲಿ ಅವರಿಗೆ ಸಮ್ಮತಿಯಿರಲಿಲ್ಲ. ಆಂಗ್ಲೇಯ ದೇಶಪದ್ಧತಿಗಳಿಗೂ, ಅಲ್ಲಿಯ ಅನುಕೂಲ-ಪ್ರತಿಕೂಲಗಳಿಗೂ ಅನುಸಾರವಾಗಿರುವಂತೆ ರಚಿತವಾದ ಅರ್ಥಶಾಸ್ತ್ರವನ್ನು, ವಿಚಾರವಿಲ್ಲದೆ, ಆ ದೇಶದಿಂದ ಅತ್ಯಂತ ಭಿನ್ನಸ್ಥಿತಿಯಲ್ಲಿರುವ ಭಾರತ ದೇಶವಿಚಾರಗಳಿಗೆ ಸಂಬಂಧಿಸಲು ಯತ್ನಿಸುವುದು ಬುದ್ಧಿಹೀನತೆಯೆಂದು ಅವರು ಹೇಳುತ್ತಿದ್ದರು.

ಸಂಪೂರ್ಣ ಸಿದ್ಧತೆಯಿಂದ ಜ್ಞಾನ ಭಂಡಾರವನ್ನು ತುಂಬಿಕೊಂಡು ಪಾಠಶಾಲೆಗೆ ನಡೆದು ಬಾನಡೆಯುವರು ತಮ್ಮ ವಿದ್ಯಾರ್ಥಿಗಳಿಗೆ ಅಖಂಡ ವೃಷ್ಟಿಯಂತೆ ಬೋಧಿಸುತ್ತಿದ್ದರಾದರೂ ಅದಷ್ಟನ್ನೂ ಗ್ರಹಿಸಿಕೊಳ್ಳುವ ಸಾಮರ್ಥ್ಯವು ಅವರಲ್ಲನೇಕರಿಗೆ ಇರಲಿಲ್ಲ. ಆದರೇನು, ಅವರ ವಿದ್ಯಾರ್ಥಿ ವರ್ಗಕ್ಕೇನೋ ಆ ತಮ್ಮ ಗುರುವರ್ಯರಲ್ಲಿದ್ದ ಗೌರವಾದರಗಳಿಗೆ ಮಿತಿ ಇರಲಿಲ್ಲ!

೧೮೬೭ ನೆಯ ಸಂ|| ದಲ್ಲಿ ಅವರು ಬೊಂಬಾಯಿ ಸರ್ಕಾರದ ಓರಿಯಂಟಲ್ ಟ್ರಾನ್ಸ್‌ಲೇಟರ್ ಎಂದರೆ ತರ್ಜುಮಾದಾರರಾಗಿ ನಿಯಮಿತರಾದರು. ಇದರಿಂದ ಉಪಾಧ್ಯಾಯವೃತ್ತಿಯನ್ನು ಕೆಲಕಾಲ ತ್ಯಜಿಸಿ ಪೂನಾ ಪಟ್ಟಣದಲ್ಲೇ ನೆಲೆಗೊಳ್ಳಬೇಕಾಯಿತು. ಮುಂದೆ ಕೆಲದಿನಗಳಲ್ಲಿ ಅಕಲ್ಕೋಟೆಯ ಕಾರಭಾರಿ

ಯಾಗಿ ಹೋಗಿದ್ದು ತರುವಾಯ ೧೮೭೭ನೆಯ ಸೆಪ್ಟಂಬರು ತಿಂಗಳಲ್ಲಿ ಕೊಲ್ಹಾಪುರದಲ್ಲಿ ನ್ಯಾಯಾಧಿಪತಿಯಾಗಿರಲು ಕಳುಹಿಸಲ್ಪಟ್ಟರು. ಈ ಕೆಲಸಗಳೊಂದಿಗೆ ತರ್ಜುಮಾದಾರರ ಕಾರ್ಯವನ್ನೂ ಮಾಡುತ್ತಿದ್ದರು. ಅವರ ಅವಲೋಕನೆಗಾಗಿ ಸರ್ಕಾರದಿಂದ ಕಳುಹಿಸಲ್ಪಟ್ಟ ಪುಸ್ತಕ ಪತ್ರಿಕೆಗಳನ್ನು ವಿಮರ್ಶಿಮಾಡಿ ಅಲ್ಲಿಂದಲೇ ತಮ್ಮವರದಿಯನ್ನು ವಿದ್ಯಾಭ್ಯಾಸದ ಇಲಾಖಾ ಅಧಿಕಾರಿಗೆ ಕಳುಹಿಸುವರು

೧೮೭೮ರಲ್ಲಿ ರಾನಡೆಯವರು ಎಲ್‌ಫಿನ್‌ಸ್ಟನ್ ಕಾಲೇಜಿನಲ್ಲಿ ಇಂಗ್ಲಿಷ್ ಮತ್ತು ದೇಶ ಚರಿತ್ರೆಗಳ ಪ್ರೊಫೆಸರರಾಗಿ ಕರೆಸಿಕೊಳ್ಳಲ್ಪಟ್ಟರು. ಅವರು ಹಾಗೆ ಬಂದ ಈ ಸಾರಿ, ಅವರ ಪೂರ್ವದ ವಿದ್ಯಾರ್ಥಿಗಳೂ, ಸಹಾಧ್ಯಾಯಿಗಳೂ, ಸಹೋದ್ಯೋಗಿಗಳೂ ಕಲೆತು ಅವರ ಗೌರವಾರ್ಥವಾಗಿ ದೊಡ್ಡದೊಂದು ಸಭೆಯನ್ನು ನೆರೆಯಿಸಿ, ಅದರಲ್ಲಿ ಅವರಿಗೊಂದು ಬಂಗಾರದ ಗಡಿಯಾರವನ್ನು ಬಹುಮಾನಮಾಡಿದರು. ಮುಂದೆ ಎರಡೂವರೆ ವರ್ಷಕಾಲ ಅವರು ಸ್ಮಾಲ್‌ಕಾಜು ಕೋರ್ಟು ನ್ಯಾಯಾಧಿಪತಿಯಾಗಿಯೂ, ಪೋಲೀಸು ಮ್ಯಾಜಿಸ್ಟ್ರೇಟಾಗಿಯೂ, ಹೈಕೋರ್ಟಿನ ಡೆಪ್ಯೂಟಿ ರಿಜಿಸ್ಟ್ರಾರ್ ಮತ್ತು ಅಸಿಸ್ಟಂಟು ರಿಜಿಸ್ಟ್ರಾರ್ರಾಗಿಯೂ ಕೆಲಸಗಳನ್ನು ಮಾಡಿದರು. ೧೮೭೧ರಲ್ಲಿ ಅವರು ಅಡ್ವೊಕೇಟ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಲು, ಸರ್ಕಾರದವರು ಅವರನ್ನು ನ್ಯಾಯಾಧಿಪತಿಯ ಉದ್ಯೋಗದಲ್ಲಿ ಸ್ಥಿರಗೊಳಿಸಿ ಪೂನಾಪಟ್ಟಣಕ್ಕೆ ಕಳುಹಿಸಿದರು. ಹೀಗೆ ನಮ್ಮ ಕಥಾನಾಯಕರು ತಮ್ಮ ಪ್ರೌಢವಿದ್ಯಾಭ್ಯಾಸವನ್ನು ಮುಗಿಸಿದ ಸ್ವಲ್ಪ ಕಾಲದಲ್ಲೇ ಬಹು ಮಹತ್ವದ ಪದವಿಗಳನ್ನು ಧರಿಸಿ ವಿಖ್ಯಾತರಾದರು.



## ಅಧ್ಯಾಯ ೪ "ಸಾರ್ವಜನಿಕಸಭಾ"

ಕಾಲವು ಸಾಗಿದಂತೆಲ್ಲ ಲೋಕದರೀತಿನೀತಿಗಳೂ ಬದಲಾಗುತ್ತಿರುತ್ತವೆ. ಇದು ಸ್ವಾಭಾವಿಕವಾದುದು. ಈಗ್ಗೆ ನೂರಾರು ವರ್ಷಗಳ ಹಿಂದಿದ್ದ ರೀತಿನೀತಿಗಳಿಗೂ ಈಗಿನ ರೀತಿನೀತಿಗಳಿಗೂ ಎಷ್ಟೋ ವ್ಯತ್ಯಾಸವಿದೆ.

ಸಾಮಾಜಿಕ ಪದ್ಧತಿಗಳಲ್ಲಿ ಕೆಲವು ಸರ್ವಕಾಲ ಸರ್ವಾವಸ್ಥೆಗಳಿಗೂ ಒಂದೇ ರೀತಿಯಾಗಿರಲು ತಕ್ಕುದಾಗಿರುವುವು. ಮತ್ತೆ ಕೆಲವು ಬದಲಾಗಬೇಕಾದುದು ಆವಶ್ಯಕವಾಗಿರುತ್ತದೆ. ಹಾಗೆ ವ್ಯತ್ಯಾಸವಾಗತಕ್ಕುವು ಕಾಲಚಕ್ರದ ಸುಳಿ ಮುಕ್ಕೊಳಪಟ್ಟು ಹೇಗೂ ಆಗಿಯೇ ಆಗುವುವು; ಉದಾರ ಸ್ವಭಾವದ ಕೆಲವರು ಕಾಲಚಕ್ರದ ಈ ಸ್ವಾಭಾವಿಕ ಪರಿಚಲನೆಯ ಸ್ಥಿತಿಯನ್ನು ಅರಿತು ಅದನ್ನನುಸರಿಸಿ ನಡೆದು, ಅದರಿಂದ ಉಂಟಾಗತಕ್ಕ ಸುಖಸೌಲಭ್ಯಗಳನ್ನು ಅನುಭವಿಸುವರು. ಮತ್ತೆ ಕೆಲವರು ಅದನ್ನು ವಿರೋಧಿಸಿ ಕಷ್ಟ ತಾಪತ್ರಯಗಳಿಗೆ ಒಳಗಾಗುವರು.

ಬ್ರಿಟಿಷರ ಅಧಿಕಾರವು ಹಿಂದೂಸ್ಥಾನದಲ್ಲಿ ಸ್ಥಾಪಿತವಾಗಿ-ಅದರೊಂದಿಗೆ ಬಂದ ಕ್ರೈಸ್ತ ಮತತತ್ವಗಳು ಸರ್ವತ್ರ ಪ್ರಚಾರವಾಗುತ್ತಿದ್ದುದರಿಂದ ಆ ಮತದಲ್ಲಿದ್ದ ಕೆಲವು ಲೌಕಿಕ ಸೌಲಭ್ಯಗಳು ಉದಾರಹೃದಯದ ಹಿಂದೂಗಳಲ್ಲೂ ಚಲನೆಯನ್ನುಂಟುಮಾಡಿದ್ದುವು. ಅದರ ಫಲವಾಗಿ, ನಮ್ಮವರಲ್ಲಿದ್ದ ಚಿಕ್ಕ ಮಕ್ಕಳಿಗೇ ಮದುವೆ ಮಾಡುತ್ತಿದ್ದ ಪದ್ಧತಿ, ಹಿಂದೂ ವಿಧವೆಯರ ವರ್ಣನಾತೀತವಾದ ಕಷ್ಟನಷ್ಟಗಳು, ವಿದ್ಯಾವಿಹೀನರಾದ ನಿಮ್ನ ಜಾತಿಯವರು ಅನುಭವಿಸುತ್ತಿದ್ದ ದುರ್ಗತಿ ದುಸ್ಥಿತಿಗಳು, ಎಣಿಸಲಾಗದಷ್ಟು ಜಾತಿ ಮತಭೇದಗಳಿಂದ ಉಂಟಾಗುತ್ತಿದ್ದ ತೊಂದರೆ, ಇವುಗಳನ್ನು ಸಾಧ್ಯವಾದಷ್ಟು ದೂರಮಾಡಬೇಕೆಂದು ನಮ್ಮವರಲ್ಲೇ ಕೆಲವರಿಗೆ ಅಪೇಕ್ಷೆಯುಂಟಾಗಿದ್ದಿತು. ಅದರ ಫಲವಾಗಿ ೧೮೪೮ನೆಯ ಸಂ| ದಲ್ಲಿ ದಾದೋಬಾ ಪಾಂಡುರಂಗ ಎಂಬಾತನಿಂದ 'ಪರಮಹಂಸಮಂಡಲಿ' ಎಂಬೊಂದು ಸಂಸ್ಥೆಯು ಪೂನಾ ಪಟ್ಟಣದಲ್ಲಿ ಸ್ಥಾಪನೆಯಾಯಿತು. ಜಾತಿ ಮತಭೇದಗಳನ್ನೆಣಿಸದೆ ಇರಬೇಕು, ವಿಧವಾ ವಿವಾಹವನ್ನು ಆಚರಣೆಗೆ ತರಬೇಕು, ಮೂರ್ತಿಪೂಜೆಯನ್ನು ನಿವಾರಿಸಬೇಕು, ಈ ಮುಂತಾದುವು ಆ ಸಮಾಜದ ಮುಖ್ಯ ಸಿದ್ಧಾಂತಗಳಾಗಿದ್ದುವು. ಈ ಸಮಾಜದ ಸಭ್ಯರ ಸಂಖ್ಯೆಯು ಒಂದು ಸಾವಿರವಾಗುವವರೆಗೆ ಇದರ ಉದ್ದೇಶಗಳನ್ನು ಪ್ರಕಾಶಪಡಿಸದಂತೆ ಜಾಗರೂಕರಾಗಿದ್ದರು. ಇದರ ಕಾರ್ಯಕಲಾಪಗಳು ನಿದಾನವಾಗಿ ಒಳಗೊಳಗೇ ಸಾಗುತ್ತಾ ಬಂದುವು.

ಇತ್ತ ಮಹಾರಾಷ್ಟ್ರ ದೇಶದಲ್ಲಿ ಮೇಲ್ಕಂಡಂತೆ ಸಾಮಾಜಿಕ ಸುಧಾರಣೆಯು ಮೊಳಕೆ ಎದ್ದ ಕಾಲಕ್ಕೆ ಬಹುದಿನಗಳ ಹಿಂದೆಯೇ ಬಂಗಾಳಾ

ದೇಶದಲ್ಲಿ ರಾಜಾರಾಮ ಮೋಹನರಾಯ್ ಮಹಾಶಯನಿಂದ ಬ್ರಹ್ಮಸಮಾಜವೆಂಬ ಸಂಸ್ಥೆಯು ಪ್ರಾರಂಭವಾಗಿದ್ದಿತು. ಅದರ ಪ್ರಕೃತ ಸಂಚಾಲಕನು, ಬಾಬೂ ಕೇಶವಚಂದ್ರಸೇನನೆಂಬ ವಿದ್ವಾನಿಧಿಯಾಗಿದ್ದನು. ಆಂಗ್ಲೇಯ ಭಾಷೆಯಲ್ಲಿ ಆತನ ನಿರರ್ಗಳ ವಕ್ತೃತ್ವ ಶಕ್ತಿಯೂ, ತರ್ಕಸಾಮರ್ಥ್ಯವೂ, ಪೌರ್ವಾತ್ಯ ತತ್ವ ಸಿದ್ಧಾಂತಗಳಲ್ಲಿ ಆತನಿಗಿದ್ದ ಅನುಪಮ ಪರಿಚಯ ಪ್ರವೇಶಗಳೂ ಇಂಗ್ಲೀಷ್ ಭಾಷಾಪರಿಚಯವಿದ್ದ ಸಕಲರನ್ನೂ ಆತನೆಡೆಗೆ ಆಕರ್ಷಿಸುತ್ತಿದ್ದುವು. ಆತನು ಪೂನಾ ಮುಂಬಯಿ ಪಟ್ಟಣಗಳನ್ನು ಸಂದರ್ಶಿಸಿ ಉಪನ್ಯಾಸ ಮಾಡಿದಾಗ ಸಹಸ್ರಾರು ಜನಗಳು ನೆರೆದು ಆತನ ವದನದಿಂದ ಸುರಿದ ವಾಕ್ಸುಧಾ ಪಾನ ಮಾಡಿದರು. ಅವರಲ್ಲಿ ನಮ್ಮ ಕಥಾನಾಯಕರೂ ಒಬ್ಬರು. ಕೇಶವ ಚಂದ್ರಸೇನನ ಬೋಧನೆಯಿಂದ ಚೋದಿತರಾದ ಆರ್. ಜಿ. ಭಂಡಾರಕರ್, ಏ. ಎ. ಮೋದಕ್ ಮೊದಲಾದ ಕೆಲಮಂದಿ ಆಂಗ್ಲ ಭಾಷಾಪರಿಣತರಾದ ತರುಣರು ಮೊದಲ್ಕೊಂಡ 'ಪರಮಹಂಸಮಂಡಲಿ'ಯನ್ನೇ 'ಪ್ರಾರ್ಥನಾಸಮಾಜ' ಎಂಬ ಹೆಸರಿನಿಂದ ಸುಧಾರಿಸಿ ನೂತನರೀತಿಯಲ್ಲಿ ಕಾರ್ಯಪ್ರಾರಂಭಮಾಡಿದ್ದರು. ಕೇಶವ ಚಂದ್ರಸೇನನ ಉಪನ್ಯಾಸಗಳಿಂದ, ನಮ್ಮ ಕಥಾನಾಯಕರಲ್ಲೂ ಬಾಲ್ಯದಿಂದಲೂ ಇದ್ದ ಕೆಲವು ವಿಚಾರಗಳು ವಿಕಾಸಹೊಂದಿ ಸ್ಫುಟರೀತಿಯಿಂದ ಕಾಣುವಂತೆ ಕಾರ್ಯರೂಪಕ್ಕಿಳಿಯಲು ಅನುಕಾಶವೊದಗಿತು. ಕೊಟ್ಟಲಲ್ಲಿನ ಎಳೆಮಕ್ಕಳಿಗೇ ಮಾಡುತ್ತಿದ್ದ ಮದುವೆಗಳು, ಬಾಲ್ಯವಯಸ್ಸಿನಲ್ಲೇ ವಿಧವೆಯರಾದ ಹೆಣ್ಣುಮಕ್ಕಳು ಮರಣ ಪರ್ಯಂತರ ಅನುಭವಿಸುತ್ತಿದ್ದ ವರ್ಣಿಸಲಾಗದ ದುಃಖ ದುಸ್ಥಿತಿಗಳು, ಹೋಳಿ ಮುಂತಾದ ಹಬ್ಬಗಳಲ್ಲಿ ನಡೆಸುತ್ತಿದ್ದ ಅತಿಲಜ್ಜಾಕರವಾದ ಕೆಲಕೆಲವು ನಡೆವಳಿಕೆಗಳು ಅರ್ಥವಿಲ್ಲದ ವ್ರತನಿಯಮಗಳೆಂಬ ವಿಚಾರಗಳು, ಭಕ್ತಿಶ್ರದ್ಧಾ ಲೇಶವನ್ನೂ ಅರಿಯದ ಮೂರ್ತಿಪೂಜೆ ಈ ಮುಂತಾದುವು ಅವರ ಮನಸ್ಸಿನಲ್ಲಿ ಅತಿಶಯ ಕಳವಳವನ್ನೆಬ್ಬಿಸಿದ್ದುವು. ಅವರು ಈವರೆಗೇ ಅನೇಕವೇಳೆ ವಿಧವೆಯರ ದುರ್ಗತಿಯನ್ನು ಕುರಿತು 'ಇಂದುಪ್ರಕಾಶ' ಮುಂತಾದ ಪತ್ರಿಕೆಗಳಲ್ಲಿ ಲೇಖನಗಳನ್ನು ಬರೆದಿದ್ದರು. ವಿಧವಾವಿವಾಹ ವಿಷಯದಲ್ಲಿ ಅತಿಶಯ ಪರಿಶ್ರಮ ಮಾಡುತ್ತಿದ್ದ ಪಂಡಿತ ವಿಷ್ಣುಶಾಸ್ತ್ರಿ ಎಂಬಾತನಿಗೆ ವಿಶೇಷ ಸಹಾಯಕರಾಗಿದ್ದರು. ಹೀಗೆ ಕೇವಲ ಧಾರ್ಮಿಕ ಸಾಮಾಜಿಕ ವಿಚಾರಗಳಲ್ಲಿ ಮಾತ್ರವಲ್ಲ-ತಮ್ಮ ಮಾತೃ

ಭೂಮಿಯ ಸೇವೆಯನ್ನು, ಆರ್ಥಿಕ ರಾಜಕೀಯ ವಿಚಾರಗಳಲ್ಲೂ ಮಾಡು ತ್ತಾ, ರಾನಡೇಯವರು ಕಾಲೇಜು ವಿದ್ಯಾಭ್ಯಾಸವನ್ನು ಬಿಟ್ಟು ಹೊರಬಿದ್ದಾಗಿನಿಂದ ಮರಣ ಪರ್ಯಂತವಾಗಿಯೂ ತಮ್ಮ ಕಾಲವನ್ನು ಅತ್ಯುತ್ಕೃಷ್ಟ ರೀತಿಯಿಂದ ಉಪಯೋಗಿಸಿದರು.

ಹಿಂದೆ ಹೇಳಿದಂತೆ, ನಮ್ಮ ಕಥಾನಾಯಕರು ಪುನಃ ಪೂನಾ ಪಟ್ಟಣಕ್ಕೆ ಬಂದಾಗ, ಪ್ರಥಮ ಶ್ರೇಣಿಯಲ್ಲಿ ಪ್ರಥಮ ವರ್ಗದ ಸಬಾರ್ಡಿನೇಟ್ ಜಡ್ಜ್ ಎಂಬ ಉನ್ನತಾಧಿಕಾರ ಸ್ಥಳವನ್ನು ಅಲಂಕರಿಸಿದ್ದರು. ಆ ಉದ್ಯೋಗಕ್ಕೆ ತಿಂಗಳೊಂದಕ್ಕೆ ಎಂಟುನೂರು ರೂಪಾಯಿಗಳ ವೇತನವಿತ್ತು. ಬಹು ಜವಾಬುದಾರಿಯ ಆ ಉದ್ಯೋಗಕ್ಕೆ ಆವರೆಗೆ ಭಾರತೀಯರನ್ನು ನಿಯಮಿಸಿದ್ದುದು ಅಪೂರ್ವ! ಆದರೆ ಶ್ರೀ ರಾನಡೇಯವರ ನ್ಯಾಯಶಾಸ್ತ್ರಜ್ಞಾನವೂ ಪ್ರತಿಭೆಯೂ, ಅವರಿಗೆ ಇನ್ನೂ ಮೂವತ್ತು ವರ್ಷಗಳು ತುಂಬದ ಪೂರ್ವದಲ್ಲೇ ಆ ಮಹತ್ಪದವಿಯನ್ನು ಪಡೆಯಲು ಅವಕಾಶವನ್ನುಂಟುಮಾಡಿದ್ದವು. ರಾಜ್ಯಾಂಗದವರಿಗೆ ರಾನಡೇಯವರ ವಿಷಯದಲ್ಲಿದ್ದ ಪ್ರೀತಿ ನಂಬಿಕೆಗಳಿಗೆ ಮಿತಿಯಿರಲಿಲ್ಲ. ಅವರ ಕಾರ್ಯ ವಿಚಕ್ಷಣೆಗಳನ್ನು ಮೆಚ್ಚಿಕೊಂಡ ಆಂಗ್ಲೇಯ ನ್ಯಾಯಾಧಿಪತಿಗಳಲ್ಲೊಬ್ಬಾತನು, ಒಂದಾನೊಂದುವೇಳೆ-“ ರಾನಡೇಯವರಲ್ಲಿ ಕಂಡುಬರುವ ತಾಳ್ಮೆ ಮತ್ತು ಕೂಲಂಕುಷ ವಿಚಾರದಿಂದ ಅವರು ಕೊಡುವ ತೀರ್ಪು ಇವುಗಳು ಅದ್ವಿತೀಯವೆನ್ನಿಸಿವೆ. ತಮ್ಮೆದುರಿಗೆ ವಿಚಾರಕ್ಕೆ ಬರುವ ಪ್ರತಿಯೊಂದು ವ್ಯವಹಾರದಲ್ಲೂ ಅದಕ್ಕೆ ಸಂಬಂಧಿಸಿದ ಸಕಲ ಕಾಗದ ಪತ್ರಗಳನ್ನೂ ಸಾವಧಾನದಿಂದಲೂ ಜಾಗರೂಕತೆಯಿಂದಲೂ ಪರಿಶೀಲಿಸಿ, ಇದ್ದ ವಿಚಾರಗಳನ್ನು ಸರಳ ಸುಬೋಧ ರೀತಿಯಲ್ಲಿ ವಿವರಿಸಿ, ಸಾಕ್ಷ್ಯಗಳನ್ನು ಯೋಗ್ಯ ರೀತಿಯಿಂದ ವಿಚಾರಿಸಿ, ವ್ಯವಹಾರ ವಿಚಾರವನ್ನು ಸಕಲದೃಷ್ಟಿಗಳಿಂದಲೂ ವಿಮರ್ಶಿಸಿ ತಮ್ಮ ತೀರ್ಪನ್ನು ಸಮರ್ಥಿಸುವುದಕ್ಕಾಗಿ ಅವರು ಕೊಡುವ ಅನುಕೂಲ ಪ್ರತಿಕೂಲ ಪಕ್ಷದ ಸಮಾಧಾನಗಳು ಅನೇಕವೇಳೆ ಹೈಕೋರ್ಟಿನವರ ಮೆಚ್ಚುಗೆ ಮನ್ನಣೆಗಳನ್ನು ಪಡೆದಿವೆ” ಎಂದು ಬರೆಯುತ್ತಾನೆ.

ರಾನಡೇಯವರು ಪೂನಾಪಟ್ಟಣಕ್ಕೆ ಬರುವುದಕ್ಕೆ ಹಿಂದಿನ ವರ್ಷ ಅಲ್ಲಿ ‘ಸಾರ್ವಜನಿಕಸಭಾ’ ಎಂಬ ಹೆಸರಿನ ಒಂದು ಸಂಸ್ಥೆಯು ಸ್ಥಾಪಿತವಾಗಿತ್ತು.

ಪ್ರಜೆಗಳ ಕಷ್ಟ ನಿಷ್ಠೂರಗಳನ್ನೂ, ಅವುಗಳ ನಿವಾರಣೆಗೆ ಸರ್ಕಾರದವರು ಮಾಡಬಹುದಾದ ಪರಿಹಾರಗಳನ್ನೂ ಸೂಚಿಸಿ ಸಲಹೆಗಳನ್ನು ಕೊಡುವುದು ಆ ಸಂಸ್ಥೆಯ ಮುಖ್ಯ ಉದ್ದೇಶವಾಗಿತ್ತು. ಅದರಲ್ಲಿ ಜಮೀನುದಾರರು, ಸಾಹುಕಾರರು, ವ್ಯಾಪಾರಿಗಳು, ಉದ್ಯೋಗ ನಿವೃತ್ತರಾದ ಸರ್ಕಾರಿ ನೌಕರರು, ನ್ಯಾಯವಾದಿಗಳು, ಉಪಾಧ್ಯಾಯರು ಮತ್ತು ದಕ್ಷಿಣ ಭಾರತದಲ್ಲಿನ ಅನೇಕ ಸಣ್ಣ ದೊಡ್ಡ ಸಂಸ್ಥಾನಾಧಿಪರು ಮುಂತಾದವರೆಲ್ಲರೂ ಸದಸ್ಯರಾಗಿದ್ದರು. ನಮ್ಮ ಕಥಾನಾಯಕರು, ಈ ಸಭೆಯ ಮೂಲಕವಾಗಿ, ತಾವು ಬಹು ಕೆಲಸಗಳನ್ನು ಮಾಡಬಹುದೆಂದು ಯೋಚಿಸಿ, ಪೂನಾಪಟ್ಟಣಕ್ಕೆ ಬಂದ ಸ್ವಲ್ಪ ಕಾಲದಲ್ಲೇ, ಅದಕ್ಕೆ ಸದಸ್ಯರಾಗಿ ಸಭೆಯ ಕಾರ್ಯಸೂತ್ರಗಳನ್ನು ತಮ್ಮ ಕೈಗೆ ತೆಗೆದುಕೊಂಡರು. ಆ ಸಭಾಸ್ಥಾಪಕನು, ವಿನಾಯಕ ವಾಸುದೇವ ಜೋಷಿ ಎಂಬಾತನು. ರಾನಡೇಯವರು ಸದಸ್ಯರಾದಮೇಲೆ, ಜೋಷಿಮಹಾಶಯನು, ಬಹಿರಂಗವಾಗಿ ನಡೆಯಬೇಕಾದ ಸಕಲ ಕಾರ್ಯಗಳನ್ನೂ ನೋಡಿಕೊಳ್ಳುತ್ತಿರಲು ಅವರು ಸೂತ್ರಧಾರಕರಾಗಿಯೂ, ಉತ್ತೇಜಕರಾಗಿಯೂ ಇದ್ದು ಸಕಲ ಕಾರ್ಯಗಳಲ್ಲೂ ಸಲಹೆಗಳನ್ನು ಕೊಡುತ್ತಾ ಇದ್ದರು. ಈ ಮಹನೀಯರಿಬ್ಬರಿಂದ ನಡೆಸಲ್ಪಡುತ್ತಿದ್ದ ಸಾರ್ವಜನಿಕಸಭೆಯು ಪಶ್ಚಿಮಭಾರತದಲ್ಲಿನ ಜನಮನವನ್ನು ಆರ್ಥಿಕ ಸಾಮಾಜಿಕ ಮತ್ತು ರಾಜಕೀಯ ಕಾರ್ಯಗಳಲ್ಲಿ ಸಿದ್ಧಗೊಳಿಸಿ ಬಹು ಮಹತ್ವದ ಲೋಕಸಂಗ್ರಹಣ ಕಾರ್ಯಮಾಡಿತು.

ಈ ಸಭೆಯ ಮೂಲಕ ನಡೆದ ಕಾರ್ಯಕಲಾಪಗಳಲ್ಲಿ ಒಂದೆರಡನ್ನು ಇಲ್ಲಿ ಉದಹರಿಸಬಹುದು. ೧೮೭೧ ನೆಯ ಸಂ॥ ದಲ್ಲಿ ಬ್ರಿಟಿಷ್ ಸಾಮ್ರಾಜ್ಯದ ಮುಖ್ಯ ಮಂತ್ರಿಯಾಗಿದ್ದ ಗ್ಲಾಡ್‌ಸ್ಟನ್ ಸಾಹೇಬನು ಭಾರತ ದೇಶ ವಿಚಾರವನ್ನು ವಿಮರ್ಶಿಸಿ ವರದಿಯನ್ನು ಕಳುಹಿಸಬೇಕೆಂದು, ಒಂದು ಸಮಿತಿಯನ್ನು ಏರ್ಪಡಿಸಿದ್ದನು. ಭಾರತದೇಶದ ರಾಜಕರಣ ಸಂಸಾರದಲ್ಲಿ ಪಿತಾಮಹನೆಂಬ ಪ್ರಖ್ಯಾತಿಗೆ ಪಾತ್ರನಾದ ಸ್ವರ್ಗವಾಸಿ ದಾದಾಭಾಯಿ ನೌರೋಜಿ ಮಹಾಶಯನು ಮೇಲ್ಕಂಡ ಸಮಿತಿಯ ಮುಂದೆ ಭಾರತದೇಶದ ಕ್ಷುದ್ರ ದಾರಿದ್ರ್ಯ ಸ್ಥಿತಿಯನ್ನು ಕುರಿತು ಸಾಕ್ಷ್ಯವಿತ್ತು, ಅದರ ಪರಿಹಾರದ ವಿಷಯದಲ್ಲಿ ಮಾರ್ಗಗಳನ್ನೂ ಸೂಚಿಸಿದ್ದನು. ನಮ್ಮ ಕಥಾನಾಯಕರು ಈ ಸು

ಸಂಧಿಯನ್ನು ಸಾಧಿಸಿ, ಮಹಾರಾಷ್ಟ್ರದೇಶದ ಸಕಲ ಭಾಗಗಳಲ್ಲೂ ಈ ಮೂಲಕವಾಗಿ ಲೋಕ ಜಾಗೃತಿಯನ್ನುಂಟುಮಾಡಿ ಪ್ರಜೆಗಳು ತಮ್ಮ ಅಧಮ ಸ್ಥಿತಿಯನ್ನು ಕಣ್ಣುಬಿಟ್ಟು ನೋಡುವಂತೆ ಮಾಡಬೇಕೆಂದು ಯೋಚಿಸಿದರು. ಅದಕ್ಕಾಗಿ ಸಭಾ ಮೂಲಕವಾಗಿ ಲೆಕ್ಕಪತ್ರಗಳನ್ನು ಸಂಗ್ರಹಿಸಿ, ಮಹಾರಾಷ್ಟ್ರ ದೇಶಸ್ಥಿತಿಯ ವಿಚಾರವಾಗಿ ಒಂದು ಪುಸ್ತಕವನ್ನೂ ಪ್ರಕಟಿಸಿದರು. ಅದರಲ್ಲಿ ದೇಶ ಸ್ಥಿತಿಯನ್ನು ಕೂಲಂಕುಷರೀತಿಯಿಂದ ವಿಮರ್ಶಿಸಿ ಅಹಮ್ಮದ್ ನಗರ ಮತ್ತು ಸೋಲಾಪುರ ಡಿ|| ಗಳಲ್ಲಿನ ದುರ್ಧರ ದಾರಿದ್ರ್ಯಕ್ಕೆ ಸರ್ಕಾರದವರ ಉಪೇಕ್ಷೆಯೇ ಮುಖ್ಯ ಕಾರಣವೆಂದು ಸ್ಪಷ್ಟವಾಗಿ ಹೇಳಿದ್ದರು. ಈವರೆಗೂ ಸಭಾ ಕಾರ್ಯಗಳನ್ನು ಕುರಿತು ವಿಶೇಷ ಗಮನಿಸದಿದ್ದ ಸರ್ಕಾರವು ಈಗ ಅದರ ವಿಷಯದಲ್ಲಿ ಹೆಚ್ಚು ಶ್ರದ್ಧೆಯನ್ನು ವಹಿಸಿ, ಗುಪ್ತದೃಷ್ಟಿಯಿಂದ ನೋಡಿಕೊಳ್ಳತೊಡಗಿತು.

ಮೇಲೆ ಹೇಳಿದ ಸಮಿತಿಯು ನಾಲ್ಕುವರ್ಷಕಾಲ ನಡೆದು ಬಂದು, ಗ್ಲಾಡ್‌ಸ್ಟನ್ ಸಾಹೇಬನ ಅಧಿಕಾರ ನಿವೃತ್ತಿಯೊಂದಿಗೆ ಕೊನೆಗಂಡಿತು. ರಾನಡೇಯವರು, ಆ ಸಂಬಂಧ ವರದಿಗಳನ್ನೆಲ್ಲ ಸೇರಿಸಿ ೩೫೦೦ ಪುಟಗಳ ಒಂದು ಬೃಹದ್‌ವರದಿಯನ್ನು ರಚಿಸಿ ಸಿದ್ಧ ಪಡಿಸಿದರು. ಅದು ' ದಿ ರೆವಿನ್ಯೂ ಮ್ಯಾನ್ಯುಯಲ್ ಆಫ್ ದಿ ಬ್ರಿಟಿಷ್ ಎಂಪೈರ್ ಇನ್ ಇಂಡಿಯ ' ಎಂಬ ಹೆಸರಿನಿಂದ ೧೮೭೭ ನೆಯ ಸಂ|| ದಲ್ಲಿ ಪ್ರಕಟಿಸಲ್ಪಟ್ಟಿತು. ಸರ್ಕಾರದವರು, ರಾನಡೇಯವರನ್ನು ವಿಲಾಯಿತಿಗೆ ಬಂದು ಸಾಕ್ಷ್ಯಕೊಡಬೇಕೆಂದು ಸಹ ಅಪೇಕ್ಷಿಸಿದ್ದರು. ಆದರೆ ಅಷ್ಟರಲ್ಲಿ ಆ ಸಮಿತಿಯೇ ಮುಕ್ತಾಯವಾದುದರಿಂದ ಅವರ ಪ್ರಯಾಣವೂ ನಿಲ್ಲಿಸಲ್ಪಟ್ಟಿತು.

೧೮೭೪ ನೆಯ ಸಂ|| ದಲ್ಲಿ, ರಾನಡೇಯವರು, "ರೆಸ್ಪಾನ್ಸಿಬಲ್ ಸೆಲ್ಫ್ ಗೌರ್‍ನಮೆಂಟ್" ಎಂಬ ಸ್ವರಾಜ್ಯ ಸಂಸ್ಥೆಯ ಬಗ್ಗೆ ತಯಾರಿಸಿದ ಅರ್ಜಿಯೊಂದನ್ನು, ಇಂಗ್ಲೆಂಡಿನ ಪಾರ್ಲಿಮೆಂಟಿಗೂ, ವೈಸರಾಯಿಯೇ ಮೊದಲಾದ ಸರ್ಕಾರಿಯ ಅಧಿಕಾರಿಗಳಿಗೂ, ಪ್ರಸಿದ್ಧ ವಾರ್ತಾಪತ್ರಿಕೆಗಳಿಗೂ ಕಳುಹಿಸಿದರು. ಅದರಲ್ಲಿ ಇಂಗ್ಲೆಂಡಿನಲ್ಲಿರುವ ಪಾರ್ಲಿಮೆಂಟಿನಲ್ಲಿ ಹಿಂದೂಸ್ಥಾನದ ಹಕ್ಕುಬಾಧ್ಯತೆಗಳನ್ನು ಕುರಿತು ಚರ್ಚಿಸಲು, ಹಿಂದೂ ಪ್ರತಿನಿಧಿಗಳೇ ಇರಬೇಕೆಂದೂ, ಅಂತಹ ಪ್ರತಿನಿಧಿಗಳ ಸಂಖ್ಯೆಯು ಹನ್ನೊಂದಕ್ಕೆ ಕಡಮೆಯಿರಕೂ

ಡದೆಂದೂ ಸೂಚಿತವಾಗಿತ್ತು. ಅದಕ್ಕೆ ಜನಮನದ ಬೆಂಬಲವಿದೆಯೆಂಬು ದನ್ನು ತೋರಿಸುವುದಕ್ಕಾಗಿ, ಆ ಅರ್ಜಿಗೆ ಸಹಸ್ರಾರು ಮಂದಿಯ ರುಜುಗ ಳನ್ನು ಹಾಕಿಸಿದ್ದರು. ಅಷ್ಟುಮಾತ್ರದಿಂದಲೇ ಭಾರತೀಯರಿಗೆ ಸ್ವತಂತ್ರ ಆಳ್ವಿಕೆಯ ಸಂಸ್ಥೆಯು ಬ್ರಿಟಿಷ್ ಜನಗಳಿಂದ ಸಿಕ್ಕಿಬಿಡುವುದೆಂದು ನಂಬುವ ಷ್ಟು ಮಂದಬುದ್ಧಿಯು ರಾನಡೆಯವರದಲ್ಲ-ಆದರೆ ಪ್ರಜಾಸಾಮಾನ್ಯದ ರಾಜ ಕೀಯಶಿಕ್ಷಣವು ಸಾಗಲು ಇವೇ ಮಾರ್ಗಗಳೆಂದು ಅವರು ಯೋಚಿಸಿದ್ದರು.

ಈ ವೇಳೆಗೆ ಎಂದರೆ ೧೮೭೫ ರಲ್ಲಿ ಆ ಪ್ರಾಂತ ದೊಡ್ಡದೊಂದು ದಂಗೆ ನಡೆಯಿತು. ಅದರಲ್ಲಿ ಹಳ್ಳಿಗಳಲ್ಲಿ ಲೇವಾದೇವಿ ಉದ್ಯೋಗವನ್ನು ಸಾಗಿಸಿ ಕೊಂಡಿದ್ದ ಸಾಹುಕಾರರನೇಕರು ಬಹು ಕಷ್ಟ ನಷ್ಟಗಳಿಗೆ ಗುರಿಯಾದರು. ಕಳ್ಳತನ ದರೋಡೆ ಅಗ್ನಿಅನಾಹುತ ಮುಂತಾದುವುಗಳಿಂದ ತಮ್ಮ ಸರ್ವಸ್ವ ವನ್ನೂ ನೀಗಿಕೊಂಡವರನೇಕರು! ಈ ದಂಗೆ ದರೋಡೆಗಳಿಗೆಲ್ಲಾ, ಸಾಹುಕಾ ರರು ಬಡ್ಡಿಯ ಆಸೆಯಿಂದ ಬಡಜನಗಳಿಗೆ ಕೊಡುತ್ತಿದ್ದ ತೊಂದರೆ-ತಗಾದೆ ಗಳೇ ಕಾರಣವೆಂದು ಸರ್ಕಾರದವರು ಪ್ರಕಟಿಸಿದರು. ಆದರೆ ರಾನಡೆಯವ ರೂ ಮತ್ತು ಸಾರ್ವಜನಿಕ ಸಭೆಯ ಇತರ ಅನೇಕ ಸಭ್ಯರೂ ಯೋಗ್ಯವಿಚಾರ ನಡೆಸಿ, ಸರ್ಕಾರದವರು ಹಿಂದುಮುಂದಿನ ಯೋಚನೆಯಿಲ್ಲದೆ ಏರಿಸಿದ ಭೂ ಕಂದಾಯದಿಂದ ಕ್ಷುಬ್ಧವಾದ ಜನಮನವೇ ಇದಕ್ಕೆ ಕಾರಣವೆಂದು ಅಭಿ ಪ್ರಾಯಪಟ್ಟರು. ತಮ್ಮ ಈ ಅಭಿಪ್ರಾಯವನ್ನು ಸ್ಪಷ್ಟೋಕ್ತಿಯಿಂದ ಪ್ರ ಕಟಿಸಿಬಿಡಬೇಕೆಂದು ಇತರ ಸಭ್ಯರು ಒಂಟಿಗಾಲಿನಮೇಲೆ ನಿಂತರು. ಆ ಸಂದರ್ಭದಲ್ಲಿ ರಾನಡೆಯವರು, ಹಾಗೆ ಕೂಡದೆಂದೂ, ಅದರಿಂದ ಸಭೆಯನ್ನು ತಳಹದಿಯೊಂದಿಗೆ ನಾಶಗೊಳಿಸಲು ನಾವೇ ಕಾರಣಕರ್ತರಾದಂತೆ ಆಗುವು ದೆಂದೂ ಎಚ್ಚರಿಕೆ ಹೇಳಿ ತಡೆದರು. ಅವರೇನು! ಸರ್ಕಾರಕ್ಕೇನೋ ಸಭಾ ವಿಷಯದಲ್ಲಿ ಸಂಪೂರ್ಣ ಸಂದೇಹವು ಉತ್ಪನ್ನವಾಗಿ ಆದರ ಕಾರ್ಯ ಕರ್ತರುಗಳ ನಿಶ್ಚಯ ಸ್ವರೂಪವನ್ನೂ, ಸಭೆಯ ನಿಶ್ಚಯವಾದ ಸೂತ್ರಧಾರಿ ಕರು ಯಾರೆಂಬುದನ್ನೂ ತಿಳಿದುಕೊಳ್ಳುವುದಕ್ಕಾಗಿ ಅಧಿಕಾರಿಗಳು ಅನೇಕ ಪ್ರ ಯತ್ನಗಳನ್ನು ನಡೆಸಿದರು. ರಾನಡೇಯವರು ಆ ಸೂಕ್ಷ್ಮವನ್ನು ತಿಳಿದು ಬ ಹು ಜಾಗರೂಕತೆಯಿಂದ ವರ್ತಿಸಿ ತಮ್ಮ ಮೇಲೆ ಸಂದೇಹವುಂಟಾಗ ದಂತೆ ಮಾಡಿಕೊಂಡರು.

೧೮೭೭ ರಲ್ಲಿ, ವಿಕ್ಟೋರಿಯಾ ರಾಣಿಯವರು ಭಾರತದೇಶದ ರಾಜ್ಯ ಸೂತ್ರಗಳನ್ನು ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡು, ಭಾರತ ಚಕ್ರವರ್ತಿನಿ ಎಂಬ ಬಿರುದನ್ನು ಧರಿಸಿದರಷ್ಟೆ! ಆ ಸಂಬಂಧದಲ್ಲಿ ಡೆಲ್ಲಿನಗರದಲ್ಲಿ ವಿಶೇಷ ಸಭೆಯೊಂದು ನಡೆಯಿತು. ಪೂನಾ ಪಟ್ಟಣದವರೂ, ಸಾರ್ವಜನಿಕ ಸಭಾಪರ ವಾಗಿ ದೊಡ್ಡದೊಂದು ಸಭೆಯನ್ನು ನಡೆಯಿಸಿ ತಮ್ಮ ರಾಜಭಕ್ತಿಯನ್ನು ಪ್ರಕಟಿಸಿ, ತಮ್ಮ ಸದಾಶಯಗಳನ್ನೂ ಮಹಾರಾಣಿಯವರಿಗೆ ದೀರ್ಘಾಯು ರಾರೋಗ್ಯಗಳನ್ನೂ ಕೋರುವ ಒಂದು ಮನವಿಯನ್ನು ಕಳುಹಿಸಿದರು. ರಾನ ಡೇಯವರು, ಆ ಮನವಿಯಲ್ಲಿ ಒಂದೆರಡು ಹೆಚ್ಚು ಸಂಗತಿಗಳನ್ನೂ ಸೇರಿಸಿ ದ್ದರು. ಮಕುಟಧಾರಣೆ ಮುಂತಾದ ಶುಭಸಂದರ್ಭಗಳಲ್ಲಿ ಪ್ರಜಾಪಾಲಕರು ವಿಶೇಷ ವರದಾನಗಳನ್ನು ಪ್ರಸಾದಿಸತಕ್ಕುದು ಭಾರತದೇಶದ ಸಂಪ್ರದಾಯ ವಾದುದರಿಂದ ಅದರಂತೆಯೇ ಚಕ್ರವರ್ತಿನಿಯವರೂ ನಮಗೆ ರಾಜಕೀಯ ವಿಚಾರದಲ್ಲಿ ಪ್ರಜಾ ಪ್ರಾತಿನಿಧ್ಯವನ್ನು ದಯಪಾಲಿಸಬೇಕೆಂದು ಕೋರಿಕೊಂ ಡಿದ್ದರು.

ಈ ೧೮೭೭ ನೆಯ ಸಂ|| ದಲ್ಲೇ ಭಯಂಕರ 'ಧಾತು ಈಶ್ವರ ಸಂವತ್ಸ ರಗಳ ಕ್ಷಾಮವು' ಪ್ರಾಪ್ತವಾಗಿ ಭಾರತದೇಶವು ಬಹುಮಟ್ಟಿಗೆ ಬಳಲಿ ತಲ್ಲ ಣಿಸಿ ಹೋಯಿತು. ಈ ಸಂದರ್ಭದಲ್ಲಿ ರಾನಡೇಯವರ ಸೂಚನೆ ಸಲಹೆ ಗಳನ್ನನುಸರಿಸಿ ಸಾರ್ವಜನಿಕ ಸಭೆಯು ದೇಶಕ್ಕೆ ಮಹತ್ವದ ಉಪಕಾರಗಳನ್ನು ಮಾಡಿತು. ಪ್ರಜಾ ಸಮೂಹಕ್ಕೆ ಅನ್ನ ನೀರುಗಳನ್ನೊದಗಿಸಿ ಕಾಪಾಡು ವುದರೊಂದಿಗೆ ಈ ಸಭೆಯವರು, ಆಯಾಸ್ಥಳಗಳಲ್ಲಿದ್ದ ನಿಶ್ಚಯ ಸಂಗತಿ ಗಳನ್ನೂ, ಪ್ರಜಾಭಿಪ್ರಾಯಗಳನ್ನೂ ಬರೆದು ಸಭಾ ಕಾರ್ಯದರ್ಶಿಯವರಿಗೆ ಕಳುಹಿಸುತ್ತಿದ್ದರು. ಆ ವರದಿಗಳ ಮೂಲಕ, ಪ್ರಜೆಗಳ ಕ್ಷೇಮ ಸೌಕರ್ಯ ರ್ಯಗಳನ್ನು ಕುರಿತು ಸರ್ಕಾರವು ಎಷ್ಟುಮಟ್ಟಿನ ನಿರ್ಲಕ್ಷ್ಯ ಭಾವವನ್ನು ವಹಿಸಿದ್ದಿತೆಂಬುದು ಸ್ಪಷ್ಟಪಡುತ್ತಿತ್ತು. ಈ ವಿಚಾರಗಳ ಪ್ರಕಟಣೆಯಿಂದ ಸಭೆಯು ಪುನಃ ಸರ್ಕಾರದವರ ಸಂದೇಹಕ್ಕೆ ಪಾತ್ರವಾಗಬೇಕಾಯಿತು. ಆದರೂ, ನಮ್ಮ ಕಥಾನಾಯಕರು ಆ ಮಹಾ ಸಭೆಯ ಸೂತ್ರ ಸಂಚಾಲಕರ ರಾಗಿಪ್ಪವರೆಗೂ ಯಾವ ತೊಂದರೆಯೂ ಸಂಭವಿಸಲಿಲ್ಲ. ಮುಂದೆ ೧೮೯೭ ನೆಯ ಸಂವತ್ಸರದ ವೇಳೆಗೆ, ಸಭಾ ಕಾರ್ಯದರ್ಶಿಯೊಬ್ಬನು ಆಗಿನ ಸರ್ಕಾರದ

ನಡೆವಳಿಕೆಯನ್ನು ಬಹು ತೀಕ್ಷ್ಣವಾಕ್ಯಗಳಿಂದ ಖಂಡಿಸಿದುದರ ಫಲವಾಗಿ ಸರ್ಕಾರವು—'ರಾಜಭಕ್ತಿಯುತರಾದ ಪ್ರಜಾಹೃದಯಗಳನ್ನು ಕ್ಷುಬ್ಧಗೊಳಿಸಿ ತನ್ಮೂಲಕ ಶಾಂತತಾ ರಾಜ್ಯಪಾಲನೆಗೆ ಪ್ರತಿಬಂಧಕವನ್ನುಂಟುಮಾಡುತ್ತಿರುವ ಈ ಸಭೆಗೆ ಪ್ರಜಾಪರವಾದ ಯಾವ ವಿಚಾರದಲ್ಲೂ ಪ್ರಾತಿನಿಧ್ಯವನ್ನು ವಹಿಸಲು ಹಕ್ಕಿರುವುದಿಲ್ಲ'ವೆಂದು ಅಪ್ಪಣೆ ಮಾಡಿಬಿಡಲು ಕಾರಣವಾಯಿತು.

ಸಾರ್ವಜನಿಕ ಸಭಾ ಕಾರ್ಯಕರ್ತರುಗಳು ಲೋಕಕ್ಕೆ ವಿಶದಪಡುವಂತೆ ಮಾಡಲು ಅದಕ್ಕೆ ಒಂದು ಪ್ರಕಟನ ಪತ್ರಿಕೆ ಇರಬೇಕೆಂದು ಕೆಲವುಂದಿ ಹಿತಚಿಂತಕರು ಅಪೇಕ್ಷಿಸಿದಂತೆ, ೧೮೭೮ ನೆಯ ಸಂ|| ದಲ್ಲಿ, 'ಕ್ವಾರ್ಟರ್ಲಿ ಜರ್ನಲ್' ಎಂದರೆ 'ಸಾರ್ವಜನಿಕಸಭಾ ತ್ರೈಮಾಸಿಕ' ಪತ್ರಿಕೆಯು ಪ್ರಾರಂಭವಾಯಿತು. ರಾನಡೇಯವರು ೧೮೯೬ ರ ವರೆಗೂ ಅದಕ್ಕೆ ಮುಖ್ಯಪ್ರಾಣದಾತರಾಗಿದ್ದರೆನ್ನಬಹುದು. ಆ ಕಾಲದಲ್ಲಿ ಪ್ರಕಟವಾದ ಪತ್ರಿಕೆಗಳಲ್ಲಿನ ಶೇಕಡಾ ೭೫ ರಷ್ಟು ಲೇಖನಗಳು ರಾನಡೇಯವರ ಅಮೃತ ಹಸ್ತದಿಂದ ಬರೆಯಲ್ಪಟ್ಟುವೇ ಆಗಿ ರಾಜಕೀಯ, ಸಾಮಾಜಿಕ, ಧಾರ್ಮಿಕ, ವಿದ್ಯಾವಿಷಯಕ ಮುಂತಾದ ವಿಚಾರಗಳಲ್ಲಿ ಆ ಮಹನೀಯರ ದಿವ್ಯಾಭಿಪ್ರಾಯಗಳನ್ನು ವ್ಯಕ್ತಗೊಳಿಸುತ್ತಾ ಪತ್ರಿಕೆಯು ಸರ್ವ ವಿಧದಿಂದಲೂ ಲೋಕ ಸಂಗ್ರಹ ಕಾರ್ಯ ಮಾಡುತ್ತಿತ್ತು.

ಭಾರತದೇಶದಲ್ಲಿ ಹತ್ತಕ್ಕೆ ಒಂಬತ್ತರಂತೆ ಹಳ್ಳಿಗಾಡನ್ನೇ ಆಶ್ರಯಿಸಿರುವ ಜನಸಂಖ್ಯೆಯಲ್ಲಿ ನೆಲೆಸಿರುವ ದುರ್ಧರ ದಾರಿದ್ರ್ಯಕ್ಕೆ ಕಾರಣವೇನೆಂಬುದನ್ನು ಶ್ರೀ ರಾನಡೇಯವರು ಈ ಮೂರು ಕಾರಣಗಳಿಂದ ಸ್ಪಷ್ಟಪಡಿಸಿದರು. ರೈತಜನಗಳ ಮನೆ ಮುಳುಗಿಸುವಂತಹ ಸಾಲ-ಮತ್ತು ಬಡ್ಡಿಯುದರ, ಲಾಭಕರವಾದ ಉದ್ಯೋಗಗಳನ್ನು ಕೈಕೊಳ್ಳಲು ಬಂಡವಾಳವಿಲ್ಲದಿರುವಿಕೆ, ಮೂರನೆಯದು ಮಿತಿಮೀರಿ ಏರಿರುವ ಸರ್ಕಾರದ ಕಂದಾಯ ಕೌಳಿಗೆಗಳು. ಇವುಗಳನ್ನು ತಪ್ಪಿಸಲು ಸರ್ಕಾರದವರು ಬ್ಯಾಂಕುಗಳನ್ನು ಸ್ಥಾಪಿಸಿ ಸುಲಭ ಬಡ್ಡಿಗೆ ಹಣಕೊಡುವಂತೆ ಏರ್ಪಡಿಸಬಹುದೆಂದೂ, ಭೂ ಕಂದಾಯ ಪದ್ಧತಿಯನ್ನು ಬದಲಾಯಿಸಿ ಉತ್ತಮಗೊಳಿಸಬೇಕೆಂದೂ, ಅನೇಕ ತರ್ಕವಿಚಾರಗಳಿಂದ ಸಮರ್ಥಿಸಿ ಬರೆದರು. ನಮ್ಮ ಹಳ್ಳಿಗಾಡಿನವರಿಗೆ ವಿದ್ಯಾಭ್ಯಾಸ

ನಾಗರಿಕತೆ ನೈರ್ಮಲ್ಯ ಆರೋಗ್ಯವಿಚಾರದ ತಿಳಿವಳಿಕೆ, ಮಿತವ್ಯಯ ಮುಂತಾದುವುಗಳ ಗಂಧವೂ ತಿಳಿಯಲವಕಾಶವಿಲ್ಲದೆ ಅವರು ಕೇವಲ ಪಶು ಬಾಳ್ವೆಯಿಂದ ಕಾಲಯಾಪನೆ ಮಾಡುತ್ತಿರುವುದನ್ನು ಕುರಿತು ಆ ದಯಾಹೃದಯರು, ಅವರಿಗೆ ತಾವು ಮನುಷ್ಯರೆಂಬ ಪ್ರಜ್ಞೆ ಹುಟ್ಟುವಷ್ಟರಮಟ್ಟಿಗಾದರೂ ವಿದ್ಯಾದಾನಮಾಡಬೇಕೆಂದು ಅನೇಕವೇಳೆ ಆರ್ತಧ್ವನಿಯನ್ನು ಎತ್ತಿ ಪ್ರತಿಪಾದಿಸಿದ್ದರು.

ಸಭಾತ್ರೈಮಾಸಿಕ ಪತ್ರಿಕೆಗಳಲ್ಲಿ, ಕೇವಲ ಇಂಗ್ಲಿಷರ ಆಳ್ವಿಕೆಯಲ್ಲಿರುವ ಭಾರತದೇಶವಿಚಾರ ಮಾತ್ರವೇ ಅಲ್ಲ. ದೇಶೀಯ ರಾಜರುಗಳ ಸ್ವಾಧೀನದಲ್ಲಿರುವ ಪ್ರಜಾವರ್ಗದ ಕ್ಷೇಮವನ್ನೂ ಗಮನಿಸಿ ನಮ್ಮ ಕಥಾನಾಯಕರು ಅನೇಕ ಲೇಖನಗಳನ್ನು ಬರೆದರು. ಅದರಲ್ಲಿ ದೇಶೀಯ ಪ್ರಭುಗಳು ಪ್ರಜಾ ಸೌಕರ್ಯವನ್ನು ಅನುಲಕ್ಷಿಸಿ ಯಾವ ಯಾವ ಮಾರ್ಗಗಳಿಂದ ರಾಜ್ಯಭಾರ ಮಾಡಬೇಕೆಂಬುದರ ವಿಷಯದಲ್ಲೂ ಅನೇಕ ಸಲಹೆಗಳಿದ್ದುವು.

ರಾನಡೇಯವರು ನಮ್ಮ ರೈತಜನಕ್ಕೆ ಸುಖಸೌಲಭ್ಯಗಳು ಪ್ರಾಪ್ತವಾಗಬೇಕೆಂದು ವಾದಿಸುತ್ತಿದ್ದರೂ, ಈ ದಿನವೇ ಸುವರ್ಣ ವೃಷ್ಟಿಯಾಗಿ, ಅವರು ಇಂದ್ರಭೋಗಗಳನ್ನು ಅನುಭವಿಸುವಂತಾಗಬೇಕೆಂದು ಅಪೇಕ್ಷಿಸುವಂತಹ ಚಿತ್ತವೃತ್ತಿಯವರಾಗಿರಲಿಲ್ಲ. ಆ ಬಡರೈತರಿಗೆ ಹೊಟ್ಟೆತುಂಬ ಅನ್ನ ಮೈಮುಚ್ಚುವಂತೆ ಬಟ್ಟೆ, ಇವುಗಳೊಂದಿಗೆ 'ಪಶುವರ್ಗದಿಂದ ಭಿನ್ನನಾಗಿ ಮನುಷ್ಯನೆನಿಸಿಕೊಂಡ ತನ್ನ ಜನ್ಮೋದ್ದೇಶವೇನು' ಎಂಬಷ್ಟು ಜ್ಞಾನವನ್ನು ಕೊಡಲು ಯೋಗ್ಯವಾದಷ್ಟುಮಟ್ಟಿನ ವಿದ್ಯಾಭ್ಯಾಸ, ಇಷ್ಟು ದೊರೆತರೆ ಸಾಕೆಂದು ತೃಪ್ತಿಗೊಂಡಿದ್ದರು. ಮತ್ತು ಆಜನ್ಮವೂ ತಮ್ಮ ಬಡ ಗ್ರಾಮವಾಸಿಗಳಿಗೆ ಅಷ್ಟು ಮಾತ್ರವಾದರೂ ದೊರೆತೀತೋ ಎಂದು ತಮ್ಮ ಕೈಯಲ್ಲಾದಷ್ಟೂ ಸಾಹಸಪಟ್ಟು ಪ್ರಯತ್ನಮಾಡುತ್ತಿದ್ದರು. ಹೀಗೆ ಎಷ್ಟು ಬಲವಂತನಾದರೂ ಮೇಧಾನಿಧಿಯಾದರೂ ದೇಶಸೇವಕನು ಒಬ್ಬನೇ ಮಾಡುವ ಕೆಲಸಕ್ಕಿಂತಲೂ ಸಂಘಮೂಲಕವಾಗಿ ಹತ್ತರಷ್ಟು-ನೂರರಷ್ಟು ಕೆಲಸ ಮಾಡಲು ಸಾಧ್ಯವೆಂಬುದನ್ನು, ನಮ್ಮ ಕಥಾನಾಯಕರು ಸಾರ್ವಜನಿಕಸಭಾ ಮೂಲಕವಾಗಿ ಪ್ರದರ್ಶಿಸಿದರು.



**ಅಧ್ಯಾಯ ೫　　　　“ ಸುಧಾರಣಾ ಕಾರ್ಯಗಳು ”**

೧೮೭೩ ನೆಯ ಸಂವತ್ಸರದ ಅಕ್ಟೋಬರು ತಿಂಗಳಲ್ಲಿ ರಾನಡೇಯವರ ಪತ್ನಿಯಾದ ಸಖೂಬಾಯಿಯು ಕ್ಷಯರೋಗಕ್ಕೆ ತುತ್ತಾದಳು. ಆಕೆಯು ಅಗಲಿಕೆಯು ಅವರನ್ನು ಅತಿಶಯ ವ್ಯಸನಕ್ಕೆ ಗುರಿಮಾಡಿತು. ಮುಂದೊಂದು ವರ್ಷಕಾಲದಲ್ಲಿ ಆ ತಮ್ಮ ಪ್ರಿಯಪತ್ನಿಗಾಗಿ ಅವರು ಕಣ್ಣೀರು ತಾರದ ದಿನವು ಒಂದಾದರೂ ಇರಲಿಲ್ಲ. ಹಾಗೆ ಅಗಲಿಕೆಯ ದುಃಖವು ಅತಿಶಯವಾದಾಗ ಲೆಲ್ಲ ಅವರು ಶ್ರೀ ತುಕಾರಾಮ ಸಾಧುವಿನ ಅಭಂಗಗಳನ್ನು ಹೇಳಿಕೊಳ್ಳುತ್ತಾ ಅದನ್ನು ಮರೆಯಲೆತ್ನಿಸುವರು.

ಪ್ರಥಮ ಭಾರ್ಯಾವಿಯೋಗವಾಗಿ ಒಂದು ತಿಂಗಳು ಕಳೆಯುವುದ ರೊಳಗಾಗಿ, ಅವರ ತಂದೆ ಗೋವಿಂದರಾಯರ ಬಲವಂತದಿಂದ ಅವರಿಗೆ ದ್ವಿತೀಯ ವಿವಾಹವಾಯಿತು. ರಾನಡೇಯವರು ಸಮಾಜ ಸುಧಾರಣಾಕಾರ್ಯಗಳಾದ ವಿಧವಾವಿವಾಹ, ಬಾಲ್ಯವಿವಾಹಖಂಡನ ಮುಂತಾದುವುಗಳನ್ನು ಅತಿಶಯ ಉತ್ಸಾಹದಿಂದ ಪ್ರತಿಪಾದಿಸುತ್ತಿದ್ದುದರಿಂದ, ವಿಧುರನಾದ ತಮ್ಮ ಮಗನು ಎಲ್ಲಿ ವಿಧವೆಯೊಬ್ಬಳನ್ನು ವಿವಾಹವಾಗಿ ಕುಟುಂಬದ ಪಾವಿತ್ರ್ಯತೆಗೆ ಕುಂದು ತರುವನೋ ಎಂದು ವೃದ್ಧ ಗೋವಿಂದರಾಯರು ಬಹು ಚಿಂತಾಕ್ರಾಂತರಾಗಿದ್ದುದು ಸಹಜವೇ! ಆದುದರಿಂದಲೇ ಪ್ರಥಮ ಭಾರ್ಯಾವಿಯೋಗವಾದ ತರುವಾಯ ಕೇವಲ ಶೀಘ್ರಕಾಲದೊಳಗೇ ಒಂದು ಸ್ಥಳದಲ್ಲಿ ಕನ್ಯೆಯನ್ನು ನೋಡಿ ಲಗ್ನಕ್ಕೆ ಏರ್ಪಡಿಸಿದರು. ರಾನಡೇಯವರಾದರೋ, ಸ್ವತಃ ಸುಧಾರಕರಲ್ಲಿ ಅಗ್ರಗಣ್ಯರಾಗಿದ್ದು ಪ್ರೌಢ ವಿವಾಹವನ್ನು ಸಮರ್ಥಿಸುತ್ತಿದ್ದ ತಾವೇ ಚಿಕ್ಕವಯಸ್ಸಿನ ಹುಡುಗಿಯೊಬ್ಬಳನ್ನು ಮದುವೆಯಾಗಲು ಮನಸ್ಸೊಪ್ಪದೆ, ಆ ಭಾಗದಲ್ಲ ತಮ್ಮನ್ನು ನಿರ್ಬಂಧಿಸದೆ ಇರಬೇಕೆಂದು ಬಹು ಬಗೆಯಿಂದ ಬೇಡಿಕೊಂಡರು.—‘ ಅಪ್ಪಾ ನಾನು ಈಗ ಚಿಕ್ಕಮಗುವಲ್ಲ! ಈ ವಿಷಯದಲ್ಲಾದರೂ ನನ್ನ ಸ್ವತಂತ್ರಾಭಿಪ್ರಾಯಕ್ಕೆ ಅವಕಾಶವಿರಬೇಡವೆ?’ ಎಂದು ಎಷ್ಟೋ ಬಗೆಯಿಂದ ಕೇಳಿಕೊಂಡರು ತಾವು ವಿಧವೆಯನ್ನು ವಿವಾಹವಾಗುವುದಿಲ್ಲವೆಂದು ಬಹು ಬಗೆಯಿಂದ ಭರವಸೆ ಕೊಟ್ಟರು. ಆದರೆ ಏನೂ ಪ್ರಯೋಜನವಾಗಲಿಲ್ಲ. ಕೊನೆಗೆ ‘ ಒಂದು, ಎಂತಾದರೂ ಮದುವೆಗೆ ಒಪ್ಪಿಕೊಳ್ಳಬೇಕು–ಹಾಗಲ್ಲವಿದ್ದರೆ ತಂದೆ ಮಕ್ಕಳು

ಮುಖಭೇಟಿಯಿಲ್ಲದಂತೆ ಆಗಲಬೇಕು' ಎಂಬಷ್ಟು ವಿಷಮಸ್ಥಿತಿಗೆ ಬಂತು. ಆಗ ಅಷ್ಟು ಪ್ರೌಢರಾದ ರಾನಡೇಯವರು ಸಹ ವಿಧಿಯಿಲ್ಲದೆ, ನಿರ್ಬಂಧಕ್ಕೆ ಒಳಪಡಬೇಕಾಯಿತು.—'ಅಕ್ಕಟಾ ಇನ್ನು ನಾನೇನು ಮಾಡಲಿ? ನಾನು ಇಷ್ಟು ಬೇಡಿಕೊಂಡರೂ ನೀವು ಕೇಳುವುದಿಲ್ಲ. ಆಗಲಿ, ನಿಮ್ಮ ಸನ್ನಿಧಿಯಲ್ಲಿ ನಾನೇ ಸೋತು ನಡೆಯುತ್ತೇನೆ'' ಎಂದು ಲಗ್ನಕ್ಕೆ ಒಪ್ಪಿದರು. ಆದರೂ ಗೋವಿಂದರಾಯರಿಗೆ ಮನಸ್ಸಿನಲ್ಲಿ ಭಯವಿದ್ದೇ ಇತ್ತು. ಜೊಂಬಾಯಿ ಯಿಂದ ಯಾವವೇಳೆ ಯಾವಗೆಳೆಯನು ಏನೆಂದು ಪತ್ರ ಬರೆಯುವನೋ, ಏನೆಂದು ತಂತಿಯ ಮೂಲಕ ಪ್ರೇರಿಸುವನೋ, ಮಗನ ಮನಸ್ಸು ಎಲ್ಲಿ ಚಂಚ ಲಗೊಳ್ಳುವುದೋ ಎಂದು ಬಹು ಜಾಗರೂಕತೆಯಿಂದ ನೋಡಿಕೊಳ್ಳುತ್ತಾ, ಆಗ ಕೆಲದಿನಗಳು ಅವರ ಸ್ನೇಹಿತರಿಂದ ಬಂದ ತಂತೀವಾರ್ತೆಗಳು – ಪತ್ರಗ ಳು ಮುಂತಾದುವು ಅವರಿಗೆ ತಪ್ಪಿದಂತೆಯೇ ಮಾಡಿದ್ದರಂತೆ! ಮುಂದೆ ಒಂದುದಿನ ಯಾವಬಗೆಯ ಆಡಂಬರವೂ ಇಲ್ಲದೆ, ಲಗ್ನಕ್ಕೆ ಏರ್ಪಾಡಾಯಿತು. ಆ ದಿನವೂ ರಾನಡೇಯವರು ಎಂದಿನಂತೆಯೇ ಕೋರ್ಟಿಗೆ ಹೋಗಿ ಬಂದರು. ಸಾಯಂಕಾಲ ವಧೂವರರನ್ನು ವೇದಿಕೆಯಮೇಲೆ ಕೂರಿಸಿ ವಿಧ್ಯುಕ್ತವಾದ ವಿವಾಹ ಕಾರ್ಯವನ್ನು ಅತಿಸೂಕ್ಷ್ಮರೀತಿಯಿಂದ ಆಯಿತೆನ್ನಿಸಿಬಿಟ್ಟರು.

ತಮ್ಮ ಮಗನಿಗೆ ಎಂತೂ ಪೂರ್ವಿಕ ಪದ್ಧತಿಯನ್ನು ಮೀರದೆ ವಿವಾಹ ಮಾಡಿದೆನೆಂದು ಅವರ ತಂದೆಗೆ ಸಮಾಧಾನವೆನ್ನಿಸಿರಬಹುದಾದರೂ, ವಿವಾಹ ಸಂಬಂಧದಲ್ಲಿ ನಡೆದ ಕೆಲಸವೆಲ್ಲಾ ರಾನಡೇಯವರಿಗೆ ಅತಿಶಯ ವ್ಯಸನಕರವೂ ಅಸಮಾಧಾನಕರವೂ ಆಗಿದ್ದಿತು. ಆದರೂ ಉಪಾಯವಿಲ್ಲದೆ, ಎಲ್ಲವನ್ನೂ ಸಹಿಸಿಕೊಂಡು, ಅವರು, ಹನ್ನೊಂದು ವರ್ಷ ವಯಸ್ಕಳಾಗಿದ್ದ ತಮ್ಮ ಪತ್ನಿ ಸೌ|| ರಮಾಬಾಯಿಗೆ, ವಿವಾಹವಾದದಿನದಿಂದಲೇ ಹಲಗೆ ಬಳಪಗಳನ್ನು ತಂದು ಕೊಟ್ಟು ತಾವೇ ಸ್ವತಃ ಅಕ್ಷರಾಭ್ಯಾಸಮಾಡಿಸಿ, ವಿದ್ಯೆ ಕಲಿಸಲು ಪ್ರಾರಂಭಿಸಿದರು. ಪ್ರತಿದಿನವೂ ಕೋರ್ಟಿನಿಂದ ಬಂದ ತರುವಾಯ ಒಂದು ಗಂಟೆಯ ಹೊತ್ತು ಪಾಠಹೇಳುತ್ತಾ, ಸ್ವಲ್ಪ ಕಾಲದೊಳಗಾಗಿಯೇ ಆಕೆಗೆ ಸಾಧಾರಣಮಟ್ಟಿಗೆ ಓದುಬರಹಗಳನ್ನು ಕಲಿಸಿದರು. ಮುಂದೂ ವಿದ್ಯಾ ವ್ಯಾಸಂಗವು ಅವ್ಯಾಹತವಾಗಿಸಾಗಿತು. ತಮ್ಮ ಪತ್ನಿಯ ವಿದ್ಯಾಭ್ಯಾಸ ವಿಚಾರದಲ್ಲಿ ಅವರಿಗಿದ್ದ ಉತ್ಸಾಹ—ಆದರಗಳು ಅತಿಶಯವಾಗಿದ್ದುವು.

ಹೀಗಾಗಿ ಸಿದ್ಧಳಾದ ಆ ಸಾಧ್ವೀಮಣಿಯ ವಿದ್ಯಾಭ್ಯಾಸವು, ಆಕೆಯ ಜನ್ಮ ಸಾರ್ಥಕ್ಯಕ್ಕೆ ಕಾರಣವಾದುದು ಹೆಚ್ಚಲ್ಲವಷ್ಟೆ! ಅದರೊಂದಿಗೆ ಆಕೆಯು ಕಲಾಪ್ರೌಢರೂ, ಸುಸಂಸ್ಕೃತರೂ ಆದ ರಾನಡೇಯವರಿಗೆ ಎಷ್ಟೋ ಬಗೆಯಲ್ಲಿ ಉತ್ತಮ ಸಹಾಯಕಳೂ ಆಗಿದ್ದಳು. ಮಾತ್ರವಲ್ಲ—ಭಾರತದೇಶದಲ್ಲಿ ಸ್ತ್ರೀಯರ ಅಭಿವೃದ್ಧಿ ವಿಷಯದಲ್ಲಿ ನಡೆದ ಪ್ರಯತ್ನಗಳಲ್ಲಿ ಆಕೆಯ ಸಂಬಂಧವು ವಿಶೇಷವಾಗಿರಲು ಅವಕಾಶವಾಯಿತು. ಪೂನಾಪಟ್ಟಣದಲ್ಲಿನ 'ಸೇವಾಸದನ'ವು ಆಕೆಯ ಪರಿಶ್ರಮದಿಂದಲೇ ಸ್ಥಾಪಿತವಾದುದು. ಇಂತು ವಿದ್ಯಾಭ್ಯಾಸವು ಉತ್ತಮರೀತಿಯಿಂದ ನಡೆದರೆ-ಸ್ತ್ರೀಯರಿಗಾಗಲಿ, ಪುರುಷರಿಗಾಗಲೀ-ಅದರಿಂದ ಉತ್ತಮೋತ್ತಮ ಕಾರ್ಯಸಾಧನೆ ಮಾಡಬಹುದೆಂಬುದನ್ನು ಶ್ರೀ ರಾನಡೇಯವರು ತಮ್ಮ ಕುಟುಂಬದ ಸುಧಾರಣೆಯಿಂದಲೇ ಪ್ರಪಂಚಕ್ಕೆ ಪ್ರದರ್ಶಿಸಿದರು.

ಪೂನಾಪಟ್ಟಣಕ್ಕೆ ಬಂದಮೇಲೆ, ರಾನಡೇಯವರು, ಪ್ರಾರ್ಥನಾ ಸಮಾಜಕ್ಕೆ ಸಭ್ಯರಾಗಿ ಸೇರಿ ಅದರ ಕಾರ್ಯ ಕಲಾಪಗಳಲ್ಲಿ ಹೆಚ್ಚು ಭಾಗ ತೆಗೆದುಕೊಳ್ಳತೊಡಗಿದರು. ಆ ಕಾಲದಲ್ಲೇ ಎಂದರೆ ೧೮೭೫ ನೆಯ ಸಂ|| ದಲ್ಲಿ ಪೂನಾಪಟ್ಟಣಕ್ಕೆ ಆರ್ಯಸಮಾಜ ಸ್ಥಾಪಕರಾದ ಶ್ರೀ ದಯಾನಂದ ಸರಸ್ವತಿಗಳು ಆಗಮಿಸಿ, ಹದಿನೈದು ಉಪನ್ಯಾಸಗಳನ್ನು ಕೊಟ್ಟರು. ಆರ್ಯಸಮಾಜ ಪ್ರವರ್ತಕರು ವೇದಗಳು ಅಪೌರುಷೇಯವೆಂದು ಪ್ರತಿಪಾದಿಸುತ್ತಿರಲು, ಪ್ರಾರ್ಥನಾ ಸಮಾಜದವರು ಅದನ್ನು ಒಪ್ಪುತ್ತಿರಲಿಲ್ಲ; ಅಲ್ಲದೆ ಅವರವರಲ್ಲಿ ಇತರ ಅನೇಕ ಭಾವನಾ ವ್ಯತ್ಯಾಸಗಳೂ ಇದ್ದುವು. ಆದರೂ ರಾನಡೇಯವರು ದಯಾನಂದರ ಪ್ರತಿಯೊಂದು ಉಪನ್ಯಾಸವನ್ನೂ ಶ್ರದ್ಧೆಯಿಂದಲೂ ಸಾವಧಾನದಿಂದಲೂ ಕೇಳಿ, ಅತ್ಯುತ್ಸಾಹದಿಂದ ಅವರ ಸುಧಾರಣಾ ಕಾರ್ಯಗಳೊಂದಿಗೆ ಸಹಾನುಭೂತಿಯನ್ನು ತೋರಿಸುತ್ತಲೂ ಇದ್ದರು. ದಯಾನಂದರ ಅಭಿಪ್ರಾಯಗಳನ್ನು ಮೆಚ್ಚದೆ, ಅವರನ್ನು ಅವಮಾನಪಡಿಸಲೂ, ಅವರ ಉಪನ್ಯಾಸಗಳ ಶಾಂತತೆಗೆ ಪ್ರತಿಬಂಧಕವನ್ನುಂಟುಮಾಡಲೂ ಸಿದ್ಧರಾದ ಜನಗಳಿಗೆ ಆ ಪಟ್ಟಣದಲ್ಲಿ ಕಡಮೆಯಿರಲಿಲ್ಲವಾದರೂ, ರಾನಡೇಯವರು, ಕೊನೆಯವರೆಗೂ ಧೈರ್ಯವಾಗಿ ನಿಂತು, ಮಹದುತ್ಸವದಿಂದ ಸ್ವಾಮಿಯವರನ್ನು ಆದರಿಸಿ ಅಲ್ಲಿಂದ ಕಳುಹಿಸಿದರು.

ಸಮಾಜ ಸುಧಾರಣಾದೃಷ್ಟಿಯಿಂದ ಅವರು ಮಾಡುತ್ತಿದ್ದ ಕಾರ್ಯ ಗಳಿಂದ, ಸಹವಾಸಿಗಳಾದ ದೇಶೀಯರಲ್ಲಂತಿರಲಿ-ಮನೆಯಲ್ಲಿದ್ದ ತಂದೆ ಮೊದಲಾದ ಆತ್ಮೀಯರಲ್ಲಿ ಹುಟ್ಟಿದ ಅಸಹನೆ ಅವಿಶ್ವಾಸಗಳನ್ನು ಸಹಿಸು ವುದೂ ಅವರಿಗೆ ಕೆಲ ಕೆಲವು ವೇಳೆ ಅತಿಶಯ ಕಷ್ಟವೆನ್ನಿಸುತ್ತಿತ್ತು. ಒಂದಾ ನೊಂದು ಸಾರಿ, ಆಗಿನ ಸಮಾಜ ಸುಧಾರಕರಲ್ಲಿ ಧುರೀಣನೆನಿಸಿದ್ದ ವಿಷ್ಣು ಶಾಸ್ತ್ರಿಪಂಡಿತನನ್ನು ಮನೆಗೆ ಕರೆದು ಸತ್ಕರಿಸಿದ್ದಕ್ಕಾಗಿ, ರಾನಡೇಯವರ ತಂದೆಯು ತಕ್ಷಣ ಮನೆಬಿಟ್ಟು ಊಟಸಹಮಾಡದೆ ಹೊರಟುಬಿಡಲು ಸಿದ್ಧ ರಾಗಿ ನಿಂತರಂತೆ! ಆಗ ರಾನಡೇಯವರು ಎಷ್ಟೋಬಗೆಯಿಂದ ಸಮಾಧಾನ ಹೇಳಿದರೂ ಏನೂ ಪ್ರಯೋಜನವಾಗಲಿಲ್ಲ. ಕೊನೆಗೆ ಬೇಸತ್ತು, ಅವರು 'ಹೀಗೆ ಮುಷ್ಕರ ಹಿಡಿದು ನೀವು ಮನೆಬಿಟ್ಟು ಹೊರಡುವಿರಾದರೆ, ನಾನೂ ಕೆಲಸಕ್ಕೆ ರಾಜೀನಾಮೆಕೊಟ್ಟು, ನಿಮ್ಮೊಂದಿಗೆ ಹೊರಡುತ್ತೇನೆ' ಎಂದು ನುಡಿದನಂತರ ಸಮಾಧಾನ ಸ್ಥಿತಿಗೆ ಬಂದು ಗೋವಿಂದರಾಯರು ಮನೆ ಯಲ್ಲಿ ನಿಂತರಂತೆ !

ಧಾರ್ಮಿಕ ಸುಧಾರಣಾಕಾರ್ಯಗಳು ಇಂತಹ ಅನೇಕ ಕಷ್ಟ ನಿಷ್ಠುರ ಗಳೊಂದಿಗೆ ನಿಧಾನವಾಗಿ ಜರಗುತ್ತಿದ್ದುವು. ಪೂನಾದಲ್ಲಿ ರಾನಡೇಯವರು ಪ್ರಜೋಪಕಾರ ನಿರತರಾಗಿ ಕೆಲಕಾಲ ವಾಸಿಸಿದರಾದರೂ ೧೮೭೯ ನೆಯ ಮೇ ತಿಂಗಳಲ್ಲಿ ಅಲ್ಲಿ ನಡೆದ ಫಾಡ್ಕೇದಂಗೆಯ ಸಂಬಂಧದಲ್ಲಿ ಸರ್ಕಾರದವರಿಗೆ ಅವ ರಮೇಲೆ ಸಂಶಯತೋರಿ, ಅವರನ್ನು ಅಲ್ಲಿಂದ ಧೂಲಿಯಾ ಎಂಬ ಒಂದು ಮೂಲೆಯ ಸ್ಥಳಕ್ಕೆ ವರ್ಗಾಯಿಸಿದರು. ಆದರೆ ಫಾಡ್ಕೆಯನ್ನು ಹಿಡಿದು ವಿಚಾರ ನಡೆಸಿ ಶಿಕ್ಷಿಸಿದನಂತರ ರಾನಡೇಯವರ ಮೇಲೆ ಲೇಶಾಂಶವೂ ಸಂಶ ಯ ಉಳಿಯಲಿಲ್ಲವಾದುದರಿಂದ, ಅವರನ್ನು ೧೮೮೧ ರಲ್ಲಿ ಮುಂಬಯಿಗೆ ಪ್ರೆಸಿಡೆನ್ಸಿ ಮ್ಯಾಜಿಸ್ಟ್ರೇಟರಾಗಿ ವರ್ಗಮಾಡಿದರು. ಈ ವರೆಗೆ ರಾನಡೇ ಯವರು ಸಿವಿಲ್ ಜಡ್ಜರೆಂದು ಮಾತ್ರ ಪ್ರಖ್ಯಾತರಾಗಿದ್ದುದರಿಂದ, ಅವರು ಕ್ರಿಮಿನಲ್ ಮೊಕದ್ದಮೆಗಳನ್ನು ಹೇಗೆ ನಡೆಸುವರೋ ಎಂಬ ವಿಷಯದಲ್ಲಿ ಎಲ್ಲ ರಿಗೂ ಸಂದೇಹವಿತ್ತು. ಆದರೆ, ಅವರು ಕೆಲವು ಮೊಕದ್ದಮೆಗಳನ್ನು ವಿಚಾರ ಮಾಡಿ ಕೊಟ್ಟ ತೀರ್ಪುಗಳನ್ನು ಕಂಡು ಅವರ ಸರ್ವತೋಮುಖವಾದ ಪ್ರತಿ ಭೆಗಾಗಿ ಸರ್ವರೂ ಪರಮಾಶ್ಚರ್ಯಪಟ್ಟುಹೋದರು.

ಮುಂದೆ ರಾನಡೇಯವರು ಡಕ್ಕನ್ ಅಗ್ರಿಕಲ್ಚರಿಸ್ಟ್ಸ್ ಆಕ್ಟ್ ಎಂಬ ದಕ್ಷಿಣ ಭಾರತೀಯ ಕೃಷಿಕರ ಸಂಬಂಧವಾಗಿ ಏರ್ಪಟ್ಟ ಒಂದು ಸಮಿತಿಯಲ್ಲಿ ಕೆಲಸಮಾಡಲು, ಒಬ್ಬ ಆಂಗ್ಲೇಯ ಅಧಿಕಾರಿಗೆ ಸಹಾಯಕರಾಗಿ ನಿಯಮಿತರಾದರು. ಆ ಮಹಾಶಯರು, ಆ ಉದ್ಯೋಗದಲ್ಲಿದ್ದಷ್ಟು ದಿನವೂ ಸ್ವಲ್ಪವೂ ಬೇಸರವಿಲ್ಲದೆ, ಒಂದೊಂದು ತಾಲ್ಲೂಕು,-ಒಂದೊಂದು ಗ್ರಾಮವನ್ನೂ ಸಂಚರಿಸಿ, ರೈತರ ಕಷ್ಟತಾಪತ್ರಯಗಳನ್ನು ಪ್ರತ್ಯಕ್ಷ ಕಂಡು ವಿಚಾರಿಸಿ, ಅವುಗಳ ನಿವಾರಣೆಗಾಗಿ, ಅನೇಕ ಸದುಪಾಯಗಳನ್ನು ಸರ್ಕಾರಕ್ಕೆ ಸೂಚಿಸಿ ಕೀರ್ತಿವಂತರಾದರು. ಇದಾದ ಕೆಲವು ದಿನಗಳೊಳಗಾಗಿ ಎಂದರೆ ೧೮೮೫ ನೆಯ ಸಂ|| ದಲ್ಲಿ ಬೊಂಬಾಯಿಯ ಗೌರ್ನರು ಅವರನ್ನು ನ್ಯಾಯ ವಿಧಾಯಕ ಸಭೆಯ-'ಲಾ ಮೆಂಬರ್' ಎಂಬ ಗೌರವ ಪದವಿಗೆ ನಿಯಮಿಸಿದರು. ೧೮೯೩ ರ ವರೆಗೂ, ಅವರು ಆ ಉದ್ಯೋಗದಲ್ಲೇ ಇದ್ದು ಮುಂದೆ ಕೆ. ಟಿ ಟೆಲಾಂಗ್ ಎಂಬ ಹಿಂದೂ ದೊಡ್ಡಮನುಷ್ಯರು ಮೃತರಾದುದರಿಂದ ಖಾಲಿಯಾದ ಹೈಕೋರ್ಟು ನ್ಯಾಯಾಧಿಪತಿಯ ಸ್ಥಾನಕ್ಕೆ ಏರಿಸಲ್ಪಟ್ಟರು. ಆ ಮಹೋನ್ನತಾಧಿಕಾರವನ್ನು ಸಂಪಾದಿಸಿದ ರಾನಡೇಯವರಿಗೆ ಗೌರವಾರ್ಥವಾಗಿ ಆ ಕಾಲದಲ್ಲಿ ಪೂನಾ ಮತ್ತು ಬೊಂಬಾಯಿ ಪಟ್ಟಣಗಳಲ್ಲಿ ನಡೆದ ಉತ್ಸವಾದಿಗಳಿಗೆ ಮಿತಿಯಿರಲಿಲ್ಲ. ಅವರು ದೇಶಕ್ಕೆ ಮಾಡುತ್ತಿದ್ದ ಅಮೌಲ್ಯ ಸೇವಾ ಕಾರ್ಯವನ್ನು ಮೆಚ್ಚಿ ಸಾರ್ವಭೌಮ ಸರ್ಕಾರದವರು ಅವರಿಗೆ ಈವರೆಗೇ ಸಿ. ಐ. ಇ. ಎಂಬ ಘನತರವಾದ ಬಿರುದನ್ನು ಪ್ರಸಾದಿಸಿ ಗೌರವಿಸಿದ್ದರು. ಪೂನಾನಗರದ ಅನೇಕ ಸಂಘಗಳವರು, ಭಜನೆಗಳಿಂದಲೂ ತಾಳಮೇಳಗಳಿಂದಲೂ, ಗಂಧಪುಷ್ಪ ಹಾರಾ ತುರಾಯಿಗಳಿಂದಲೂ, ಅವರನ್ನು ಅನೇಕ ಬಗೆಯಲ್ಲಿ ಸತ್ಕರಿಸಿ ಬೀಳ್ಕೊಟ್ಟರು. ಅವರಮನೆಯಲ್ಲಿ ವಿದ್ಯಾಭ್ಯಾಸ ಮುಂತಾದ ಕಾರಣಗಳಿಗಾಗಿ ಉಪಜೀವಿಸುತ್ತಿದ್ದ ಅನೇಕಮಂದಿ ಅನಾಥ ಬಾಲಕರೂ, ಬಡಬ್ರಾಹ್ಮಣರೂ, ಇತರ ಅನೇಕಮಂದಿ ಊಳಿಗದವರೂ ತಂದೆ ತಾಯಿಗಳನ್ನಗಲುವ ಮಕ್ಕಳಂತೆ ಆ ದಂಪತಿಗಳನ್ನು ಅಗಲಲಾರದೆ ಕಣ್ಣೀರಿಟ್ಟರು. ಉದಾರ ಸ್ವಭಾವದ ರಾನಡೇಯವರಿಗೆ ತಮ್ಮ ಸಮಸ್ತ ಅಭಿವೃದ್ಧಿ ಕಾರ್ಯಗಳಿಗೂ ಮುಖ್ಯ ಕಾರ್ಯಸ್ಥಾನವೆನಿಸಿದ್ದ ಪೂನಾಪಟ್ಟಣದಮೇಲೆ ಅತ್ಯಧಿಕ ಅಭಿಮಾನವಿದ್ದುದರಿಂದ, ಆ ಪಟ್ಟಣದ ಅನೇಕ ಸಂಸ್ಥೆಗಳ ಅಭಿವೃದ್ಧಿ

ಗೆಂದು ಪಂಚರ ಒಂದು ಸಮಿತಿಯನ್ನು ನಿರ್ಮಿಸಿ ಅದರ ಸ್ವಾಧೀನಕ್ಕೆ ಇಪ್ಪತ್ತೈದು ಸಹಸ್ರ ದ್ರವ್ಯವನ್ನು ಧರ್ಮಾರ್ಥವಾಗಿ ಕೊಟ್ಟರು. ಅನೇಕಮಂದಿ ವಿದ್ಯಾರ್ಥಿಗಳಿಗೂ ಬಡಜನಗಳಿಗೂ ಅನ್ನವಸ್ತ್ರಗಳನ್ನಿತ್ತು ಅವರ ಚಿರಕೃತಜ್ಞತೆಗೆ ಪಾತ್ರರಾಗಿದ್ದ ಅವರ ಅಗಲಿಕೆಗಾಗಿ ಪೂನಾಪಟ್ಟಣವೇ ಕಳವಳಗೊಂಡಿರುತ್ತಿರಲು, ತಮ್ಮ ನೂತನೋದ್ಯೋಗದ ಸ್ವೀಕಾರಕ್ಕಾಗಿ ಮುಂಬಯಿಗೆ ಪ್ರಯಾಣ ಮಾಡಿದರು.

ಮುಂಬಯಿ ನಗರದಲ್ಲಿ, ಹೈಕೋರ್ಟಿನ ನ್ಯಾಯಾಧಿಪತಿಯಾಗಿ, ಅವರು ಮಾಡಿದ ಕೆಲಸದಿಂದ ಅವರ ಕೀರ್ತಿಯು ಒಂದು ಭಾಗದಲ್ಲಿ ಹಬ್ಬಿ ಹರಡಲು ಹೇಗೆ ಅವಕಾಶವಾಯಿತೋ ಹಾಗೆಯೇ, ಬಾಲ್ಯ ವಿವಾಹ ಖಂಡನೆ, ಪ್ರೌಢ ವಿವಾಹ, ವಿಧವಾ ವಿವಾಹ, ಸ್ತ್ರೀವಿದ್ಯಾಭ್ಯಾಸ, ಮುಂತಾದ ಇತರ ಅನೇಕ ಸಾಮಾಜಿಕ ದುರಾಚಾರಗಳ ನಿರ್ಮೂಲನಕ್ಕಾಗಿ ಅವರು ಮಾಡಿದ ಪರಿಶ್ರಮಗಳಿಗಾಗಿಯೂ ಅವರು ಮಹದ್ಯಶವನ್ನು ಹೊಂದಿದರು. ಈ ಕಾರ್ಯಗಳಲ್ಲೆಲ್ಲಾ, ಆ ನಗರದಲ್ಲಿ ಅವರಿಗೆ ಬೈರಾಂಜೀಮಲಬಾರಿ ಎಂಬೊಬ್ಬ ಸುಧಾರಕ ಶ್ರೇಷ್ಠ ವ್ಯಕ್ತಿಯ ಸಹಾಯ ಸಹಾನುಭೂತಿಗಳು ಹೆಚ್ಚು ಮಟ್ಟಿಗೆ ದೊರೆತು ಕಾರ್ಯವು ಸುಗಮವಾಗಿ ನಡೆಯಲು ಅವಕಾಶವಾಯಿತು. ಮಲಬಾರಿಯವರೂ ರಾನಡೇಯವರೂ ಒಂದಾಗಿ ಸರ್ಕಾರದ ಒಂದು ಮನವಿಗೆ ಪ್ರತ್ಯುತ್ತರ ಬರೆಯುವುದರಲ್ಲಿ ಹಿಂದೂ ಸಮಾಜದಲ್ಲಿ ಬಹುಕಾಲದಿಂದಲೂ ಆಚರಣೆಯಲ್ಲಿರುವ ಈ ದುಷ್ಟಪದ್ಧತಿಗಳು ನಿರ್ಮೂಲವಾಗಬೇಕಾದರೆ, ಸರ್ಕಾರದವರು ಪ್ರವೇಶಿಸಿ ನ್ಯಾಯ ಚಟ್ಟಗಳನ್ನು ನಿರ್ಮಿಸದಿದ್ದರೆ ತೀರದೆಂದು ಅಭಿಪ್ರಾಯಕೊಟ್ಟರು. ''ವಧೂವರರ ವಯಸ್ಸುಗಳು ಕ್ರಮವಾಗಿ ೧೮ ಮತ್ತು ೧೨ಕ್ಕೆ ಕಡಮೆಯಿರಕೂಡದು. ವಿಶ್ವವಿದ್ಯಾನಿಲಯದವರು ಗೊತ್ತಾದ ಒಂದು ವಯಸ್ಸನ್ನು ನಿಯಮಪಡಿಸಿ, ಅಷ್ಟುವಯಸ್ಸಿನವರೆಗೆ ವಿವಾಹವಾಗದೆ ಇರುವವರಿಗೆ ಮಾತ್ರವೇ ಬಿ.ಎ., ಎಂ.ಎ., ಮುಂತಾದ ಉಪಾಧಿಗಳನ್ನು ಕೊಡತಕ್ಕದೆಂದು ಏರ್ಪಡಿಸಬೇಕು. ಹದಿನಾಲ್ಕುವರ್ಷ ವಯಸ್ಸಿಗೆ ಕೀಳ್ಪಟ್ಟ ಕನ್ಯೆಯೊಂದಿಗೆ, ಪತಿಯಿಂದಲೇ ನಡೆವ ನಿಷೇಕವನ್ನು ಸಹ ಅಕ್ರಮ ಸ್ತ್ರೀಸಂಗವೆಂದು ತೀರ್ಮಾನಿಸುವಂತೆ ನ್ಯಾಯ ಚಟ್ಟ (ಇಂಡಿಯನ್ ಪೀನಲ್ ಕೋಡ್) ವನ್ನು ತಿದ್ದಿಸಬೇಕು. ೪೫ ವರ್ಷ ವಯಸ್ಸಿಗೆ ಮೀರಿದ ಪುರು

ಷರು, ಚಿಕ್ಕವಯಸ್ಸಿನ ಕನ್ಯೆಯರನ್ನು ವಿವಾಹವಾಗಲು ಅವಕಾಶವಿರದಂತೆ ನಿಬಂಧನೆಮಾಡಬೇಕು. ಮತ್ತು ಪ್ರಥಮ ಭಾರ್ಯೆಗೆ ಶಾಸ್ತ್ರಗಳಲ್ಲಿ ಹೇಳಲ್ಪಡುವ ಬಂಜೆತನ, ದೀರ್ಘರೋಗ ಮುಂತಾದ ಕಾರಣಗಳಿದ್ದ ವಿನಹ ಆಕೆಯ ಜೀವಿತ ಕಾಲದಲ್ಲೇ ಪತಿಯು ಮತ್ತೊಬ್ಬ ಸ್ತ್ರೀಯನ್ನು ವರಿಸಿ ವಿವಾಹವಾಗಕೂಡದೆಂಬುದಕ್ಕೆ ನಿಬಂಧನೆಯಾಗಬೇಕು" ಎಂಬ ಮುಂತಾದ ಸಲಹೆಗಳನ್ನು ಕೊಟ್ಟರು.

ಸಾಮಾಜಿಕ ಸುಧಾರಣಾ ಕಾರ್ಯಗಳಲ್ಲೆಲ್ಲಾ ಸ್ತ್ರೀ ವಿದ್ಯಾಭ್ಯಾಸ ಪ್ರೌಢವಿವಾಹ ಮುಂತಾದ ಇತರ ಎಲ್ಲಾ ವಿಚಾರಗಳೂ ಅಂತಿರಲಿ! ಎಲ್ಲರಿಗೂ ತಲೆನೋವನ್ನುಂಟುಮಾಡುವ ವಿಚಾರವೆಂದರೆ, ವಿಧವಾ ಪುನರ್ವಿವಾಹವೆಂಬುದೊಂದು! ಇದಕ್ಕೆ ಆಗಮಾತ್ರವಲ್ಲ, ಈಗಲೂ ಸಮ್ಮತಿಸದಿರುವವರು ಸುಸಂಸ್ಕೃತರಲ್ಲೇ ನೂರಕ್ಕೆ ತೊಂಬತ್ತೊಂಬತ್ತರಷ್ಟಿದ್ದಾರೆ. ವಿಧವಾ ವಿವಾಹವನ್ನು ಸಾಮಾನ್ಯ ವಿವಾಹದಂತೆಯೇ ಸರ್ವ ಸಾಮಾನ್ಯವಾಗಿ ಸಾರ್ವತ್ರಿಕವಾಗಿ ಆಚರಣೆಗೆ ತರುವುದು ಸಾಧುವೇ, ಎಂದು ವಿಚಾರಿಸುವುದಕ್ಕೆ ಮುಂಚಿತವಾಗಿ ಒಂದೆರಡು ವಿಚಾರಗಳನ್ನು, ಕಾರ್ಯ ಕಾರಣಗಳೊಂದಿಗೆ ಮಹಾಜನಗಳ ದೃಷ್ಟಿಗೆ ತರಲು ಅಪೇಕ್ಷಿಸುತ್ತೇವೆ. ಅದನ್ನು ನಿಷ್ಪಕ್ಷಪಾತ ದೃಷ್ಟಿಯಿಂದ ನೋಡಿ ವಿಚಾರ ಮಾಡಬೇಕೆಂದೂ ಪ್ರಾರ್ಥಿಸುತ್ತೇವೆ.

ಸಾಮಾಜಿಕ ನೀತಿಯು ಪ್ರಕೃತಿ ಧರ್ಮದಂತೆ ಸರ್ವಕಾಲ ಸರ್ವಾವಸ್ಥೆಗಳಿಗೂ ಒಂದೇರೀತಿಯಾಗಿ ಇರಲಾರದೆಂಬುದು ಸರ್ವರಿಗೂ ತಿಳಿದ ವಿಷಯವಷ್ಟೆ! ದಿನದಿನಕ್ಕೆ ಸಮಾಜದ ಸ್ಥಿತಿಗತಿಗಳು ಬದಲಾದಂತೆಲ್ಲ, ಅದೂ ಬದಲಾಗತಕ್ಕುದು ಅವಶ್ಯಕವಿದೆ. ಹಾಗೆ ಬದಲಾಗದಿದ್ದರೆ ಅದರ ಅಸ್ತಿತ್ವವೇ ನಾಶವಾಗುವುದೆಂಬುದು ಹೇಳದೆಯೇ ಗ್ರಹಿಸಬೇಕಾದ ವಿಚಾರ. ಪೂರ್ವಕಾಲ ಎಂದರೆ ಶಾಸ್ತ್ರಾದಿಗಳು ರಚಿತವಾದ ನಾಲ್ಕಾರು ಸಹಸ್ರವರ್ಷಗಳ ಹಿಂದಿನ ಕಾಲಕ್ಕಿಂತಲೂ ಈಗ ಪ್ರಜಾಸಂಖ್ಯೆಯು ಒಂದಕ್ಕೆ ನಾಲ್ಕಾರರಷ್ಟು ಅಭಿವೃದ್ಧಿಯಾಗಿರುವುದೆಂದರೂ ಸಲ್ಲುವುದು. ಜನನದಂತೆಯೇ ಮರಣಸಂಖ್ಯೆಯೂ ಸ್ವಾಭಾವಿಕವಾಗಿಯೇ ಹೆಚ್ಚುವುದಷ್ಟೆ! ಇದರಿಂದ ಅನೇಕ ಮಂದಿ ಸ್ತ್ರೀಯರು ವಿಧವೆಯರಾಗಿ ನಿಲ್ಲುವುದು ಅನಿವಾರ್ಯವು! ಕಾಲಧರ್ಮವನ್ನು ಅನುಸರಿಸಿ ಸತಿ ಅಥವ ಸಹಗಮನವು ನಿಲ್ಲಿಸಲ್ಪಟ್ಟುದರಿಂದ ಲೆಕ್ಕಕ್ಕೆ

ಮಾರಿ ಬೆಳೆಯುತ್ತಿರುವ ಈ ಬಾಲ ವಿಧವೆಯರ ಸಂಖ್ಯೆಯನ್ನು ಕುರಿತು ಕಣ್ಣು ಬಿಟ್ಟು ವಿಚಾರಿಸದಿದ್ದರೆ—'ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸಂಕರಃ'' ಎಂದು ಅರ್ಜುನನು, ಧರ್ಮರಾಜನೇ ಜೀವಂತನಾಗಿದ್ದು ರಾಜ್ಯವಾಳುತ್ತಿದ್ದ ಆ ಧಾರ್ಮಿಕ ಕಾಲದಲ್ಲೇ ಶಂಕಿಸಿದ ಸಂಗತಿಯು, ಈ ದುಷ್ಕಾಲದಲ್ಲಿ ಕಾರ್ಯಕಾರಿಯಾಗುವುದು ಅಸಂಭವವೆಂದು ಯಾರಾದರೂ ಹೇಳಬಲ್ಲರೆ! ಅಲ್ಲದೆ, ಮಾನವ ಸ್ವಭಾವವನ್ನೇ ಕುರಿತು ಯೋಚಿಸುವುದಾದರೂ, ಒಂದು ವಿಚಾರವನ್ನು ಗಮನಿಸಬೇಕಾಗುತ್ತದೆ! ಹೆಂಡತಿ ಸತ್ತ ಹನ್ನಾರು ದಿನಗಳೊಳಗಾಗಿ ಮತ್ತೊಬ್ಬ ಸ್ತ್ರೀಯನ್ನು ವರಿಸಲು ತವಕಿಸುತ್ತಿರುವ ಐವತ್ತು ವಯಸ್ಸಿನ ಪುರುಷನಾದರೂ ಇಂದ್ರಿಯಗಳನ್ನು ತಡೆಯಲಾರನೆಂಬುದು ಪ್ರತ್ಯಕ್ಷವಿರುವಲ್ಲಿ, ಪರಿಪೂರ್ಣ ಯೌವನಾವಸ್ಥೆಯಲ್ಲಿ ಸ್ತ್ರೀಯು, ಈಗಿನ ನಾಗರಿಕತೆಯ ಫಲವಾಗಿ ದೊರೆತಿರುವ ಅಸಂಖ್ಯ ಮೋಹಕ ವಸ್ತುಗಳ ಮಧ್ಯದಲ್ಲೇ ನಿತ್ಯಶಃ ವಾಸಿಸಿದ್ದು—ಮಹರ್ಷಿ ಸಾಮಾನ್ಯವಾದ ಬ್ರಹ್ಮಚರ್ಯವನ್ನು ಪಾಲಿಸಬೇಕೆಂದರೆ ಅದು ಹೇಗೆ ಸಾಧ್ಯ? 'ಪಾಪಮಾಡಿ ಹೆಂಗಸಾಗಿ ಹುಟ್ಟಿ ಗಂಡನನ್ನು ನೀಗಿಕೊಂಡ ದುಷ್ಕರ್ಮಕ್ಕಾಗಿ ಆ ವೈಧವ್ಯ ದುಃಖವನ್ನು ಅವಳು ಅನುಭವಿಸಲಿ' ಎಂದು, ನಿಸ್ಸಹಾಯಕಳಾದ ಆ ಬಾಲೆಯ ಎದುರಿಗೇ ನುಡಿವ ನಿಷ್ಠುರ ಹೃದಯರಿಗೆ ನಮ್ಮಲ್ಲಿ ಕಡಮೆಯಿಲ್ಲ. ಇದನ್ನು ಹೇಳುತ್ತಿರುವುದರಿಂದ ಸ್ತ್ರೀಯರ ಸ್ವೇಚ್ಛಾಪ್ರವೃತ್ತಿಗೆ ಆಸ್ಪದ ಕೊಡಬೇಕೆಂಬುದನ್ನು ನಾವು ಸಮರ್ಥಿಸುತ್ತಿದ್ದೇವೆಂದು ಯಾರೂ ಭಾವಿಸಲಾಗದು. ತಮ್ಮ ಇಷ್ಟಾಪೂರ್ತಿಗೆ ಸಹಜಮಾರ್ಗದಿಂದ ಅವಕಾಶವಿಲ್ಲವೆಂದು ತೋರಿದಾಗ ಅಸಹಜಮಾರ್ಗದಿಂದ ದುಷ್ಪಥಗಳಲ್ಲಿ ಬಿದ್ದು ಭ್ರೂಣಹತ್ಯಾದಿ ದುಷ್ಕರ್ಮಗಳನ್ನು ಆಚರಿಸುತ್ತಿರುವ ಉದಾಹರಣೆಗಳಾದರೂ ಒಂದೆರಡಿಲ್ಲವಷ್ಟೆ! ಇದು ಯಾರಿಗೆ ತಿಳಿಯದ ವಿಚಾರ: ನಾವು ಸ್ಪಷ್ಟರೀತಿಯಿಂದ ಹೇಳುತ್ತಿರುವುದೇನೆಂದರೆ, 'ಅಂತಹ ದುಷ್ಕರ್ಮಗಳನ್ನು ಪ್ರತ್ಯಕ್ಷ ನೋಡುತ್ತ ಉಪಾಯಕಾಣದೆ ಹತಾಶರಾಗಿ, ಹೊರಕ್ಕೆ ಬಿದ್ದರೆ ಮಾನಹೋಗುವುದೆಂದು ಹೇಡಿತನದಿಂದ ಸಹಿಸಿಕೊಂಡು, ಅಂತಹ ಸ್ತ್ರೀಯರಿಗೆ ಸಮಸ್ತವಿಧವಾದ ಸಾಮಾಜಿಕ ಸ್ವಾತಂತ್ರ್ಯಗಳಿಗೂ ಈಗ ಅವಕಾಶಕೊಡುತ್ತಿಲ್ಲವೆ! ಆದುದರಿಂದ ಹಾಗೆ ಮನೋನಿಗ್ರಹ ಮಾಡಿಕೊಳ್ಳಲಾರದ ಭರ್ತೃ-ವಿಯೋ

ಗಾನಂತರವೂ ಪುನಃ ಸಂಸಾರ ಯಾತ್ರೆಗೆ ಇಳಿಯಬೇಕೆಂದು ಅಪೇಕ್ಷಿಸುವ ನಿಷೇಕವಾಗುವುದಕ್ಕೆ ಮುಂಚೆಯೇ ವಿಧವೆಯರಾಗುವ ಬಾಲವಿತಂತುಗಳಿಗೂ, ವಿವಾಹಕಾಲದಲ್ಲಿ ಮಾತ್ರ ಭರ್ತೃಮುಖವನ್ನು ನೋಡಿ ಪುಷ್ಪಿಣಿಯಾಗುವುದಕ್ಕೆ ಮುಂಚೆಯೇ ವಿತಂತುವಾಗುವ ಕನ್ಯೆಗೂ ಈ ಸಂಬಂಧದಲ್ಲಿ ಯಾವುದಾದರೊಂದು ವಿಧವಾದ ಧಾರ್ಮಿಕ ಅವಕಾಶವನ್ನು ಸಮಾಜವು ಕಲ್ಪಿಸಿ ಕೊಡಬೇಕೆಂಬುದೇ! ಸಮಾಜದಲ್ಲಿ ಇಂತಹ ಅನುಕೂಲತೆ ಇದ್ದ ಮಾತ್ರಕ್ಕೆ ಇದು ಸಾರ್ವತ್ರಿಕ ಆಚರಣೆಗೆ ಒಂದು ರಹದಾರಿಯಿದ್ದಂತೆ ಎಂದು ಭಾವಿಸಿ ಬೆದರಬೇಕಾದ್ದಿಲ್ಲ. ಬಾಲವಿಧವೆಯರೇ ಆದರೂ ಜಿತೇಂದ್ರಿಯರಾಗಿ ವಿತಂತುಗಳಾಗಿಯೇ ನಿಲ್ಲಬೇಕೆಂದು ಅಪೇಕ್ಷಿಸುವಂತಹ ವ್ರತಶೀಲರಿದ್ದರೆ ಅವರನ್ನು ನಿರ್ಬಂಧಿಸುವರಾರು! ಅಂತಹ ನಾರೀಮಣಿಯರಿಗೆ ಸಹಸ್ರಶಃ ನಮಸ್ಕಾರಗಳನ್ನು ಅರ್ಪಿಸುತ್ತೇವೆ. ಮುಖ್ಯ ಈ ಮೂಲಕವೂ ನಮ್ಮ ಹಿಂದೂ ಸಮಾಜವು ಶೈಥಿಲ್ಯ ಹೊಂದದಂತಿರಬೇಕೆಂಬುದೂ, ನಮ್ಮ ಈ ವಿಚಾರಹೀನ ಕಾಠಿಣ್ಯವು, ಹತಾಶರಾದ ಈ ನಮ್ಮ ಭಗಿನಿಯರ ಭೌತಿಕ ಆಶಾಪೂರ್ಣತೆಯ ಸಾಧನಗಳ ಬಲೆಯನ್ನು ಬೀರಿ ಪರಮತಗಳವರು ಅವರನ್ನು ಆಕರ್ಷಿಸಲು ಕಾರಣವಾಗದಂತೆ, ಸಮಾಜದಲ್ಲೇ ಒಂದು ಮಾರ್ಗವುಂಟಾಗಬೇಕೆಂಬುದೂ ಈ ವಿಚಾರವನ್ನು ಬರೆಯುವುದರಲ್ಲಿ ನಮ್ಮ ಮುಖ್ಯ ಉದ್ದೇಶವು.

ಇಷ್ಟು ಮಾತ್ರವಲ್ಲ. ವಿದ್ಯಾಭ್ಯಾಸ, ರಾಜಕಾರಣ ಮುಂತಾದ ಕೆಲ ಸತ್ಕಾರ್ಯಗಳಿಗಾಗಿ ಸಮುದ್ರಯಾನಮಾಡಿ ವಿದೇಶ ವಾಸಮಾಡಬೇಕಾದುದೂ ನಮ್ಮಲ್ಲಿ ಕೆಲವರಿಗೆ ಆವಶ್ಯಕವೆನ್ನಿಸಿದೆ. ಪೂರ್ವದ ವೈದಿಕಮತವು ಇದಕ್ಕೆ ಅವಕಾಶ ಕೊಡುವುದಿಲ್ಲ. ಕಾಲದೇಶವರ್ತಮಾನಗಳ ಸ್ಥಿತಿಗತಿಗಳನ್ನನುಸರಿಸಿ ಇಂತಹ ಕೆಲಕೆಲವು ವಿಚಾರಗಳಲ್ಲಿ ಉದಾರ ಭಾವವನ್ನು ವಹಿಸಬೇಕಾದುದು ಸಾಧುವೆಂಬ ವಿಚಾರದಲ್ಲಿ ನಮ್ಮ ಕಥಾನಾಯರಿಗೆ ಸಹಾನುಭೂತಿ ಇತ್ತು. ಈ ಸಂಬಂಧದಲ್ಲಿ ಅವರು ದೂರು ಅಪನಿಂದೆಗಳಿಗೆ ಗುರಿಯಾಗದಿರಲಿಲ್ಲ. ಇದರೂ ಧೀರರಾದ ಅವರು ಅವುಗಳನ್ನು ಲಕ್ಷ್ಯಮಾಡದೆ ಪರಿಪಕ್ವವಾದ ತಮ್ಮ ಮನಸ್ಸಾಕ್ಷಿಗೆ ಯುಕ್ತವೆಂದು ತೋರಿದ ಸಮಾಜ ಸುಧಾರಣಾ ಕಾರ್ಯಗಳನ್ನು ಧೈರ್ಯದಿಂದ ಮಾಡಿ ಕೃತಕೃತ್ಯರಾದರು.



ಅಧ್ಯಾಯ ೬ "ಅಂತ್ಯಕಾಲ"

ಶ್ರೀ ರಾನಡೇಯವರು ಮಹಾತ್ಮಾಗಾಂಧಿಯವರ ರಾಜ್ಯಗುರುವಾದ ಶ್ರೀ ಗೋಖಲೆಯವರಿಗೆ ರಾಜನೀತಿ ಶಿಕ್ಷಕಸ್ಥಾನದಲ್ಲಿದ್ದರೆಂದು ಹೇಳಿದ್ದೇವಲ್ಲವೆ! ಆದರೂ ಅವರು ಆದ್ಯಂತ ಸಾಮ್ರಾಜ್ಯ ಸರ್ಕಾರದ ನೌಕರಿಯಲ್ಲಿದ್ದರಲ್ಲದೆ, ಮೇಲ್ಕಂಡ ಇಬ್ಬರಂತೆ ಸ್ವತಂತ್ರ ವ್ಯಕ್ತಿಯಾಗಿರಲಿಲ್ಲ. ಅವರು ಹಾಗೆ ಸರ್ಕಾರಿಯ ಉದ್ಯೋಗದಲ್ಲಿದ್ದರೂ ಮಾತೃದೇಶ ವಿಚಾರದಲ್ಲಿ, ತಮ್ಮ ಆತ್ಮಸಾಕ್ಷಿಯಾದ ಅಭಿಪ್ರಾಯಗಳನ್ನು ನಿರ್ಭಯವಾಗಿ ಹೇಳಲು ಎಂದೂ ಹಿಂದೆಗೆದವರಲ್ಲ! ನಮ್ಮ ದೇಶಕ್ಕೆ ಸ್ವಾಭಾವಿಕವಾಗಿರುವ ಲೋಪಗಳನ್ನು ಎಷ್ಟು ನಿರ್ವಂಚನೆಯಿಂದ ವಿಶದಪಡಿಸಿ ಒಪ್ಪಿಕೊಳ್ಳುತ್ತಿದ್ದರೋ, ಬ್ರಿಟಿಷ್ ಸರ್ಕಾರದ ಲೋಪಗಳನ್ನು ಕುರಿತೂ ಅಷ್ಟೇ ನಿರ್ದಾಕ್ಷಿಣ್ಯದಿಂದ ಬಹಿರಂಗವಾಗಿ ಹೇಳಿಬಿಡುತ್ತಿದ್ದರು. ಆದರೂ ದೇಶದ ಸದ್ಯಸ್ಥಿತಿಯಲ್ಲಿ ಬ್ರಿಟಿಷರ ಸಂಬಂಧವಿರುವುದು ಶ್ರೇಯಸ್ಸಾಧಕವೆಂಬುದೇ ಅವರ ಅಭಿಪ್ರಾಯವಾಗಿತ್ತು. ಧೈರ್ಯ ಸಾಮರ್ಥ್ಯ ಸ್ವಾತಂತ್ರ್ಯಾಭಿಪ್ರಾಯಗಳಿಂದ ಪ್ರೇರಿತರಾದ-ಕರ್ತವ್ಯಕ್ಕಾಗಿ ಕರ್ಮಮಾಡುವಂತಹ ಧೀರರಾದ ದೇಶೀಯರು ಸರ್ವ ಪ್ರಯತ್ನಗಳಿಂದಲೂ ದೇಶಸ್ವಾತಂತ್ರ್ಯಕ್ಕಾಗಿ ಶಕ್ತಿಮೀರಿ ಶ್ರಮಿಸಿ, ಭಾರತದೇಶಕ್ಕೆ ಪೂರ್ವದ ಉನ್ನತೋನ್ನತ ಸ್ಥಾನವನ್ನು ಪುನಃ ದೊರಕಿಸಿ ಕೊಡಬೇಕಾದುದು ಅತ್ಯವಶ್ಯವೆಂದು ಅವರು ಸರ್ವದಾ ಹೇಳುತ್ತಿದ್ದರು.

ದೇಶದ ಆರ್ಥಿಕ ದುಸ್ಥಿತಿಯನ್ನು ಕುರಿತು ಅವರು ಬಹು ಮರುಗುತ್ತಿದ್ದರು. ಆದರೆ ಮರುಗಿ ಹತಾಶರಾಗಿ ಸುಮ್ಮನೆ ಕುಳ್ಳಿರಲಿಲ್ಲ. ಪ್ರಪಂಚದ ಇತರ ದೇಶಗಳೊಂದಿಗೆ ಹೋಲಿಸಿನೋಡಿದರೆ ನಮ್ಮ ದೇಶಸ್ಥಿತಿಯೂ ನಮ್ಮ ಸ್ಥಿತಿಯೂ ಎಷ್ಟು ಪರಿತಾಪಕರವಾಗಿದೆಯೆಂಬುದನ್ನು ಜನಸಾಮಾನ್ಯರ ತಿಳುವಳಿಕೆಗೂ ತಂದು, ಅವರನ್ನು ಕರ್ತವ್ಯ ಜಾಗೃತರನ್ನಾಗಿ ಮಾಡಬೇಕೆಂದು ಅಹರ್ನಿಶಿ ಪ್ರಯತ್ನಮಾಡುತ್ತಿದ್ದರು. ದೇಶದ ಆರ್ಥಿಕ ಸ್ಥಿತಿಯು ಉತ್ತಮಗೊಳ್ಳಲು ಆವಶ್ಯಕವೆಂದು ತೋರಿದ ಮಾರ್ಗಗಳನ್ನು ಸಾರ್ವಜನಿಕ ಸಭಾ ಪತ್ರಿಕೆಯ ಮೂಲಕ ಬರೆದು ವಿಶದೀಕರಿಸುತ್ತಿದ್ದರು.

೧೮೭೩ ರಿಂದ ೧೯೦೦ ನೆಯ ಸಂ|| ದ ವರೆಗೆ ಅವರು ಮುಂಬಯಿ

ನಗರದಲ್ಲಿ ಹೈಕೋರ್ಟ್ ಜಡ್ಜಿಯ ಉದ್ಯೋಗದಲ್ಲಿದ್ದು, ಅಲ್ಲಿ ತಾವು ನಡೆಸಿದ ನ್ಯಾಯ ವಿಚಾರ ಕಾರ್ಯದಿಂದ ಅನೇಕಮಂದಿ ಸುಪ್ರಸಿದ್ಧ ಆಂಗ್ಲೇಯರ ಮತ್ತು, ಸಾಮ್ರಾಜ್ಯ ಸರ್ಕಾರದವರ ಪ್ರಶಂಸೆಗೆ ಪಾತ್ರರಾದರು. ಅಂತಹ ಉನ್ನತಾಧಿಕಾರದಲ್ಲಿದ್ದವರ ಮೇಲೆ ಎಲ್ಲರದೃಷ್ಟಿಯೂ ಇದ್ದು ಅವರು ಯಾವಾಗ ಎಷ್ಟು ಸ್ವಲ್ಪ ತಪ್ಪುಮಾಡಿದರೂ ಅದನ್ನು ಪರ್ವತದಷ್ಟು ಮಾಡಿ ದೂರ ತೊಡಗುವುದು ಸಾಮಾನ್ಯವಷ್ಟೆ! ರಾನಡೇಯವರು ಹಿಂದೂ ಮತ್ತು ಮಹಮ್ಮದೀಯ, ಸ್ವದೇಶೀಯ-ವಿದೇಶೀಯ ಎಂಬ ಭೇದಭಾವದಿಂದ ಎಂದಾದರೂ ಪಕ್ಷಪಾತವನ್ನು ತೋರಿಸಿ ನ್ಯಾಯವಿಮರ್ಶೆಯ ಮಹತ್ವಕ್ಕೆ ಕುಂದುತರುವರೋ ಎಂದು ಎಷ್ಟೋಮಂದಿ ಪರೀಕ್ಷಿಸುತ್ತಿದ್ದರು. ಆದರೇನು, ಆ ಮಹನೀಯರ ನಡತೆಯಲ್ಲಿ ಲೇಶಾಂಶವೂ ಕಳಂಕವೆಂಬುದು ಕಂಡುಬರಲಿಲ್ಲ.

ಅಂತಹ ಉನ್ನತಾಧಿಕಾರದಲ್ಲಿದ್ದಾಗಲೂ ಅವರ ತಾಳ್ಮೆಯೂ ಸೌಮ್ಯಸ್ವಭಾವವೂ ಅನ್ಯಾದೃಶವಾಗಿದ್ದುವು. ೧೮೯೪ನೆಯ ಸಂ| ದಲ್ಲಿ ಅವರು ಇತರ ಅನೇಕ ಮಿತ್ರರೊಂದಿಗೆ ಮದ್ರಾಸಿನಲ್ಲಿ ನಡೆದ ರಾಷ್ಟ್ರೀಯ ಮಹಾಸಭೆಗೆ ಹೋಗಿದ್ದು ಹಿಂದಿರುಗಿ ಬರುತ್ತಿದ್ದಾಗ ಒಂದು ಸಂಗತಿ ನಡೆಯಿತು. ಅವರೂ ಮತ್ತು ಭಂಡಾರಕರರೂ ಹೊಗೆಬಂಡಿಯ ಒಂದನೆಯ ತರಗತಿಯಲ್ಲಿ ಕುಳಿತು ಪ್ರಯಾಣ ಮಾಡುತ್ತಿದ್ದರು. ಬಂಡಿಯು ಸೋಲಾಪುರಸ್ಟೇಷನ್ಗೆ ತಲುಪಲು, ರಾನಡೆಯವರು ತಮ್ಮ ಗಾಡಿಯಿಂದಿಳಿದು, ಬೇರೆ ಗಾಡಿಗಳಲ್ಲಿದ್ದ ತಮ್ಮ ಮಿತ್ರರನ್ನು ಕಂಡು ಮಾತನಾಡಿಬರಲುಹೋದರು. ಆ ವೇಳೆಯಲ್ಲಿ ಬೇರೊಬ್ಬ ಐರೋಪ್ಯ ಉದ್ಯೋಗಸ್ಥನು, ಅವರು ಕುಳಿತಿದ್ದ ಒಂದನೆಯ ತರಗತಿಯ ಗಾಡಿಗೆ ಬಂದು, ಅವರ ಹಾಸಿಗೆ ಬಟ್ಟೆಗಳನ್ನು ಕಿತ್ತೊಗೆದು, ಅಲ್ಲ ತಾನು ಕುಳಿತನು. ರಾನಡೆಯವರು ಬಂದ ತರುವಾಯ ಅದನ್ನು ಕಂಡು ಸ್ವಲ್ಪ ಅಪ್ರತಿಭರಾದರೂ, ಏನೂ ಹೇಳದೆ, ಪಕ್ಕದಲ್ಲೇ ಇದ್ದ ಭಂಡಾರಕರರ ಆಸನದಲ್ಲಿಯೇ ಕುಳಿತಿದ್ದು, ರಾತ್ರಿಯೂ ಹೇಗೋ ಕಷ್ಟದಿಂದ ಕಾಲಕಳೆದರು. ಮಾರನೆಯ ಪ್ರಾತಃಕಾಲ ಬೊಂಬಾಯಿಯಲ್ಲಿ ಬಂಡಿಯಿಂದ ಇಳಿದಾಗ, ತಾನು ಹಾಗೆ ಧೂರ್ತತನದಿಂದ ನಡೆದುಕೊಂಡುದು ಮುಂಬಯಿ ಹೈಕೋರ್ಟಿನ ಜಡ್ಜಿಯವರಾದ ರಾನಡೆಯವರೊಂದಿಗೆ

ಎಂಬುದು ಆ ಐರೋಪ್ಯನಿಗೆ ತಿಳಿಯಿತು. ಒಡನೆ ದಿಗಿಲುಗೊಂಡ ಆತನು ಅವರ ಕ್ಷಮಾಪಣೆಯನ್ನು ಕೇಳಿಕೊಳ್ಳಲಿಕ್ಕೆಂದು ಅವರೆಡೆಗೆ ಬರತೊಡಗಿದನು. ಅದನ್ನು ಕಂಡು ರಾನಡೆಯವರು, ತಿರಸ್ಕಾರಭಾವದಿಂದ ಅವನ ಕಡೆಗೆ ನೋಡಿಯೂ ನೋಡದಂತೆ ತಿರುಗಿ ಹೊರಟುನಡೆದರು. ಇದರಿಂದ ಅವನು ಬಹುಮಟ್ಟಿಗೆ ಮುಖಭಂಗಿತನಾದಂತಾಗಿ, ಹೋಗಿ ತರುವಾಯ ಐದುವರ್ಷಗಳ ತರುವಾಯ ಲಂಡನ್ ಪಟ್ಟಣದಿಂದ ತನ್ನ ಧೂರ್ತತನವನ್ನು ಕುರಿತು ಪಶ್ಚಾತ್ತಾಪಪಟ್ಟು, ರಾನಡೇಯವರ ಅಲೌಕಿಕತಾಳ್ಮೆಯನ್ನು ಬಹು ಪರಿಯಿಂದ ಪ್ರಶಂಸಿಸಿ.--"ತಮ್ಮಿಂದ ನಾನು ನಡತೆ ಎಂದರೇನು ಎಂಬುದನ್ನು ಕಲಿತೆನು. ಅದನ್ನು ನನ್ನ ಜನ್ಮದಲ್ಲಿ ಎಂದಿಗೂ ಮರೆಯೆನು" ಎಂದು ಒಂದು ಪತ್ರ ಬರೆದನು.

ಆ ಸಂದರ್ಭದಲ್ಲಿ ಅವನಮೇಲೆ ವ್ಯವಹಾರ ನಡೆಸಬೇಕೆಂದು, ಅವರ ಮಿತ್ರರಲ್ಲನೇಕರು ಸಲಹೆ ಕೊಟ್ಟಾಗ್ಗೂ ರಾನಡೇಯವರು "ಮಿತ್ರರೇ-ಹಾಗಲ್ಲ, ನೋಡಿ, ನಾವು ಇಂತಹ ಅಧಮ ಸ್ಥಿತಿಯಲ್ಲಿರುವಾಗಲೂ ನಮ್ಮದೇಶೀಯರಾದ ಕೀಳುವರ್ಣದವರನ್ನು ಎಷ್ಟು ನೀಚಭಾವದಿಂದ ನಡೆಯಿಸಿಕೊಳ್ಳುತ್ತಿದ್ದೇವೆ. ಹೀಗಿರುವಲ್ಲಿ ಪ್ರಭು ಜಾತಿಯವರಾದ ಅವರು ಅಧೀನಜನಾಂಗದವರಾದ ನಮ್ಮನ್ನು ಈ ರೀತಿ ಕಂಡು ಧೂರ್ತತನವನ್ನು ತೋರಿಸಿದರೆ ಅದರಲ್ಲಿ ಆಶ್ಚರ್ಯವೇನು! ಅದಕ್ಕಾಗಿ ನಾವು ಕೋಪಗೊಳ್ಳಬೇಕಾದ್ದಿಲ್ಲ. ನಮ್ಮವರ ವಿಷಯದಲ್ಲಿ ನಾವು ಹೇಗೆ ನಡೆದುಕೊಳ್ಳಬೇಕು ಎಂಬ ವಿಷಯದಲ್ಲಿ ಒಂದು ಪಾಠವನ್ನು ಕಲಿಯೋಣ" ಎಂದು ಸಮಾಧಾನಹೇಳಿದರು.

ಅವರ ಸಮಾಧಾನ ಪ್ರಕೃತಿಯನ್ನು ಪ್ರದರ್ಶಿಸುವ ಇನ್ನೂ ಒಂದು ಸಂಗತಿಯನ್ನು ಉದಹರಿಸಬಹುದು! ಆ ಕಾಲದಲ್ಲೇ ಲೋ. ಬಾಲಗಂಗಾಧರತಿಲಕರೂ ಪೂನಾಪಟ್ಟಣದಲ್ಲಿ ರಾಜಕೀಯ ಚಳುವಳಿಯನ್ನು ಹೂಡಿ ಲೋಕಜಾಗೃತಿಯನ್ನುಂಟುಮಾಡಲು ಪ್ರಯತ್ನಿಸಿದ್ದರಷ್ಟೆ! ಅವರು ಆರ್ಷೇಯ ವೈದಿಕ ಧರ್ಮದಲ್ಲಿ ಅತ್ಯಂತ ಅಭಿಮಾನಿಗಳಾಗಿದ್ದು, ರಾನಡೇಯವರ ಸುಧಾರಣಾ ಕಾರ್ಯಗಳನ್ನು ಒಪ್ಪುತ್ತಿರಲಿಲ್ಲ. ಹೀಗಿರುವಲ್ಲಿ ಒಂದುಸಾರಿ, ಸಭೆಯಲ್ಲಿ ತಿಲಕರು ರಾನಡೇಯವರ ಕಾರ್ಯಗಳನ್ನು ನಿಷೇಧಿಸುತ್ತಾ ಬಹು ತೀಕ್ಷ್ಣವಾಕ್ಕುಗಳಿಂದ ಖಂಡಿಸಿ ಮಾತನಾಡಿದರು. ಅಲ್ಲೇ ಇದ್ದ ನಗ

ಕಥಾನಾಯಕರು ತಿಲಕರನ್ನೂ ತಕ್ಕ ರೀತಿಯಲ್ಲಿ ಪ್ರತಿಭಟಿಸಿ ಮಾತನಾಡುವ ರೆಂದೂ, ಉಭಯರಿಗೂ ದೊಡ್ಡದೊಂದು ವಾಗ್ಯುದ್ಧವು ಬೆಳೆಯುವುದೆಂದೂ ಅಲ್ಲಿದ್ದವರೆಲ್ಲರೂ ತಿಳಿದಿದ್ದರು. ಆದರೆ ರಾನಡೇಯವರು, ತಿಲಕರ ಭಾಷಣ ವು ಮುಗಿದೊಡನೆಯೇ ಅವರ ಬಳಿಗೆಹೋಗಿ-'ಬಲವಂತ್, ಬನ್ನಿ ನನ್ನ ಬಳಿ ಕುಳಿತುಕೊಳ್ಳಿ. ಎಲ್ಲಾ ಸಂಗತಿಯನ್ನೂ ನಾನು ನಿಮಗೆ ಸರಿಯಾದ ರೀತಿಯಿಂದ ವಿವರಿಸಿ ಹೇಳುತ್ತೇನೆ. ಆಗ ನನ್ನದು ತಪ್ಪಿದ್ದರೆ ಹೇಳಿ; ತಿದ್ದಿ ಕೊಳ್ಳುತ್ತೇನೆ.' ಎಂದು ಹೇಳಿ ಅವರನ್ನು ಶಾಂತಗೊಳಿಸಿದರು.

ಅವರು ಎಲ್ಲರೊಂದಿಗೂ ಸರಳಭಾವದಿಂದ ಮಾತನಾಡುವರು. ಅವ ರೊಂದಿಗೆ ಸಂಭಾಷಿಸಿದವರು, ಅನೇಕ ವಿಷಯಗಳಿಂದ ರಸಭರಿತವಾದ ಅವರ ವಾಕ್ಸುಧಾಪಾನದಿಂದ ತೃಪ್ತರಾಗುವರು. ಅವರು ಸುರೇಂದ್ರನಾಥ ಬ್ಯಾನ ರ್ಜಿ, ಕೇಶವಚಂದ್ರಸೇನ್ ಮುಂತಾದವರಂತೆ ಸುಪ್ರಸಿದ್ಧ ವಕ್ತೃವಲ್ಲದಿದ್ದ ರೂ, ಸಭೆಯಲ್ಲಿ ಮಾತನಾಡುವಾಗ ಸ್ಪಷ್ಟವಾಗಿಯೂ ವಿವಿಧ ವಿಷಯಪೂರ್ಣ ವಾಗಿಯೂ ಇರುವ ತಮ್ಮ ಭಾಷಣದಿಂದ ಶ್ರೋತೃಗಳನ್ನು ಆಹ್ಲಾದಗೊ ಳಿಸುವರು.

ರಾನಡೇಯವರು ಸಾದಾತನದಲ್ಲಿ ಜೀವಿಸುವುದನ್ನು ಮೆಚ್ಚುವವರಾಗಿ ದ್ದರು. ತಮ್ಮ ಆಹಾರವಿಹಾರಗಳಲ್ಲಿ ಎಂದೂ ಆಡಂಬರವನ್ನು ನಟಿಸಿದವ ರಲ್ಲ. ವಸ್ತ್ರ ಉಡಿಗೆಗಳಲ್ಲಿ ಐರೋಪ್ಯರನ್ನು ಅನುಸರಿಸಬೇಕೆಂದು ಪ್ರಯತ್ನಿ ಸಿದವರಲ್ಲ. ಮನೆಯಲ್ಲಿದ್ದಾಗ ಸಾಧಾರಣವಾಗಿ ಒಂದು ಚಾಪೆಯಮೇಲೆ ಕುಳಿತು ತುಕಾರಾಮನ ಅಭಂಗಗಳನ್ನು ಹೇಳಿಕೊಳ್ಳುತ್ತಾ, ಏನಾದರೂ ಬರೆಯುವುದಿದ್ದರೆ, ಕಾಗದ ಕಡ್ಡಿಗಳನ್ನು ಹಿಡಿದು ತೊಡೆಯಮೇಲಿಟ್ಟುಕೊಂ ಡು ಬರೆಯುತ್ತಿದ್ದುದನ್ನು ಅನೇಕರು ನೋಡಿದ್ದುದುಂಟು. ಸುಧಾರಣೆಯೇ ನಿದ್ದರೂ ಒಳಗಿನಿಂದ ಬರಬೇಕಲ್ಲದೆ, ಹೊರಗಿನ ಬಟ್ಟೆಯಿಂದಲಲ್ಲವೆಂದು ಅವರು ಹೇಳುತ್ತಿದ್ದರು. ಸರ್ಕಾರಿ ಕೆಲಸಗಳಿಗಾಗಿ ಕೋರ್ಟುಕಚೇರಿಗಳಿಗೆ ಹೋಗುವ ಹೊತ್ತಿನಲ್ಲಲ್ಲದೆ ಮಿಕ್ಕವೇಳೆಯಲ್ಲೆಲ್ಲ, ದೇಶೀಯ ನೇಯ್ಗೆಯ ವರು ತಯಾರಿಸಿದ ಒರಟುಬಟ್ಟೆಯನ್ನೇ ಧರಿಸುತ್ತಿದ್ದರು. ಯಾರಾದರೂ, ಅಂತಹ ಒರಟುಬಟ್ಟೆಯನ್ನು ಧರಿಸುವುದೇಕೆಂದು ಕೇಳಿದರೆ, ನಮ್ಮ ದೇಶವು ಉತ್ತಮ ವಸ್ತ್ರಗಳನ್ನು ತಯಾರಿಸಲು ಯೋಗ್ಯವಾಗುವವರೆಗೆ ಇಂತಹ ಬಟ್ಟೆ

ಗಳನ್ನೇ ಧರಿಸುವೆನೆಂದು ಹೇಳುವರು.

ಅವರಲ್ಲಿ ದೇಶಭಕ್ತಿಯೂ-ದೈವಭಕ್ತಿಯೂ ಅವಿಚ್ಛಿನ್ನವಾಗಿದ್ದುವು. ಅವರು ಪ್ರಾರಂಭದಿಂದ ಕೊನೆಯವರೆಗೂ ಸರ್ಕಾರಿಯ ನೌಕರಿಯಲ್ಲಿದ್ದು ಪರಾಧೀನರಾಗಿದ್ದಂತೆ ತೋರುತ್ತಿದ್ದರೂ, ಎಂದೂ ಭಾವದಾಸ್ಯಕ್ಕೆ ಕಟ್ಟುಬಿದ್ದು ತಮ್ಮ ಮನಸ್ಸಾಕ್ಷಿಗೆ ವಿರೋಧವಾಗಿ ನಡೆದವರಲ್ಲ. ಅವರು ಮಹಾರಾಷ್ಟ್ರನವಶಕ್ತಿಯ ಉದಯದ ಸಿಸ್ಥಿಯಸ್ವರೂಪವನ್ನು ವರ್ಣಿಸುವ 'ದಿ ರೈಜ್ ಆಫ್‌ದಿ ಮರಾಠಾ ಪವರ್' ಎಂಬ ಐತಿಹಾಸಿಕ ಗ್ರಂಥರತ್ನವನ್ನು ಬರೆದು ಪ್ರಕಟಿಸಿದರು. ಅದರಲ್ಲಿ, ಅವರು ಮಹಾರಾಷ್ಟ್ರರ ಗಡಿನಾಡುಗಳು, ಅವರ ಪೂರ್ವಚರಿತ್ರೆ, ಅವರ ರಾಜ್ಯವೈಭವ, ಶಿವಾಜಿ ಮಹಾರಾಜನ ಅಭ್ಯುದಯ ಮುಂತಾದುವುಗಳನ್ನೆಲ್ಲ ಹೃದಯಂಗಮವಾಗಿ ವರ್ಣಿಸಿದ್ದಾರೆ. ಇದಲ್ಲದೆ, ಅವರು ದೇಶೀಯರ ಅಭಿವೃದ್ಧಿಗಾಗಿ ವಿವಿಧ ವಿಷಯಗಳ ಮೇಲೆ ಬರೆದ ವ್ಯಾಸಗಳು ಲೆಕ್ಕಮಿತಿಯಿಲ್ಲದಷ್ಟಿವೆ!

ದೇಶವಿಚಾರದಲ್ಲೂ ದೇಶೀಯ ಸಂಸ್ಕೃತಿ ವಿಚಾರದಲ್ಲೂ ಅಷ್ಟುಮಟ್ಟಿನ ಆದರಭಾವ ಹುಟ್ಟಲು ಅವರಿಗೆ, ತುಕಾರಾಮ ನಾಮದೇವ ಮೋರೋಪಂತ್ ಜ್ಞಾನದೇವ ಏಕನಾಥ ಧ್ಯಾನೇಶ್ವರ ರಾಮದಾಸ ಮುಂತಾದ ಮಹಾರಾಷ್ಟ್ರ ಸಾಧುಗಳು ರಚಿಸಿದ ಕವಿತೆಗಳಲ್ಲಿದ್ದ ಅವಿರಳ ಅನುರಾಗವೇ ಕಾರಣವೆಂದರೆ ಅದು ತಪ್ಪಾಗಲಿಕ್ಕಿಲ್ಲ. ಹೊತ್ತುವೇಳೆಗಳೆಂಬ ಭೇದವನ್ನರಿಯದೆ ಅವರು ಉಚ್ಚಸ್ವರದಿಂದ ಭಕ್ತಶಿರೋಮಣಿ ತುಕಾರಾಮನ ಅಭಂಗಗಳನ್ನು ಹೇಳಿಕೊಳ್ಳುತ್ತಿದ್ದರೆಂದು ಗೋಖಲೆಯವರು ತಿಳಿಸುತ್ತಾರೆ.

೧೮೯೯ನೆಯ ಸಂ| ವು ಪ್ರಾಪ್ತವಾಗುತ್ತಿದ್ದಂತೆ ಅವರು ಊಟ ಉಪಚಾರಗಳಲ್ಲಿ ವಿಶೇಷ ಇಷ್ಟವಿಲ್ಲದವರಾದರು. ಇದನ್ನು ತಿಳಿದು ಸೌ|| ರಮಾಬಾಯಿಯವರು, ವಿಶೇಷ ರುಚಿಕರವಾದ ತಿಂಡಿತೀರ್ಥಗಳನ್ನು ತಯಾರಿಸಿ ತಮ್ಮ ಪತಿಯನ್ನು ಉಪಚರಿಸುವರು. ಆ ಪತಿಪತ್ನಿಯರಿಗೆ ಇದ್ದ ಅನ್ಯೋನ್ಯತೆಯು ಅನುಕರಣೀಯವಾದುದು. ೧೯೦೦ನೆಯ ಸಂ| ದ ವೇಳೆಗೆ ಕಾಯಿಲೆಯು ಪ್ರಾಪ್ತವಾಗಿ ದಿನದಿನಕ್ಕೆ ಪ್ರಬಲಿಸತೊಡಗಿತು.—ಆ ಸಂವತ್ಸರದ ಡಿಶಂಬರಿನಲ್ಲಿ ತಮ್ಮ ಉದ್ಯೋಗದಿಂದ ರಜೆಯನ್ನು ಪಡೆದು ಆರೋಗ್ಯಕ್ಕಾಗಿ ಲೋನಾವ್ಲ ಎಂಬ ಸ್ಥಳಕ್ಕೆ ಹೋಗಿ ಕೆಲದಿನಗಳು ಅಲ್ಲಿ ವಾಸಿಸಿದ್ದರು. ೧೯೦೧

ನೆಯ ಜನವರಿ ೧೬ನೆಯದಿನ ಅಲ್ಲಿಂದ ಹಿಂದಿರುಗಿ ಮುಂಬಯಿಗೆ ಬಂದು ವಿಶ್ರಮಿಸಿಕೊಂಡರು. ಆ ದಿನ ತಲುಪಿದ ಒಂದು ತಂತಿಯಿಂದ ಅವರ ಒಬ್ಬ ಮಿತ್ರನು ಮೃತನಾದಂತೆ ತಿಳಿಯಲು, ರಾನಡೇಯವರು-'ಆಹಾ, ಕಾರ್ಯ ತತ್ಪರನಾಗಿದ್ದಾಗಲೇ ಮೃತನಾಗುವುದು ಎಂತಹ ಸೌಭಾಗ್ಯವು! ಎಂತಹ ಸುಖಮರಣವಿದು!" ಎಂದುಕೊಂಡರು. ಆ ದಿನ ಸಾಯಂಕಾಲ ಎಂದಿನಂತೆ ಹವಾಕ್ಕಾಗಿ ಸಂಚಾರ ಹೋಗಿ ಬಂದರು. ರಾತ್ರಿ ಭೋಜನವಾಯಿತು. ಮಲಗುವುದಕ್ಕೆ ಮುಂಚೆ ಎಂದಿನಂತೆ, ಅವರ ತಂಗಿಯು ಅವರಿಗೆ ಪ್ರೀತಿಕರವಾದ ಒಂದು ಕೀರ್ತನೆಯನ್ನು ಹಾಡಿ ಮನರಂಜನೆಮಾಡಿದರು. ಮುಂದೆ ಸ್ವಲ್ಪಹೊತ್ತು ಒಂದೆರಡು ಉತ್ಕೃಷ್ಟ ಗ್ರಂಥಗಳನ್ನು ನೋಡುತ್ತಿರುವಷ್ಟರಲ್ಲೇ ರೋಗವು ಅಕಸ್ಮಾತ್ತಾಗಿ ಪ್ರಬಲಿಸಿ ಹೃದಯದಲ್ಲಿ ಅಸಹ್ಯ ವೇದನೆಯನ್ನುಂಟುಮಾಡಿತು. ಅದನ್ನು ತಡೆಯಲಾರದೆ,—' ಅಕ್ಕಟಾ ಈ ಬಾಧೆಯನ್ನು ನಾನು ಸಹಿಸಲಾರೆ. ಇದಕ್ಕಿಂತಲೂ ಮರಣಬಂದರೂ ಮೇಲು' ಎಂದು ಕಿರಿಚಿಕೊಂಡರು. ಆ ಚೀತ್ಕಾರವನ್ನು ಕೇಳಿದ ಸೌ|| ರಮಾಬಾಯಿ ರಾನಡೆಯವರು ಓಡಿಬಂದು, ತಮ್ಮ ಭರ್ತನ ತಲೆಯನ್ನು ಎತ್ತಿ ತಮ್ಮ ತೋಳಿನಲ್ಲಿಟ್ಟುಕೊಂಡು ಸ್ವಲ್ಪ ಹೊತ್ತು ಕುಳಿತರೆಂಬ ವೇಳೆಗೆ, ಅವರ ಅಂತ್ಯಕಾಲವು ಸಮೀಪಿಸಿತು. ಮಹಾದೇವ ಗೋವಿಂದ ರಾನಡೆಯವರ ಪವಿತ್ರಾತ್ಮವು ದೇಹದಿಂದ ತೊಲಗಿಹೋಯಿತು.



# ಉ ಪ ಸ ಂ ಹಾ ರ

ನ್ಯಾಯಮೂರ್ತಿ ರಾನಡೇಯವರ ಮರಣವಾರ್ತೆಯು ಒಡನೆ ನಗರದಲ್ಲೆಲ್ಲ-ದೇಶದಲ್ಲೆಲ್ಲ ವ್ಯಾಪಿಸಿತು. ದೊಡ್ಡವರು ಬಡವರೆನ್ನದೆ, ವೃದ್ಧರು ಬಾಲಕರೆನ್ನದೆ, ಜಾತಿಭೇದವನ್ನರಿಯದೆ ಅಸಂಖ್ಯ ಜನರು ನೆರೆದು ಅವರ ಶವದಹನ ಸಂಸ್ಕಾರ ಕ್ರಿಯೆಯಲ್ಲಿ ಭಾಗ ತೆಗೆದುಕೊಂಡರು. ದೇಶಸೇವೆಯನ್ನೇ ದೇವರ ಸೇವೆಯೆಂದು ಭಾವಿಸಿದ್ದ ಅವರ ಪವಿತ್ರಾತ್ಮವು ಊರ್ಧ್ವಲೋಕದಲ್ಲಿ ಉತ್ತಮಗತಿಗೆ ಸಂದಂತೆಯೇ, ಉನ್ನತ ಧ್ಯೇಯಸಾಧನೆಯಲ್ಲಿ ಆಜನ್ಮ ಶ್ರಮಿಸಿದ ಆ ದೇಹದ ಶೇಷವಾದರೂ ಅಲಹಾಬಾದಿನಲ್ಲಿ ಗಂಗಾ ಯಮುನಾ ಸರಸ್ವತೀ ನದಿಗಳ ತ್ರಿವೇಣಿ ಸಂಗಮದಲ್ಲಿ ಸಮರ್ಪಿತವಾಗಿ ಸದ್ಗತಿಗೆ ಸಂದಿತು.

ಮುಂಬಯಿಯ ಸರ್ ಫಿರೋಜ್‌ಷಹ ಮೆಹತಾಯವರು ಒಂದಾನೊಂದು ವೇಳೆ–'ಇಂಗ್ಲೆಂಡಿನ ಉತ್ಕೃಷ್ಟತೆಯು ಅದರ ಭೌತಿಕವಿಶ್ವರ್ಯ ಶಕ್ತಿ ಸಾಮರ್ಥ್ಯಗಳಲ್ಲಲ್ಲ.—ಆದರೆ ಮೇಲಿಂದಮೇಲೆ ಧೀಮಣಿಗಳೂ ಶೌರ್ಯ ಸಂಪನ್ನರೂ, ಸ್ವಾರ್ಥತ್ಯಾಗಿಗಳೂ ಆದ ಮಹನೀಯ ವ್ಯಕ್ತಿಗಳನ್ನು ಹೆತ್ತು ಒದಗಿಸುವ ಅದರ ಸಾಮರ್ಥ್ಯದಲ್ಲಿದೆ' ಎಂದು ಹೇಳಿದರು. ಭಾರತದೇಶದ ಸಾಮರ್ಥ್ಯವಾದರೂ ನಮ್ಮ ಕಥಾನಾಯಕರಂತಹ ಅಮೌಲ್ಯಜೀವರತ್ನಗಳನ್ನು ಹೆರುವುದರಲ್ಲಿ ಇದೆಯೆಂದು ಹೇಳಲು ಸಂದೇಹವೇನು?

ಭಾರತದೇಶವೂ,–ಕರ್ಣಾಟಕವೂ ಮೇಲೆ ಮೇಲೆ ಇಂತಹ ಅಪೂರ್ವ ವ್ಯಕ್ತಿಗಳನ್ನು ಪ್ರಸಾದಿಸುತ್ತಾ ಬರಲಿ! ದೇಶೀಯ ತರುಣರು ಇಂತಹ ಮಹಾನ್ ವ್ಯಕ್ತಿಗಳ ದಿವ್ಯ ಜೀವಿತಗಳನ್ನು ಅನುಕರಿಸಿ ನಡೆದು ದೇಶೋದ್ಧಾರಕರಾಗಲಿ! ಸರ್ವೇಶ್ವರನು ಕೃಪಾಕಟಾಕ್ಷವಿಟ್ಟು ನಮ್ಮವರಲ್ಲಿ ಧೈರ್ಯ ಸಾಮರ್ಥ್ಯಗಳನ್ನೂ, ನಿಸ್ಪೃಹತೆ ದೇಶಾಭಿಮಾನ ಧರ್ಮಾಭಿಮಾನಗಳನ್ನೂ ಅನುಗ್ರಹಿಸಿ ರಕ್ಷಿಸಲಿ.

**ತಥಾಸ್ತು**

॥ ಶ್ರೀರಾಮಸಹಾಯಂ ॥

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸ ಪುಸ್ತಕಾವಳಿ)

**ಮುನ್ನುಡಿ :—**

ಯಾವ ಮಹಾಪುರುಷರು, ದಿನದ ಅರುವತ್ತು ಗಳಿಗೆಯಲ್ಲೂ ಕೇವಲ ಆತ್ಮಾನಂದದಲ್ಲಿ ಲೀನರಾಗಿ, ನಿಶ್ಚಿಂತರಾಗಿ, ನಿರ್ಲಿಪ್ತರಾಗಿ, ನಿತ್ಯತೃಪ್ತರಾಗಿ, ಪ್ರೇಮಪೂರ್ಣರಾಗಿ - ಪಾಂಚಭೌತಿಕ ದೇಹದಲ್ಲಿ ಸಿಲುಕಿದ್ದರೂ, ಸದಾ ಬ್ರಹ್ಮಮಯ ಮನಸ್ಥಿತಿಯಲ್ಲೇ ವಾಸಿಸಿದ್ದರೋ, ಆ ನಮ್ಮ ಪ್ರಕೃತ ಕಥಾ ನಾಯಕರಾದ ಶ್ರೀ ಸ್ವಾಮಿ ರಾಮತೀರ್ಥರ ಜೀವಿತವನ್ನೂ - ಅನುಭವಗಳನ್ನೂ ಲೌಕಿಕವಾಗಿ ಲೌಕಿಕಭಾಷೆಯಲ್ಲಿ ಹೇಳಲೆತ್ನಿಸುವುದು ಬಹು ಸಾಹಸದ ಕಾರ್ಯವು! ಅಲ್ಲದೆ, ನವಜೀವನ ಪ್ರದವಾದ ಮಧುರ ರಸದಿಂದ ತುಂಬಿ ವರ್ಷಕಾಲದ ವಾರಿಧಾರೆಯಂತೆ ಆಂಗ್ಲೇಯ ಭಾಷಾ ಮೂಲಕ ಸುರಿಯುತ್ತಿದ್ದ ಆ ಜೀವನ್ಮುಕ್ತರ ಅಮೌಲ್ಯ - ಅಪೂರ್ವ ಭಾವನಾವಿಶೇಷಗಳನ್ನು ಕನ್ನಡ ಭಾಷೆಯಲ್ಲಿ ಹೇಳುವುದೂ ಸುಲಭದ ಮಾತಲ್ಲ. ಪರವಶರಾಗಿ ಧ್ಯಾನಮಗ್ನರಾಗಿ ಅರೆದೆರೆದ ಕಣ್ಣುಗಳಿಂದ ಕುಳಿತಿರುತ್ತಿದ್ದಾಗ್ಗೆ, ಅವರ ವದನಾರವಿಂದದಿಂದ - ಉಕ್ಕಿ ಹರಿಯುವ ಗಂಗಾಪ್ರವಾಹದಂತೆ ಕೇವಲ ಅನುಭವೈಕವೇದ್ಯವಾಗಿ, ತಾನೇತಾನಾಗಿ ಹೊರಟ ಆನಂದ ತರಂಗಗಳ ಮೇಲೆ ತೇಲಿ ಬರುತ್ತಿದ್ದ ಕಮಲ ಪುಷ್ಪಗಳೋ ಎಂಬಂತಿರುವ ಅವರ ಆಂಗ್ಲೇಯ ಕವಿತಾ ಕುಸುಮಗಳ ಸೌರಭ್ಯದ ಮಾಧುರ್ಯವನ್ನಾದರೂ ನಮ್ಮ ಬಡಲೇಖನಿಯು ಏನೆಂದು ವರ್ಣಿಸಿ ತಿಳಿಸಬಲ್ಲುದು! ಆದರೂ ಸಹಸ್ರಾರು ವರ್ಷಗಳಿಗೊಂದುವೇಳೆ ಕೋಟ್ಯಾಂತರ ಪ್ರಜಾ ಸಮೂಹಕ್ಕೊಬ್ಬರಂತೆ ಭೂಲೋಕದಲ್ಲಿ ಜನ್ಮಗ್ರಹಣಮಾಡುವ ಇಂತಹ ಮಹಾಪುರುಷರ ಚರಿತ್ರೆಯು ಎಷ್ಟು ಅಪೂರ್ಣ ರೀತಿಯಿಂದ ದೊರೆತರೂ ಅದು ಇತರರಿಗೆ ಮಾರ್ಗದರ್ಶಕವಾಗಲು ಸಹಕರಿಸುವುದರಲ್ಲಿ ಸಂಶಯವಿಲ್ಲ. ಆದುದರಿಂದ ಆರ್ಯಜನಾಂಗವೃಕ್ಷದಲ್ಲಿ ಬಿಟ್ಟ ಅಮೃತಫಲವೋ ಎಂಬಂತೆ ಪಂಜಾಬುದೇಶದಲ್ಲಿ ಜನ್ಮಿಸಿ ಪ್ರಖ್ಯಾತರಾದ ಈ ಮಹಾಪುರುಷರ ಜೀವಿತವನ್ನು ನಮ್ಮ ಕರ್ಣಾಟಕ ಭ್ರಾತೃ ಭಗಿನಿಯರ ಪರಿಚಯಕ್ಕಾಗಿ ಈ ಚಿಕ್ಕ ಪುಸ್ತಕದಲ್ಲಿ ಸಾಧ್ಯವಿರುವ ಮಟ್ಟಿಗೆ ಕೊಡಲೆಳೆಸುತ್ತೇವೆ. (ಇವರ ವಿಸ್ತಾರ ಜೀವಿತ ಚರಿತ್ರೆಯನ್ನು ಪಠಿಸಲಪೇಕ್ಷಿಸುವ ಆಂಗ್ಲೇಯ ಭಾಷಾಭಿಜ್ಞರು

ಶ್ರೀಯುತ ಪೂರಣ್‌ಸಿಂಗರಿಂದ ವಿರಚಿತವಾಗಿರುವ "ದಿ ಸ್ಟೋರಿ ಆಫ್ ಸ್ವಾಮಿ ರಾಮ" ಎಂಬ ಗ್ರಂಥರತ್ನವನ್ನು ಮದ್ರಾಸಿನ ಮೆಸರ್ಸ್ ಗಣೇಶ್ ಅಂಡ್ ಕೋ ಇವರಿಂದ ಪಡೆದು ಕೃತ್ಯಕೃತ್ಯರಾಗಬಹುದು.

ಸದ್ಯಃ ಕಾಲದ ಪ್ರಪಂಚ ಸ್ಥಿತಿಯನ್ನು ಕುರಿತು ಯೋಚಿಸಿದರೆ, ಅಮೇರಿಕಾ ಖಂಡವನ್ನು ಲಕ್ಷಾಧೀಶ ಕೋಟ್ಯಾಧೀಶರ ದೇಶವೆಂದೂ, ಇಂಗ್ಲೆಂಡು ದೇಶವನ್ನು ವ್ಯಾಪಾರಿಗಳ ಮತ್ತು ರಾಜ್ಯಾಧಿಕಾರಿಗಳ ದೇಶವೆಂದೂ, ಜಪಾನ್ ದೇಶವನ್ನು ಕುಶಲಕಲಾ ಪರಿಶ್ರಮಿಗಳ ದೇಶವೆಂದೂ ಹೇಳಬಹುದು! ಆದರೆ ಭಾರತ ದೇಶವನ್ನು ಏನೆಂದು ಕರೆಯಬಹುದು? ಅದಕ್ಕೆ ಐಶ್ವರ್ಯದ ಪ್ರತಿಭೆಗೆ ಮಾರ್ಗವಿಲ್ಲ. ಪರಕೀಯರ ಧಾಳಿಗೊಳಪಟ್ಟು ಒಳಲುತ್ತಿರುವುದರಿಂದ ಅಧಿಕಾರ ಸಂಪತ್ತಿಯು ಅದಕ್ಕಿಲ್ಲ, ಜಗತ್ತಿನ ಜನಾಂಗಗಳ ಮಧ್ಯೆ ಸ್ವತಂತ್ರ ವ್ಯಕ್ತಿತ್ವವಿಲ್ಲದುದರಿಂದ ಅದಕ್ಕೆ ಲಾಭಕರವಾದ ವ್ಯಾಪಾರ ವಿಷಯದಲ್ಲಿ ಪ್ರವೇಶವಿಲ್ಲ. ಇನ್ನು ಅದಕ್ಕೆ ಉಳಿದುದೆಂದರೆ ಖರ್ಚು ವೆಚ್ಚವಿಲ್ಲದ ವೈರಾಗ್ಯವೊಂದು! ಅದೊಂದು ಅನಾದಿಕಾಲದಿಂದಲೂ ಈ ದೇಶದ ಆಸ್ತಿಯಾಗಿದೆ. ಈ ಆಸ್ತಿಯನ್ನು ಪಡೆಯಲಪೇಕ್ಷಿಸಿದರೆ, ಮೇಲ್ಕಂಡ ಧನ ಪದವಿ ಅಧಿಕಾರ ಮುಂತಾದ ಸಮಸ್ತ ಲೌಕಿಕ ವ್ಯವಹಾರಗಳನ್ನೂ ಬಿಡಬೇಕಾಗುತ್ತದೆ. ಪ್ರಾಪಂಚಿಕ ವಸ್ತುಗಳಾದ ಮೇಲ್ಕಂಡ ಐಶ್ವರ್ಯ ಅಧಿಕಾರ ಮುಂತಾದುಗಳನ್ನು ಗಳಿಸಲಾರದೆ ಅಲ್ಲ - ಅವುಗಳ ಅಶಾಶ್ವತ ಸ್ಥಿತಿಯನ್ನು ಅನುಭವ ಪೂರ್ವಕವಾಗಿ ತಿಳಿದ ಭಾರತ ದೇಶದ ಪುರಾಣ ಪುರುಷರು, ಮಾನವ ಜೀವಿತದಲ್ಲಿನ ಇತರ ಎಲ್ಲಾ ವಿಚಾರಗಳಿಗಿಂತಲೂ ಈ ವೈರಾಗ್ಯಕ್ಕೇ ಹೆಚ್ಚು ಬೆಲೆ ಕೊಟ್ಟರು. ವೈರಾಗ್ಯವು ಭಕ್ತಿ ಜ್ಞಾನಗಳನ್ನು ಗಳಿಸಲು ಅತಿಮುಖ್ಯ ಸಾಧನವು. ಭಕ್ತಿಜ್ಞಾನಗಳು ಜನ್ಮಸಾರ್ಥಕ್ಯಕ್ಕೆ ಪರಮಾವಶ್ಯಕ ಸಾಮಾಗ್ರಿಗಳು. ಮನುಷ್ಯನಾಗಿ ಜನ್ಮವೆತ್ತಿದವನು ಈ ಜನ್ಮ ಸಾರ್ಥಕಸಾಮಾಗ್ರಿಗಳನ್ನು ಗಳಿಸದಿದ್ದ ಮೇಲೆ ಎಷ್ಟು ಕಾಲ ಬದುಕಿದರೆ ತಾನೇ ಏನು ಪ್ರಯೋಜನಕ್ಕಾಗಿ? ಎಷ್ಟು ಧನ ರಾಜ್ಯ ಪದವಿಗಳನ್ನು ಗಳಿಸಿದರೆ ತಾನೇ ಯಾವ ಸಾರ್ಥಕಕ್ಕಾಗಿ? ಅಲ್ಲ - ಎಷ್ಟು ವಿದ್ಯಾಬುದ್ಧಿ, ಕಲಾ ಕುಶಲತೆಗಳಲ್ಲಿ ಪ್ರವೀಣನೆನಿಸಿದರೆ ತಾನೇ ಯಾವ ಪ್ರತಿಫಲಕ್ಕಾಗಿ?--

ಆದುದರಿಂದಲೇ ಭಾರತದೇಶವು ಅನಾದಿಕಾಲದಿಂದಲೂ, ಆತ್ಮನಾಶಕ ಸಾಮಾಗ್ರಿಗಳಾದ ಕಾಮ ಕ್ರೋಧ ಲೋಭಾದಿಗಳನ್ನು ಹೆಚ್ಚಿಸುವಂತಹ

ಪ್ರಾಪಂಚಿಕ ವಸ್ತುಸಾಮಗ್ರಿಗಳನ್ನು ಗಳಿಸುವ ಧ್ಯೇಯವನ್ನು ಮಾನಸಿಕವಾಗಿ, ಆತ್ಮಾನಂದ ಪ್ರದಾಯಕಗಳಾದ ಭಕ್ತಿ ಜ್ಞಾನ ವೈರಾಗ್ಯಾದಿಗಳನ್ನು ಆಶ್ರಯಿಸಿತು. ಆದರೆ, 'ಸಂಗಾತ್ ಸಂಜಾಯತೇ ಕಾಮಃ' ಎಂಬ ಗೀತಾವಚನಾನುಸಾರವಾಗಿ, ಪರಕೀಯರ ಸಹವಾಸದಿಂದ ಭಾರತ ದೇಶೀಯರ ಮೇಲ್ಕಂಡ ದಿವ್ಯತತ್ವವು ಕಾಲ ಕ್ರಮದಲ್ಲಿ ಅತಿ ಕಲುಷಿತವಾಯಿತು. ಈ ಸ್ಥಿತಿಯಲ್ಲೇ ದೇಶವೂ ಪರಾಧೀನವಾಗಿ ಬಡತನವು ಎಡೆಬಿಡದೆ ಸರ್ವತ್ರ ವ್ಯಾಪಿಸಲು, ಜೀವನೋಪಾಯಕ್ಕೆ ಮಾರ್ಗತೋರದೆ ಕಂಗೆಟ್ಟ ಜನ ಸಾಮಾನ್ಯರನೇಕರು, ಅಪಭ್ರಂಶ ರೀತಿಯಿಂದ ಈ ವೈರಾಗ್ಯ ಮಂತ್ರವನ್ನೇ ಕೈಕೊಂಡು ಜಪಿಸತೊಡಗಿದರು. ದೇಶದಲ್ಲಿ ಎಲ್ಲಿನೋಡಿದರೂ ಬೈರಾಗಿ (ವಿರಾಗಿ)ಗಳೇ! ಸನ್ಯಾಸಿಗಳೇ! ಅಭಾವ ವೈರಾಗ್ಯವೆಂಬ, ಹೀಗೆ ಹಬ್ಬಿದ ಜೊಂಡೂ ಪಾಚಿಯೂ ವಿಶೇಷವಾಗಿ ಬೆಳೆದು ಬಂದು ಭಾರತದೇಶ ಸರೋವರದಲ್ಲಿ ನಿಶ್ಚಯವಾದ ವೈರಾಗ್ಯ - ಸನ್ಯಾಸಗಳೆಂಬ ತಿಳಿನೀರೇ ಕಾಣಿಸದಂತಾಯಿತು. ಅವುಗಳ ಬೆಲೆ - ಗೌರವಗಳೇ ಬಹು ಲಘುವಾದುವು. 'ಸೋಽಹಂ' 'ಅಹಂ ಬ್ರಹ್ಮಾಸ್ಮಿ' ಮುಂತಾದ ಅಮೌಲ್ಯ ಮಹಾವಾಕ್ಯಗಳು ಸರ್ವ ಸುಲಭವಾದುವು. ನ್ಯಾಯವಾದ ಪರಿಶ್ರಮಮಾಡಿ ಲೌಕಿಕವನ್ನು ಸಾಗಿಸಲರಿಯದ ಹೇಡಿಯೂ, ಕಾವಿ ಬಟ್ಟೆಯನ್ನುಟ್ಟು 'ನಾನೇ ಬ್ರಹ್ಮನು - ನಾನೇ ದೇವರು' ಎಂದುಕೊಂಡು, ಪವಿತ್ರವಾದ ಸನ್ಯಾಸ ಧರ್ಮವನ್ನೂ ವೈರಾಗ್ಯದ ಅಮೌಲ್ಯಪದವಿಯನ್ನೂ ಅಣಕಿಸುವಂತಹ ಅಧಮ ಸ್ಥಿತಿಯು ಪ್ರಾಪ್ತಿಸಿತು. ಆಗ ಅದೇ ಸರೋವರದಲ್ಲೇ - ಅದೇ ಜೊಂಡು ಪಾಚಿಗಳ ಮಧ್ಯದಲ್ಲೇ ಒಂದು ಕಮಲನಾಳವು ಕಾಣಿಸಿಕೊಂಡಿತು. ಅದರಲ್ಲೊಂದು ಮೊಗ್ಗು ದೃಷ್ಟಿಗೋಚರವಾಯಿತು. ಅದು ಕ್ರಮಕ್ರಮವಾಗಿ ಬೆಳೆದುಬಂದು ಯುಕ್ತಕಾಲದಲ್ಲಿ ವಿಕಸಿತವಾಯಿತು. ನೂತನವೂ ಪವಿತ್ರವೂ ಆದ ಆ ಕಮಲಪುಷ್ಪದ ಕಾಂತಿಯೂ ನೇತ್ರಾನಂದಕರವಾದ ಅದರ ವರ್ಣವೂ ಸಕಲರ ದೃಷ್ಟಿಯನ್ನೂ ತನ್ನೆಡೆಗೆ ಆಕರ್ಷಿಸಿತು. ಅದರ ಮೇಲೆ ಹಾಯ್ದು ಬೀಸಿದ ವೇದ ಶಾಸ್ತ್ರ ಪುರಾಣ ಇತಿಹಾಸಾದಿಗಳ ಅವಿನಾಶಿ ದಿವ್ಯತತ್ವಗಳೆಂಬ ತಂಗಾಳಿಯು, ಅದೊಂದು ಬಗೆಯ ನೂತನ ಮನೋಹರ ಸುವಾಸನೆಯನ್ನು ತಂದಿತ್ತು ಜನ ಮನಕ್ಕೆ ಪರಮಾಹ್ಲಾದವನ್ನುಂಟುಮಾಡಿತು. ಆ ಕುಸುಮರಾಜವು ಹೀಗೆ ಹುಟ್ಟಿ ಬೆಳೆದು ಅರಳಿ, ದೇಶಾಂತರ

ಖಂಡಾಂತರಗಳವರೆಗೂ ತನ್ನ ಸುವಾಸನೆಯನ್ನು ಬೀರಿ-ಶಿಷ್ಟ್ಯತನ್ಯಗೊಂಡು ಬಿದ್ದಿದ್ದ ಅನೇಕಾನೇಕ ಮಾನವ ಪ್ರಾಣಿಗಳಿಗೆ ತನ್ನ ಮಧುರಸೌರಭದಿಂದ ನವಚೈತನ್ಯವನ್ನು ತಂದಿತ್ತು, ಕೊನೆಗೊಂದುದಿನ ಬಾಡಿ ಅಸ್ತಮಿಸಿದ ಕಥೆಯು ಈ ಚಿಕ್ಕ ಪುಸ್ತಕದಲ್ಲಿ ಕನ್ನಡಿಗರ ಸೇವೆಗಾಗಿ ಕೊಡಲ್ಪಡುವುದು.

"ಸ್ವಾಮಿ ರಾಮತೀರ್ಥರ ಸನ್ಯಾಸವು, ಸನ್ಯಾಸಿಗಳೆಂದು ಹೇಳಿಕೊಳ್ಳುವ ಈಗಿನ ಅನೇಕರ ಆಚರಣೆಗೆ ಆದರ್ಶಭೂತವಾಗಿದೆ. ಅವರ ತಪಸ್ಸಾಮರ್ಥ್ಯವೂ ಇಂದ್ರಿಯ ನಿಗ್ರಹಣವೂ ಪ್ರಶಂಸನೀಯವಾಗಿವೆ" ಎಂದು ಅವರು ನಿಧನರಾದ ಸಂದರ್ಭದಲ್ಲಿ ಬ್ರಹ್ಮೀಭೂತ ಶ್ರೀ ಸ್ವಾಮಿ ಶ್ರದ್ಧಾನಂದರು ಅಭಿಪ್ರಾಯಪಟ್ಟಿದ್ದರು. ಕೇವಲ ಅವರ ಸನ್ಯಾಸಾಶ್ರಮ ಮಾತ್ರವಲ್ಲ! ಅವರ ವಿದ್ಯಾರ್ಥಿಜೀವನವೂ, ವಿದ್ಯಾಭ್ಯಾಸಪದ್ಧತಿಯೂ, ಗೃಹಸ್ಥ-ವಾನಪ್ರಸ್ಥ ಆಶ್ರಮಗಳೂ ಅತ್ಯಂತ ಬೋಧಪ್ರದವೂ ಅನುಕರಣೀಯವೂ ಆಗಿವೆ. ಅದ್ವೈತ ಸಿದ್ಧಾಂತವನ್ನು ಅವರು ತರ್ಕವಾದಕ್ಕಾಗಿಯಲ್ಲ - ತಮ್ಮ ನಿತ್ಯಾಚರಣೆಗೆ ಇಟ್ಟುಕೊಂಡು, ವಾಸ್ತವ ರೀತಿಯಿಂದ ತೃಣಕಾಷ್ಠಾದಿಗಳಿಂದ - ಪಶುಪಕ್ಷಿ ಕ್ರಿಮಿಕೀಟಾದಿಗಳಿಂದ, ಮನುಷ್ಯರವರೆಗಿನ - ಚಂದ್ರ ಸೂರ್ಯ ನಕ್ಷತ್ರಾದಿ ಜ್ಯೋತಿಶ್ಚಕ್ರಗಳವರೆಗಿನ ಸಮಸ್ತವನ್ನೂ ಕೇವಲ ಬ್ರಹ್ಮಭಾವದಿಂದಲೇ ಕಾಣುತ್ತಿದ್ದರು,— ತಿಳಿಯುತ್ತಿದ್ದರು, ಅಲ್ಲಲ್ಲ ಅನುಭವ ಮಾಡುತ್ತಿದ್ದರು. ಅವರ ದೃಷ್ಟಿಯಲ್ಲಿ ಅಲ್ಪತೆ-ಆಧಿಕ್ಯತೆ, ಉತ್ತಮ-ನೀಚಭಾವಗಳೆಂಬುವೇ ಇರಲಿಲ್ಲ. ಸರ್ವವೂ ಅವರ ದೃಷ್ಟಿಗೆ ಪರಿಪೂರ್ಣಸ್ಥಿತಿಯಲ್ಲೇ, ಸೌಂದರ್ಯ ಪೂರ್ಣಸ್ಥಿತಿಯಲ್ಲೇ ಗೋಚರಿಸುವುದು.

ಇಂತಹ ಮಾನವಶ್ರೇಷ್ಠರ ಉದಯವು ಪ್ರಪಂಚದಲ್ಲಿ ಅತ್ಯಪೂರ್ವವಾಗಿ ಆಗುವುದು. ಅವರು ಅಲ್ಪಕಾಲ ಮಾತ್ರವೇ ಜೀವಿಸಿದ್ದರೂ ಲೋಕಕ್ಕೆ ಅಗಾಧ ಶ್ರೇಯಸ್ಸನ್ನುಂಟುಮಾಡುವರು. ಅವರ ಈ ಪವಿತ್ರ ಚರಿತ್ರೆಯನ್ನೂ ಕರ್ಣಾಟಕ ಬಾಂಧವರು ಯಥಾಪೂರ್ವ ಪ್ರೇಮದಿಂದ ಸ್ವೀಕರಿಸಿ ಗ್ರಂಥಮಾಲೆಯನ್ನು ಪ್ರೋತ್ಸಾಹಿಸಲೆಂದು ಕೋರುತ್ತೇವೆ.

ಬೆಂಗಳೂರು ನಗರ }
ತಾ|| ೩೧-೫-೧೯೩೮ }

ಇತಿ ಸುಜನ ವಿಧೇಯ,
ಯಂ. ರಾಮರಾವ್.

---

ಶ್ರೀರಾಮಸಹಾಯಂ

ಶ್ರೀ

# ಸ್ವಾಮಿ ರಾಮತೀರ್ಥರು

ನಮ್ಮ ಮಾತೃಭೂಮಿಯಾದ ಈ ಭಾರತದೇಶದಮೇಲೆ ಭಗವಾನನ ಕರುಣಾಮಯ ಕಟಾಕ್ಷವು ಪ್ರವಹಿಸುತ್ತಿದೆ. ಭಗವತ್ಕಟಾಕ್ಷವಿಲ್ಲದಿದ್ದರೆ ಮಾನವನಿಗಾಗಲಿ-ಜನಾಂಗಕ್ಕಾಗಲಿ ಸದ್ಗತಿಯುಂಟಿರಲಿ, ಶುಭೇಚ್ಛೆಯೂ ಉಂಟಾಗದು, ಸಜ್ಜನ ಸಮಾಗಮವಾಗದು; ಮಹತ್ವ ವಿಚಾರಗಳಲ್ಲಿ ಪ್ರವೇಶವೂ ಉಂಟಾಗದು. ನಮ್ಮ ದೇಶವು ತನ್ನ ಪೂರ್ವದ ಮಹೋನ್ನತ ಸ್ಥಿತಿಯಿಂದ ನರಕ ಸದೃಶವಾದ ಇಂತಹ ಅವನತ ಸ್ಥಿತಿಗಿಳಿದುಬಂದು ಬಹು ಕಾಲಗಳಾದ ಮೇಲೆ, ಇಂದು-ಈಗೀಗ ನಾವಿರುವ ಈ ಅಧಮ ಸ್ಥಿತಿಯಿಂದ ಉನ್ನತಿಗೊಂಡು ಸ್ವಾತಂತ್ರ್ಯ ಸಾಮ್ರಾಜ್ಯವನ್ನು - ಬಂಧ ಮುಕ್ತತೆಯನ್ನು ಗಳಿಸಬೇಕೆಂಬ ಶುಭೇಚ್ಛೆಯು ಅದ್ಯಂತ ದೇಶಕ್ಕೇ ತಲೆದೋರಿದೆ. ಈಗಲೀಗ ಈ ವಿಷಯದಲ್ಲಿ ಮಾರ್ಗದರ್ಶಕರೂ ಹಿತಬೋಧಕರೂ ಆದ ಮಹನೀಯರನೇಕರು ಜನ್ಮಿಸಿದರು-ಜನ್ಮಿಸುತ್ತಿದ್ದಾರೆ. ಈಗಲೀಗ ನಮ್ಮವರಲ್ಲೂ ಸತ್ಯ ಧರ್ಮ ನ್ಯಾಯ ಇಂದ್ರಿಯನಿಗ್ರಹ ಸ್ವಾರ್ಥತ್ಯಾಗ ಮುಂತಾದ ವಿಚಾರಗಳಲ್ಲೂ ಗೀತಾಶಾಸ್ತ್ರವೇ ಮುಂತಾದ ಆಪ್ತವಾಕ್ಯಗಳಲ್ಲೂ ಕ್ರಮಕ್ರಮವಾಗಿ ಶ್ರದ್ಧಾಭಕ್ತಿಗಳು ಉಂಟಾಗಿ ದಿನದಿನಕ್ಕೆ ಬೆಳೆಯುತ್ತಿವೆ. ಅದ್ಯಂತ ದೇಶವೇ ಜಾಗೃತಿಗೊಂಡು ಅಭಿವೃದ್ಧಿಯ ಕಡೆಗೆ ನಡೆಯುತ್ತಿರುವಂತೆ ಗೊತ್ತಾಗಿ ಕಂಡುಬರುತ್ತಿದೆ. ಆದುದರಿಂದ 'ನಮ್ಮ ಮಾತೃಭೂಮಿಯ ಮೇಲೆ ಭಗವಾನನ ಕಟಾಕ್ಷವಿದೆ' ಎಂಬ ಮೊದಲ ನಮ್ಮ ಹೇಳಿಕೆಯು ವ್ಯರ್ಥಾಲಾಪವಲ್ಲ - ಕೇವಲ ಅಲಂಕಾರಿಕವೂ ಅಲ್ಲ.—

ಮನುಷ್ಯನು ಮಾಡುವ ಸಕಲ ಕಾರ್ಯಗಳಿಗೂ ಅವನವನ ಯೋಚನೆಯೇ ಕಾರಣವೆಂದು ನಾವು ಹೇಳುತ್ತೇವಲ್ಲವೆ! ಆ ಯೋಚನೆಗೂ ಒಂದು ಮೂಲಕಾರಣವುಂಟು. ಅದೇ ಇಷ್ಟೆಯೆಂಬುದು! ಇಷ್ಟೆಯನ್ನು ಅನುಸರಿಸಿ ಮನುಷ್ಯನು ಒಂದು ಕಾರ್ಯವನ್ನು ಮಾಡುತ್ತೇನೆಂದು ದೃಢಸಂಕಲ್ಪಮಾಡುವನು. ಅದನ್ನನುಸರಿಸಿ ಕಾಲಾನುಸಾರವಾಗಿ ಉಂಟಾಗುವ ಯೋಚನೆಯಂತೆ ಕಾರ್ಯವು ನಡೆಯುತ್ತಾ ಹೋಗುವುದು. ಹೀಗೆ ಎಲ್ಲಕ್ಕೂ ಮೂಲಸೂತ್ರವಾದ ಈ ಇಷ್ಟೆಯೆಂಬ ಕೀಲು ಭಗವದಧೀನವಾದುದು. ಮನುಷ್ಯನು ಸತ್ಕಾರ್ಯವನ್ನಾಗಲೀ-ದುಷ್ಕಾರ್ಯವನ್ನಾಗಲೀ ಮಾಡುವಾಗ ಭಗವಂತನು ರೂಪುಧಾರಣಮಾಡಿ ಎದುರಿಗೆ ಬಂದು ನಿಂತು ಕೈಹಿಡಿದುಮಾಡಿಸಬೇಕಾದುದಿಲ್ಲ! ಅಂತರ್ಯದಲ್ಲುಂಟಾಗುವ ಈ ಇಷ್ಟೆಯ ಕೀಲನ್ನು ಲೇಶಮಾತ್ರ ಚಲಿಸಗೊಡಿಸಿದರೆ ಆಯಿತು. ಅದರ ಪರಂಪರೆಯಲ್ಲಿ ಮಹತ್ತಾದ ಸತ್ಕಾರ್ಯವೋ ಅಥವ ಅಗಾಧ ದುಷ್ಕಾರ್ಯವೋ ನಡೆದು, ತನ್ಮೂಲಕ ಆ ಪ್ರಾಣಿಯು ಶಾಶ್ವತ ಸುಖವನ್ನೋ ಅಥವ ನಿರಂತರ ದುಃಖವನ್ನೋ ಹೊಂದಲು ಅವಕಾಶವಾಗುವುದು. ಭಗವಾನನು ಅಗೋಚರನಾಗಿದ್ದು ಕೇವಲ ಪ್ರೇರಕನಾಗಿದ್ದು, ಇಂತಹ ಕಾರ್ಯಗಳನ್ನು ಜಗದ ಜೀವಕೋಟಿಗಳಿಂದ ಸದಾಕಾಲದಲ್ಲೂ ಮಾಡಿಸುತ್ತಿದ್ದರೂ ಕೆಲಕೆಲವು ಸಂದರ್ಭಗಳಲ್ಲಿ ಗೊತ್ತಾದ ಉದಾಹರಣೆಗಳ ಮೂಲಕ ವ್ಯಕ್ತಿ ಅಥವ ಜನಾಂಗಕ್ಕೆ ಉನ್ನತಿಯ ಮಾರ್ಗಗಳನ್ನು ಸೂಚಿಸುವುದೂ ಅವನತಿಯ ಮಾರ್ಗಗಳಲ್ಲಿ ನಡೆಯದಂತೆ ಎಚ್ಚರಕೊಡುವುದೂ ಆವಶ್ಯಕವಿರುವುದು. ಅಂತಹ ಕಾಲಗಳಲ್ಲೇ ಭಗವದಾಜ್ಞಾನುಸಾರವಾಗಿಯೋ ಎಂಬಂತೆ ಭಗವದ್ಭಕ್ತರಾದ ಮಹನೀಯರು ಉದಯಿಸಿ, ತಮ್ಮ ಆದರ್ಶರೂಪೀಜೀವಿತದಿಂದಲೂ, ನವಜೀವನ ಪ್ರದವಾದ ಬೋಧನೆಗಳಿಂದಲೂ ಜನಾಂಗದ ಇಷ್ಟೆ-ಆಶಯಗಳನ್ನು ವ್ಯತ್ಯಸ್ತಗೊಳಿಸುವರು. ಅಷ್ಟೆ! ಅವರೇನು ಧನಕನಕಾದಿಗಳನ್ನು ಹೊತ್ತು ತಂದು ಕೊಡುವುದಿಲ್ಲ. ದವಸಧಾನ್ಯಾದಿಗಳನ್ನು ಬೆಳೆದು ಕೈಯಲ್ಲಿಡುವುದಿಲ್ಲ. ಅವರು ಕೇವಲ ಭಾವನೆಗಳನ್ನು ಮಾತ್ರ, ಇಷ್ಟೆ-ಆಶಯಗಳನ್ನು ಮಾತ್ರ ಶುದ್ಧಗೊಳಿಸುವರು. ಮುಂದೆ ಅವರಿಗೆ ಅಧೋಮುಖವಾಗಿದ್ದ ಸ್ಥಿತಿಗತಿಗಳೆಲ್ಲವೂ ಉನ್ನತಿಯ ಮಾರ್ಗವನ್ನು ಕುರಿತು ಗಮಿಸತೊಡಗುವುವು. ಹತ್ತೊಂಬತ್ತು

ನೆಯ ಶತಮಾನದ ಅಂತ್ಯಭಾಗದಲ್ಲಿ ಜನಿಸಿ ಭಾರತದೇಶೋದ್ಧಾರಕ್ಕಾಗಿ ಹೀಗೆ ಶ್ರಮಿಸಿದವರಲ್ಲಿ ನಮ್ಮ ಕಥಾನಾಯಕರು ರತ್ನಪ್ರಾಯರು. ಅವರ ಲೌಕಿಕ ಪಾರಲೌಕಿಕ ವಿದ್ಯಾಪ್ರೌಢಿಮೆಯೂ ಭಗವದ್ಭಕ್ತಿ ಜ್ಞಾನ ವೈರಾಗ್ಯಾದಿಗಳೂ, ಆತ್ಮಜ್ಞಾನಾನುಭವಗಳೂ, ಇವೆಲ್ಲವುಗಳ ಫಲಸ್ವರೂಪವಾಗಿ ಅವರ ಮುಖದಿಂದ ಹೊರಡುತ್ತಿದ್ದ ಬೋಧನಾಮೃತವೂ ಅನುಪಮೇಯವಾದುವು. ಅಪೂರ್ವವಾದುವು.—



## — ವಂಶ ಪಾವಿತ್ರ್ಯತೆ —

ನಮ್ಮ ಕಥಾನಾಯಕರು ಪಂಜಾಬುದೇಶದ ಸುಪ್ರಸಿದ್ಧ ಕವಿಶೇಖರರಾದ ಶ್ರೀ ಗೋಸ್ವಾಮಿ ತುಲಸೀದಾಸರ ವಂಶದಲ್ಲಿ ಜನಿಸಿದವರು. ತುಲಸೀದಾಸರಾದರೋ ಶ್ರೀಮದ್ರಾಮಾಯಣ ಗ್ರಂಥಕರ್ತರಾದ ಆದಿಕವಿ ಶ್ರೀಮದ್ವಾಲ್ಮೀಕಿ ಮಹರ್ಷಿಗಳ ಅವತಾರವೆಂಬ ಪ್ರತೀತಿಯುಂಟು. ಈ ಕವಿಶ್ರೇಷ್ಠರಿಂದ ರಚಿತವಾದ 'ಶ್ರೀ ರಾಮಚರಿತ ಮಾನಸ' ವೆಂಬ ಹಿಂದೀ ರಾಮಾಯಣವು ಪ್ರಪಂಚದ ಸರ್ವಶ್ರೇಷ್ಠಗ್ರಂಥಗಳಲ್ಲಿ ಒಂದೆಂಬ ಪ್ರಖ್ಯಾತಿಗೆ ಪಾತ್ರವಾಗಿದೆ. ಶ್ರೀ ತುಲಸೀದಾಸರ ರಾಮಭಕ್ತಿಯು ಅನಿರ್ವಚನೀಯವಾದುದು; ರಾಮಭಕ್ತಾಗ್ರಣಿ ಆಂಜನೇಯನ ಭಕ್ತಿಗೆ ಸದೃಶವಾದುದೆಂದು ವರ್ಣಿತವಾಗಿದೆ. ಒಂದಾನೊಂದುವೇಳೆ ಆ ಮಹಾಮಹಿಮರು ವೃಂದಾವನ ಕ್ಷೇತ್ರವಾಸಿ ಶ್ರೀ ಕೃಷ್ಣವಿಗ್ರಹವನ್ನೇ ತಮ್ಮ ಹೃದಯಸ್ಥನಾದ ಶ್ರೀ ರಾಮಮೂರ್ತಿಯನ್ನಾಗಿ-ಬದಲುಮಾಡಿಬಿಟ್ಟರಂತೆ! ಮತ್ತೊಂದುವೇಳೆ ಅವರ ಭಕ್ತಿಭಾವನೆಗೆ ಮೆಚ್ಚಿ ಶ್ರೀರಾಮಲಕ್ಷ್ಮಣರೇ ಅವರ ಆಶ್ರಮ ಸಮೀಪದಲ್ಲಿ ಪ್ರತ್ಯಕ್ಷದರ್ಶನ ಕೊಟ್ಟರಂತೆ! ಇಂತಹ ಮಹಾಮಹಿಮರವರು! ಅವರ ವಂಶದಲ್ಲಿ ಜನಿಸಿದರೆಂದರೆ ನಮ್ಮ ಕಥಾನಾಯಕರು ಕೇವಲ ವಂಶೋನ್ನತಿಯನ್ನು ಮಾತ್ರವಲ್ಲ-ತಮ್ಮ ಮೂಲಪುರುಷರಿಂದ ಭಗವದ್ಭಕ್ತಿ, ಏಕಾಗ್ರಮನಸ್ಕತೆ, ಆತ್ಮಜ್ಞಾನ ವೈರಾಗ್ಯಾದಿಗಳನ್ನು ಸಹ ಎಷ್ಟು ಪ್ರಮಾಣದಲ್ಲಿ ಆಕರ್ಷಿಸಿ-ಗಳಿಸಿದ್ದರೆಂಬುದನ್ನು ಮನಗಾಣಬಹುದು! ಗೋಸ್ವಾಮಿ

ತುಲಸೀದಾಸರು ತಾವು ನೋಡಿದ ಸಮಸ್ತವನ್ನೂ ಶ್ರೀ ರಾಮಭಾವನೆಯಿಂದಲೇ ಕಾಣುತ್ತಿದ್ದರಾದರೆ, ಅವರ ವಂಶಜರಾದ ನಮ್ಮ ಕಥಾನಾಯಕರು, ಸಮಸ್ತವನ್ನೂ ತಮ್ಮಂತೆಯೇ ಎಂದರೆ ಆತ್ಮಭಾವದಿಂದಲೇ ಕಾಣುತ್ತಿದ್ದರು. ಅವರಲ್ಲಿ ಎಂತಹ ಭಕ್ತಿ ಪಾರವಶ್ಯತೆಯು ಕಂಡು ಬಂದಿದ್ದಿತೋ, ಅಂತಹ ಶ್ರೀ ರಾಮಪದಧ್ಯಾನಾಸಕ್ತಿಯೇ, ಮರೆವೆಯೇ ಶ್ರೀ ರಾಮತೀರ್ಥರಲ್ಲೂ ಕಂಡುಬಂದಿತು. ಗೋಸ್ವಾಮಿ ವಂಶದಲ್ಲಿ ತುಲಸೀದಾಸರೆಂಬ ಬಿತ್ತದಿಂದ ಮೊಳಕೆಯಾಗಿ ಗಿಡವಾಗಿ-ಮರವಾಗಿ ಬೆಳೆದು ಎಲೆ ಹೂ ಹೀಚು ಕಾಯಿಗಳಿಂದ ಕೂಡಿ ಶೋಭಿಸುತ್ತಿದ್ದ ಮಹದ್ವೃಕ್ಷದಲ್ಲಿ ಬಿಟ್ಟ ಅಮೃತ ಫಲವೇ ಶ್ರೀ ರಾಮತೀರ್ಥರು. ಅಂತಹ ಫಲವನ್ನು ಬಿಟ್ಟ ಆ ವೃಕ್ಷವೂ, ಆ ವೃಕ್ಷವನ್ನು ಪಡೆದಿದ್ದ ತೋಟವೂ ಧನ್ಯವಾದುವಲ್ಲವೆ?



## — ಜನನ-ಬಾಲ್ಯ —

ಪಂಜಾಬಿನ ಗುಜರಾನ್‌ವಾಲಾ ಮಂಡಲಕ್ಕೆ ಸೇರಿದ ಮುರಲಿವಾಲಾ ಎಂಬ ಗ್ರಾಮದಲ್ಲಿ, ಮೇಲೆ ಹೇಳಿದ ಶ್ರೀ ಗೋಸ್ವಾಮೀ ತುಲಸೀದಾಸರ ವಂಶೀಕನಾದ ಗೋಸ್ವಾಮೀ ಹೀರಾನಂದ್ ಎಂಬೊಬ್ಬ ಬಡ ಬ್ರಾಹ್ಮಣನು ವಾಸವಾಗಿದ್ದನು. ಆತನ ವೃತ್ತಿ, ಸುತ್ತು ಮುತ್ತಿನ ಗ್ರಾಮಗಳಲ್ಲಿ ವಾಸಿಸುತ್ತಿದ್ದ ಬ್ರಾಹ್ಮಣರ ಮನೆಗಳ ಪೌರೋಹಿತ್ಯ. ಆ ವೃತ್ತಿಯಿಂದ ಆತನೂ ಆತನ ಪತ್ನಿಯೂ ಬಡತನ ಸ್ಥಿತಿಯಲ್ಲಿ ಜೀವನ ಯಾತ್ರೆಯನ್ನು ಸಾಗಿಸಲು ಮಾತ್ರ ಸಾಧ್ಯವಿತ್ತು. ಹೀಗಿರುವಲ್ಲಿ ಆತನ ಪತ್ನಿಯು ಗರ್ಭಿಣಿಯಾಗಿ ೧೮೭೩ನೆಯ ಸಂ|| ದ ಅಕ್ಟೋಬರು ೨೨ನೆಯ ದಿನ, ಎಂದರೆ ದೀಪಾವಳಿ ಹಬ್ಬವಾದ ಮಾರನೆಯ ದಿನ ಒಂದು ಪುರುಷ ಶಿಶುವನ್ನು ಪ್ರಸವಿಸಿದಳು. ಆಕೆಯ ತಂದೆಯು ಜ್ಯೋತಿಷ ಶಾಸ್ತ್ರದಲ್ಲಿ ಘನಪಂಡಿತನು. ಮಗಳ ಹೊಟ್ಟೆಯಲ್ಲೇ ಹುಟ್ಟಿದ ಆ ಕೂಸಿನ ಜಾತಕವನ್ನು ಬರೆಯಬೇಕೆಂದು, ಜನನಕಾಲವನ್ನು ಆತನಿಗೆ ತಿಳಿಸಿದರು. ಒಡನೆಯೇ ಆ ವೃದ್ಧನು, ಜಾತಕನ ಭವಿಷ್ಯ ಜೀವಿತ ಫಲವನ್ನು ಪರಿಭಾವಿಸಿ ಕಣ್ಣಲ್ಲಿ ನೀರು ತುಂಬಿ ಮತ್ತೆ

ಸ್ವಲ್ಪ ಹೊತ್ತಿನೊಳಗಾಗಿಯೇ ಪ್ರಸನ್ನ ಮುಖಮುದ್ರೆಯಿಂದ ಹಸನ್ಮುಖಿಯಾದನು. ಪರಸ್ಪರ ವಿರುದ್ಧಗಳಾದ ಈ ಎರಡು ಸ್ಥಿತಿಗಳನ್ನೂ ಏಕಕಾಲದಲ್ಲಿ ಸೂಚಿಸಿದ ಕಾರಣವೇನೆಂದು ಹತ್ತಿರವಿದ್ದವರು ಕೇಳಲು, ಆತನು— 'ಅಪ್ಪಾ, ಈ ಜಾತಕನ ಜನನ ನಕ್ಷತ್ರದ ಗತಿಯಿಂದ ಈ ಬಾಲಕನು ಬಹುದಿನ ಬದುಕಲಾರನು, ಅಥವ ಇವನ ತಾಯಿಯಾದರೂ ಬಹು ಬೇಗನೇ ಸಾಯುವಳು. ಅದು ನನ್ನ ವ್ಯಸನಕ್ಕೆ ಕಾರಣ. ಆದರೆ ಇವನೊಂದು ವೇಳೆ ಬದುಕಿ ದೊಡ್ಡವನಾದನೆಂದರೆ; ಮಹಾತ್ಮನೆನಿಸಿ, ತನ್ನ ಕೃತಿಗಳಿಂದ ಪ್ರಪಂಚಕ್ಕೇ ಜ್ಞಾನಜ್ಯೋತಿಯನ್ನು ತಂದಿತ್ತು, ತನ್ನ ವಂಶವನ್ನು ಪರಮ ಪಾವನವೆನ್ನಿಸುವನು. ಅದಕ್ಕಾಗಿ ಸಂತೋಷಿಸಿದೆನು' ಎಂದು ನುಡಿದನು.

ತನ್ನ ಸ್ವಂತ ತಂದೆಯು ನುಡಿದ ಭವಿಷ್ಯದಂತೆಯೇ ಪಾಪ, ಆ ಸಾಧ್ವಿಯು ಹೆತ್ತು ಇನ್ನೂ ಒಂದು ತಿಂಗಳು ಸಹ ತುಂಬುವುದಕ್ಕೆ ಮೊದಲೇ ತೀರಿಕೊಂಡಳು. ಮಗುವು ಪರದೇಶಿಯಾದನು. ಅಕ್ಕಟಾ, ಹುಟ್ಟಿ ಇನ್ನೂ ಕೆಲವು ದಿನಗಳೊಳಗಾಗಿಯೇ ತಬ್ಬಲಿಯಾದ ಆ ಕಂದನ ದುಸ್ಥಿತಿಯನ್ನು ಏನೆಂದು - ಎಷ್ಟೆಂದು ಹೇಳಬಹುದು ! ಸ್ವಾಮಿ ರಾಮತೀರ್ಥರು, ಮುಂದೊಂದು ವೇಳೆ ಮಾನವ ಪ್ರಾಣಿಯ ಜೀವಿತದಲ್ಲಿ ತಾಯಿಯ ಸ್ಥಾನವು ಎಷ್ಟು ಅಮೌಲ್ಯವಾದುದೆಂಬುದನ್ನು ಕುರಿತು ಹೇಳುತ್ತಾ,—' ತಾಯಿಯರೇ ಪ್ರಪಂಚದ ಉದ್ಧಾರಕರೆಂದರೆ ಅದು ತಪ್ಪಲ್ಲ; ಒಂದು ದೇಶವು ಅಭಿವೃದ್ಧಿಗೆ ಏರಲಿಕ್ಕಾದರೂ,-ಅವನತಿಗೆ ಇಳಿಯಲಿಕ್ಕಾದರೂ ತಾಯಿಯರೇ ಕಾರಣಕರ್ತರಾಗುವರು. ಮಕ್ಕಳಲ್ಲಿ ತೋರಿಬರುವ ಮೂಲಸ್ವಭಾವವು ಉಬ್ಬಿ ಹರಿಯುವಂತೆ ಮಾಡುವ ಶಕ್ತಿಯು ತಾಯಿಯಲ್ಲಲ್ಲದೆ ಬೇರೆಲ್ಲಿ ಇದ್ದೀತು ! ಜೀವಿತ ರಹಸ್ಯವೆಂಥದೆಂಬುದರ ಅಮೃತಮಯ ಬೀಜವು ಬಾಲ್ಯದಲ್ಲಿ ಅವರ ನಿಷ್ಕಲ್ಮಷ ಹೃದಯ ಕ್ಷೇತ್ರದಲ್ಲಿ ಆಕೆಯಿಂದ ಬಿತ್ತಲ್ಪಟ್ಟರೆ, ಆ ಮಗನು ಕೃಷ್ಣನಾಗಲಿ ಕ್ರೈಸ್ತನಾಗಲಿ ಆಗಲಾರನೇನು !" ಎಂದು ನುಡಿದಿರುವರು. ತೊಟ್ಟಿಲನ್ನು ತೂಗುವ ಸ್ತ್ರೀಯರ ಹಸ್ತದಲ್ಲೇ ಕಾಲಕ್ರಮದಲ್ಲಿ ಪ್ರಪಂಚವನ್ನು ಆಳುವ ಸಾಮರ್ಥ್ಯವೂ ಅಡಗಿದೆ ಎಂಬುದು ಸುಳ್ಳಲ್ಲ. ನಮ್ಮ ಸ್ತ್ರೀಯರು, ಬಯಲ ಹಂಬಲಗಳನ್ನು ಬಿಟ್ಟು ಜನಾಂಗದ ಮಾತೆಯರಾದ

ತಮ್ಮ ನಿಶ್ಚಯ ಸ್ಥಾನವನ್ನೂ, ಅದರ ಗೌರವವನ್ನೂ ರಕ್ಷಿಸಿಕೊಳ್ಳಲೆಳಸಿದರೆ, ಆಹಾ, ಸ್ವರ್ಗವೇ ಭೂಮಿಗಿಳಿದು ಬಂದಂತಿರುವುದಲ್ಲವೆ?

ಮಾತೃವಿಹೀನನಾದ ಆ ಶಿಶುವು ಮುಂದೆ, ಹಸುವಿನ ಹೊಯ್ಕಿ ಹಾಲಿನಿಂದಲೇ ಜೀವಿಸುವ ದುರ್ದಸೆಯುಂಟಾಯಿತು. ಹೀರಾನಂದನು ಸ್ವಲ್ಪ ಕಠಿಣ ಸ್ವಭಾವದ ಮನುಷ್ಯನು. ತಾಯಿಯೂ ಸತ್ತು ಮತ್ತಾರೂ ಪೋಷಕರಿಲ್ಲದೆ ಮಗುವನ್ನು ತಂದೆಯಾದ ಹೀರಾನಂದನೇ ಪೋಷಿಸುವ ಪರಿಸ್ಥಿತಿಯೊದಗಿದ್ದರೆ, ಪ್ರಪಂಚಕ್ಕೆ ಸ್ವಾಮಿ ರಾಮತೀರ್ಥರನ್ನು ಕಾಣುವ-ಅವರ ಜೀವಿತದಿಂದ ಲಾಭ ಪಡೆಯುವ ಯೋಗವೇ ಒಂದುವೇಳೆ ತಪ್ಪಿ ಹೋಗಬಹುದಿತ್ತು. ಆದರೆ ಆತನ ಸೋದರನ ಪತ್ನಿಯು ಶಿಶುವಿನ ಪೋಷಣೆಯ ಭಾರವನ್ನು ವಹಿಸಿದಳು. ಈಕೆಯ ದಯಾಗುಣವೂ ಮಾತೃಪ್ರೇಮವೂ ಶಾಂತತೆ ಸಮಾಧಾನಗಳೂ, ತೀರ್ಥರಾಮನನ್ನು ತಾಯಿಯಿಲ್ಲದ ಮಗುವೆನ್ನಿಸದಂತಿದ್ದುವು. ಅವನ ಪೋಷಣೆಯ ವಿಷಯದಲ್ಲಿ ಆಕೆಯು ತನ್ನ ಕಷ್ಟಸುಖಗಳನ್ನೂ ನಿದ್ರಾಹಾರಗಳನ್ನೂ ಗಮನಿಸಲಿಲ್ಲ. ಆಕೆಯು ದೇವಸ್ಥಾನಕ್ಕೆ ಹೋಗುವಾಗ ಆ ಮಗುವನ್ನು ತಪ್ಪದೆ ಕರೆದೊಯ್ಯುವಳು. ಶೈಶವ-ಬಾಲ್ಯಗಳಲ್ಲಿನ ಈ ಅಭ್ಯಾಸವು ಅವನ ಗುಣಚರ್ಯೆಗಳನ್ನು ರೂಪಿಸುವಲ್ಲಿ ಬಹುಮಟ್ಟಿಗೆ ಸಹಾಯಕವಾಯಿತು.—ಕೇವಲ ಚಿಕ್ಕತನದಿಂದಲೂ ತೀರ್ಥರಾಮನಿಗೆ ಭಜನೆಯೆಂದರೆ ಬಹುಪ್ರೇಮ. 'ಓಂ' ಎಂಬ ಶಬ್ದೋಚ್ಚಾರವೂ, ಶಂಖುವಿನ ವಾದ್ಯವೂ ಆ ಮಗುವಿನ ವಿಷಯದಲ್ಲಿ ಉಂಟುಮಾಡುತ್ತಿದ್ದ ಪರಿಣಾಮವು ವಿಚಿತ್ರತರವಾಗಿತ್ತು. ಅವನು ಹಟಹಿಡಿದು, ಎಷ್ಟು ಗಟ್ಟಿಯಾಗಿ ಅಳುತ್ತಿದ್ದರೂ - ಶಂಖುವನ್ನು ಊದಿ 'ಓಂ' ಎಂದು ಕೂಗಿದೊಡನೆಯೇ ಸುಮ್ಮನಾಗಿ ಬಿಡುತ್ತಿದ್ದನು. ಬಾಲ್ಯದಲ್ಲಿ ಸ್ವಲ್ಪಮಟ್ಟಿಗೆ ತಿಳಿವಳಿಕೆ ಬಂದೊಡನೆಯೇ ಭಾರತ ರಾಮಾಯಣಗಳ ಕಥೆಗಳನ್ನು ಕೇಳುವುದರಲ್ಲೂ ಮಧ್ಯೆಮಧ್ಯೆ ಪ್ರಶ್ನೆಮಾಡಿ ಅವುಗಳ ವಿಷಯದಲ್ಲಿ ಹೆಚ್ಚು ಸಂಗತಿಗಳನ್ನು ತಿಳಿದುಕೊಳ್ಳುವುದರಲ್ಲೂ ಅತಿಶಯ ಉತ್ಸಾಹವನ್ನು ತೋರಿಸುತ್ತಿದ್ದನು.

---

## —ವಿದ್ಯಾಭ್ಯಾಸ—

ಬಾಲಕ ತೀರ್ಥರಾಮನ ವಿದ್ಯಾಭ್ಯಾಸವು, ಇತರ ಬ್ರಾಹ್ಮಣ ಬಾಲಕರಂತೆ ಐದನೆಯ ವರ್ಷವೇ ಮೊದಲಾಯಿತು. ಪ್ರಾರಂಭಕ್ಕೆ ಮುರಲೀವಾಲಾ ಗ್ರಾಮದಲ್ಲೇ ಒಂದು ಉರ್ದು ಪಾಠಶಾಲೆಯನ್ನಿಟ್ಟು ಕೊಂಡಿದ್ದ ಒಬ್ಬ ಮೌಲ್ವಿಯ ಬಳಿ ಕಳುಹಿಸಲ್ಪಟ್ಟನು. ಆ ಮೌಲ್ವಿಯು ತೀರ್ಥರಾಮನ ಸೂಕ್ಷ್ಮಮತಿ, ಚಟುವಟಿಕೆ, ವಿನಯವಿಧೇಯತೆಗಳು ಮುಂತಾದುವುಗಳಿಗಾಗಿ ಬಹು ಸಂತೋಷಪಟ್ಟು ಅವನನ್ನು ಬಹು ಪ್ರೀತಿಯಿಂದ ಕಾಣುತ್ತಿದ್ದನು. ತೀರ್ಥರಾಮನೂ ತನ್ನಾ ಉಪಾಧ್ಯಾಯನನ್ನು ಬಹು ಶ್ರದ್ಧಾಭಕ್ತಿಗಳಿಂದ ಕಾಣುತ್ತ ತನಗೆ ಅಷ್ಟು ಜ್ಞಾನಧನವನ್ನು ಕೊಟ್ಟ ಆ ಮೌಲ್ವಿಗೆ ತಾನು ಯಾವ ಹಸುವಿನಿಂದ ಹಾಲು ಕುಡಿಯುತ್ತಿದ್ದನೋ ಆ ಹಸುವನ್ನು ಕೊಟ್ಟುಬಿಡುವಂತೆ ತಮ್ಮ ತಂದೆಗೆ ಹೇಳಿದನಂತೆ! ಆ ಗುರುವಿನಲ್ಲಿ ಬಾಲಕನು ತನ್ನ ಗೊತ್ತಾದ ಪಾಠಗಳನ್ನಲ್ಲದೆ, ಗುಲಿಸ್ತಾನ್ ಬೋಸ್ತಾನ್ ಮುಂತಾದ ಇತರ ಅನೇಕ ಪ್ರಸಿದ್ಧ ಪಾರ್ಶೀ ಗ್ರಂಥಗಳನ್ನೂ ಮುಂದೆ ಕೆಲವು ದಿನಗಳಲ್ಲೇ ಓದಿ ಮುಗಿಸಿದನು. ತೀರ್ಥರಾಮನು ತನ್ನ ಈ ಪ್ರಾರಂಭದ ಪಾಠಶಾಲೆಯನ್ನು ಬಿಟ್ಟು ಮುಂದಕ್ಕೆ ಹೊರಡಬೇಕಾದ ಸಂದರ್ಭ ಒಂದಾಗ್ಗ ಆ ಮೌಲ್ವಿಯು ತನ್ನ ಪ್ರೇಮಪಾತ್ರನಾದ ಆ ಅಪೂರ್ವ ವಿದ್ಯಾರ್ಥಿಯನ್ನು ಬಿಡಲಾರದುದಕ್ಕೆ ಸಂತೋಷ - ವ್ಯಸನಗಳೆರಡನ್ನೂ ಸೂಚಿಸುವಂತೆ ಕಣ್ಣೀರಿಡುತ್ತ ಎಂತೂ ಕಳುಹಿಸಿದನು.

---

## — ಭಗತ್ ಧನ್ನಾರಾಂ ಜೀ —

ಮುರಲೀವಾಲಾದಿಂದ ಗುಜರಾನ್‌ವಾಲಾಕ್ಕೆ ಬಂದು ತೀರ್ಥರಾಮನು ಇಂಗ್ಲೀಷ್ ಪಾಠಶಾಲೆಗೆ ಸೇರಿದನು. ಗೋಸ್ವಾಮಿ ಹೀರಾನಂದನ ಪರಮಸ್ನೇಹಿತನಾದ ಭಗತ್ ಧನ್ನಾರಾಂ ಎಂಬಾತನು ಆ ಊರಿನಲ್ಲೇ ವಾಸಿಸುತ್ತಿದ್ದು ಬಾಲಕನ ಪೋಷಣೆಯ ಭಾರವನ್ನು ವಹಿಸಿದನು. ಚಿಕ್ಕತನದಿಂದಲೇ ಧನ್ನಾರಾಮನ ಪೋಷಣೆಗೆ ಒಳಪಟ್ಟುದು ತೀರ್ಥ

ರಾಮನ ಅದೃಷ್ಟ ವಿಶೇಷವೆನ್ನಬೇಕು. ಏಕೆಂದರೆ ಧನ್ನಾರಾಮನು ಸಾಮಾನ್ಯ ಮನುಷ್ಯನಲ್ಲ-ಆತನು ಜಾತಿಯಿಂದ ಬ್ರಾಹ್ಮಣನಲ್ಲ. ಆತನ ಹಿರಿಯರು ಹಿತ್ತಾಳೆ ತಾಮ್ರದ ಪಾತ್ರೆ ಪದಾರ್ಥಗಳನ್ನು ಮಾಡುವವರು. ಆತನು ಚಿಕ್ಕಂದಿನಲ್ಲೇ ತಾಯಿತಂದೆಗಳನ್ನು ಕಳೆದುಕೊಂಡಿದ್ದರೂ-ಪಾಠಶಾಲಾ ವಿದ್ಯಾಭ್ಯಾಸವೂ ಚಿಕ್ಕಂದಿನಲ್ಲಿಯೇ ತಪ್ಪಿದ್ದರೂ ಬಹು ಬುದ್ಧಿಶಾಲಿಯಾಗಿದ್ದನು. ಮುಂದೆ ಕೆಲವು ದಿನಗಳು ಧನ್ನಾರಾಮನು ತನ್ನ ಕುಲವೃತ್ತಿಯನ್ನು ಅಭ್ಯಾಸಮಾಡಿಕೊಂಡಿದ್ದನು. ಅಷ್ಟರಲ್ಲಿ, ಆತನಲ್ಲಿ ಪೂರ್ವ ಪುಣ್ಯ ವಿಶೇಷದಿಂದಲೋ ಎಂಬಂತೆ ಅತಿಶಯ ಭಕ್ತಿವೈರಾಗ್ಯಾದಿಗಳು ಉಂಟಾಗತೊಡಗಿದುವು. ತನ್ನ ಮನಸ್ಸು ಬುದ್ಧಿಗಳನ್ನೂ ಇಂದ್ರಿಯ ವೃತ್ತಿಗಳನ್ನೂ ಸ್ವಾಧೀನಕ್ಕೆ ತಂದುಕೊಳ್ಳಬೇಕೆಂದು, ತಾನೇ ಅನೇಕ ನಿಯಮಗಳನ್ನು ಏರ್ಪಡಿಸಿಕೊಂಡು, ಅವುಗಳಿಗೆ ಚಾಚೂ ತಪ್ಪದೆ ನಡೆಯುವನು. ಮುಂದೆ ಕೆಲವು ದಿನಗಳಲ್ಲೇ ಒಬ್ಬ ಸಾಧುವಿನ ದರ್ಶನವಾಗಲು, ಆತನ ಬೋಧನೆಯ ಮೂಲಕ ಯೋಗಸಾಧನೆಗಳಲ್ಲೂ ಪರಿಶ್ರಮಹೊಂದಿ, ಕ್ರಮವಾದ ಅಭ್ಯಾಸದಿಂದ ಸಿದ್ಧಿಯನ್ನು ಹೊಂದಿದನು. ಮುಂದೆ ಕೆಲವು ದಿನಗಳಲ್ಲೆ ಆತನ ಕೀರ್ತಿಯೂ ಮಹಿಮೆಯೂ ಆ ಪ್ರಾಂತದಲ್ಲೆಲ್ಲಾ ಹರಡಿದುವು.—

ಇಂತಹ ಮಹನೀಯನ ನಿಕಟಸಂಬಂಧದಲ್ಲಿ ವಾಸಿಸುವ ಸಂಭವ ಒದಗಿದುದರಿಂದ ಆತನ ವೈರಾಗ್ಯಪರ ಜೀವನವು ಪ್ರಾರಂಭದಿಂದಲೂ ತೀರ್ಥರಾಮನ ಜೀವನಕ್ಕೆ ಆದರ್ಶವಾಯಿತು. ಪ್ರತಿದಿನದ ಪಾಠಶಾಲೆಯ ಕಾಲವು ಕಳೆಯಿತೆಂದರೆ ಬಾಲಕನು ಆ ಸಾಧುವರನ ಬಳಿ ಬಂದು ಸೇರುವನು. ಆತನು ಅನೇಕ ವಿಷಯಗಳಮೇಲೆ ಹೇಳುತ್ತಿದ್ದ ಉಪನ್ಯಾಸಗಳನ್ನು ಕೇಳುವನು. ಹಲವು ಬಗೆಯ ಪ್ರಶ್ನೆಗಳನ್ನು ಕೇಳಿ ಸಮಂಜಸ ಉತ್ತರಗಳನ್ನು ಪಡೆಯುವನು. ಬರುತ್ತಾ ಬರುತ್ತಾ ಒಂದು ಕ್ಷಣ ಆತನನ್ನು ಕಾಣದೆ ಹೇಗಿರುವುದು ಎಂಬಂತಾದನು. ಆತನು ಯೋಗವಾಸಿಷ್ಠ ಗ್ರಂಥವನ್ನೂ ಅದರಲ್ಲಿ ವಿವರಿಸಲ್ಪಟ್ಟ ಅಮೌಲ್ಯ ತತ್ತ್ವ ವಿಚಾರಗಳನ್ನೂ ತೀರ್ಥರಾಮನಿಗೆ ಬೋಧಿಸಿದನು. ತೀರ್ಥರಾಮನು ಆತನನ್ನು ತನ್ನ ಗುರುವೆಂದೇ ಭಾವಿಸಿ, ಆತನ ವಿಷಯದಲ್ಲಿ ಬಹು ಶ್ರದ್ಧಾಭಕ್ತಿಗಳಿಂದ ನಡೆದುಕೊಳ್ಳುತ್ತಿದ್ದನು.

ತನ್ನ ವಯಸ್ಸಿನ ಇತರ ಬಾಲಕರಿಗೆ ಏನೆಂದು ತಿಳಿದುಕೊಳ್ಳಲು ಸಹ ಅಸಾಧ್ಯವೆನಿಸುವಂತಹ ತತ್ವವಿಚಾರಗಳಲ್ಲಿ, ಗುರುವಾದ ಧನ್ನಾರಾಂಜೀಯಿಂದ ಬೋಧನೆಯನ್ನು ಹೊಂದುತ್ತಿದ್ದನಾದರೂ ತೀರ್ಥರಾಮನು ತನ್ನ ಶಾಲೆಯ ಪಾಠಪ್ರವಚನಾದಿಗಳಿಗೆ ಎಂದೂ ಕೊರತೆಯನ್ನುಂಟುಮಾಡಲಿಲ್ಲ. ಪ್ರತಿಯೊಂದು ತರಗತಿಯಲ್ಲೂ ಆತನೇ ಪ್ರಥಮ ವಿದ್ಯಾರ್ಥಿಯು. ಪ್ರತಿಯೊಂದು ಪರೀಕ್ಷೆಯ ಫಲಿತಾಂಶವು ಹೊರಪಟ್ಟಾಗಲೂ ಆತನ ಹೆಸರೇ ಮೊದಲನೆಯದು. ಪಾಠಶಾಲೆಯ ಪ್ರತಿಯೊಬ್ಬ ಉಪಾಧ್ಯಾಯರಿಗೂ ತೀರ್ಥರಾಮನೆಂದರೆ ಪ್ರಾಣ. ಆತನು ಒಂದು ದಿನವಾದರೂ ಪಾಠಶಾಲೆಗೆ ತಪ್ಪಿಸಿಕೊಂಡುದಲ್ಲ-ಹೊತ್ತು ಮೀರಿಹೋದುದೂ ಇಲ್ಲ. ಸಹಪಾಠಿಗಳೆಲ್ಲರೂ ಆತನನ್ನು ತಮ್ಮ ಸ್ವಂತ ಒಡಹುಟ್ಟಿದವನೋ ಎಂಬಂತೆ ಕಾಣುವರು. ಹೀಗೆ ಓದಿಕೊಂಡಿದ್ದ ತೀರ್ಥರಾಮನು ೧೮೮೮ನೆಯ ವರ್ಷದಲ್ಲಿ ಎಂದರೆ ತನ್ನ ೧೫ನೆಯ ವಯಸ್ಸಿನಲ್ಲಿ ಮೆಟ್ರಿಕ್ಯುಲೇಷನ್ ಪರೀಕ್ಷೆಗೆ ಕುಳಿತನು. ಆ ಪರೀಕ್ಷೆಯ ಫಲಿತಾಂಶವು ಪ್ರಕಟವಾಯಿತು. ಅದರಲ್ಲೂ ತೀರ್ಥರಾಮನೇ ಮೊದಲನೆಯವನು. ಅವನಿಗೂ, ಅವನ ಉಪಾಧ್ಯಾಯರಿಗೂ, ಸಹಪಾಠಿಗಳಿಗೂ, ಗುರುವಾದ ಭಗತ್ ಧನ್ನಾರಾಂಜೀಗೂ ಅದನ್ನು ಕಂಡು ಎಷ್ಟು ಆನಂದ ಉಂಟಾಗಿದ್ದೀತು! ಆದರೆ ಆ ಆನಂದವು ಬಹು ಕಾಲ ಉಳಿಯುವಂತಿರಲಿಲ್ಲ. ಏಕೆಂದರೆ ತೀರ್ಥರಾಮನ ಕುಟುಂಬದವರು ಅಗ್ಗ ಬಹು ದರಿದ್ರಾವಸ್ಥೆಗೊಳಪಟ್ಟು ತೊಂದರೆಪಡುತ್ತಿದ್ದರು. ಆದುದರಿಂದ ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ತೇರ್ಗಡೆಯಾದ ತನ್ನ ಮಗನು ಇನ್ನು ವಿದ್ಯಾಭ್ಯಾಸವನ್ನು ಸಾಕುಮಾಡಿ ಊರಿಗೆಬಂದು, ಎಲ್ಲಾದರೊಂದು ಉದ್ಯೋಗಕ್ಕೆ ಸೇರಿ ಸಂಸಾರದ ಕಷ್ಟ ತಾಪತ್ರಯಗಳಲ್ಲಿ ಸ್ವಲ್ಪಮಟ್ಟಿಗೆ ಸಹಕಾರಿಯಾಗಬೇಕೆಂದು ಆತನ ತಂದೆ ಹೀರಾನಂದನು ಅಪೇಕ್ಷಿಸಿದನು. ಆದರೆ ತೀರ್ಥರಾಮನಿಗೆ ಮಾತ್ರವಲ್ಲ - ಆತನ ಉಪಾಧ್ಯಾಯರಿಗೂ, ಧನ್ನಾರಾಂಜೀಗೂ ಅಂತಹ ಮೇಧಾವಿ ಬಾಲಕನು ಹದಿನೈದನೆಯ ವಯಸ್ಸಿನಲ್ಲೇ ಸಂಸಾರದ ಕೋಟಲೆಗೆ ಒಳಪಡದೆ ಮುಂದೆ ಸಾಧ್ಯವಿದ್ದಷ್ಟು ಓದಿಯೇ ತೀರಬೇಕೆಂದು ಅಪೇಕ್ಷೆಯಿದ್ದಿತು. ಆದಕಾರಣವೇ ಎಲ್ಲರೂ ಆ ಬಾಲಕನನ್ನು ಪ್ರೋತ್ಸಾಹಪಡಿಸುತ್ತಿದ್ದರು.

ಮುಂದಿನ ವಿದ್ಯಾಭ್ಯಾಸ ವಿಚಾರದಲ್ಲಿ ತನ್ನ ತಂದೆಯು ಅಷ್ಟುಮಟ್ಟಿಗೆ ಕೇವಲ ನಿರುತ್ಸಾಹ ಮಾತ್ರವೇ ಅಲ್ಲ, ಪ್ರತಿಬಂಧಕಪಡಿಸುತ್ತಿದ್ದರೂ ತೀರ್ಥರಾಮನು ತನ್ನ ಉದ್ದೇಶದಿಂದ ಹಿಂದಿರುಗುವ ಮನಸ್ಸು ಮಾಡ ಲಿಲ್ಲ. ಆತನ ಧೈರ್ಯೋತ್ಸಾಹಗಳು ಕುಂದಲಿಲ್ಲ. ಆ ವೇಳೆಗೆ ಧನ್ನಾ ರಾಮನೂ ಮುಂದೆ ಓದೆಂದು ಬಹುಮಟ್ಟಿಗೆ ಪ್ರೋತ್ಸಾಹಪಡಿಸಿದನು. ಈ ಸಂದರ್ಭದಲ್ಲಿ ಸ್ವಾಭಾವಿಕವಾಗಿಯೇ ತೀರ್ಥರಾಮನು ತನ್ನ ತಂದೆಯ ಇಷ್ಟಕ್ಕೆ ವಿರೋಧವಾಗಿ ನಡೆಯಬೇಕಾಯಿತು. ಹೀರಾನಂದನು ತನ್ನ ಮಾತನ್ನೂ ಕೇಳದೆ - ಸಾಲದುದಕ್ಕೆ ತನ್ನ ಇಷ್ಟಕ್ಕೆ ವಿರೋಧವಾಗಿಯೂ ನಡೆದ ಮಗನ ವಿಷಯದಲ್ಲಿ ಬಹು ಕೋಪಗೊಂಡನು. ಮುಂದೆ ತನ್ನಿಂದ ಒಂದು ಬಿಡಿಕಾಸಿನ ಸಹಾಯವನ್ನೂ ಅಪೇಕ್ಷಿಸಕೂಡದೆಂದು ಬಹು ನಿಷ್ಠುರ ರೀತಿಯಿಂದ ನುಡಿದು ತನ್ನ ಮಗನನ್ನು ಮನೆಯ ಹೊಸ್ತಿಲಿನಿಂದ ಹೊರಕ್ಕೆ ದಾಟಿಸಿದನು.

---

## — ಲಾಹೋರ್ ನಗರವಾಸ —

ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ಪ್ರಥಮವರ್ಗದಲ್ಲಿ ಉತ್ತೀರ್ಣ ನಾದುದಕ್ಕಾಗಿ ತಂದೆಯಿಂದ ಈ ಬಗೆಯಲ್ಲಿ ಅಭಿನಂದಿತನೂ ಪ್ರೋತ್ಸಾಹಿ ತನೂ ಆದ ನಮ್ಮ ಈ ತರುಣ ವಿದ್ಯಾರ್ಥಿಯು, ಊರಿನಿಂದ ಹೊರಟು ಗುಜರಾನ್‌ವಾಲಾದಲ್ಲಿ ಧನ್ನಾರಾಂಜೀಯನ್ನು ಕಂಡು ಅಪ್ಪಣೆಪಡೆದು, ಲಾಹೋರ್ ನಗರಕ್ಕೆ ಬಂದು ಅಲ್ಲಿ ಮಿಷನ್ ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿ ಸೇರಿದನು. ಕಾಲೇಜು ತರಗತಿಯಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದ ಆ ತರು ಣನು ತನಗಾಗಿ ದ್ರವ್ಯಸಹಾಯ ಮಾಡತಕ್ಕವರು ಯಾರೂ ಇಲ್ಲದಿರಲು - ಮ್ಯುನಿಸಿಪಲ್ ಕಮಿಟಿಯಿಂದ ದೊರೆಯುತ್ತಿದ್ದ ಅಲ್ಪಸ್ವಲ್ಪ ವಿದ್ಯಾರ್ಥಿ ವೇತನದಿಂದಲೇ ತನ್ನ ಪುಸ್ತಕ, ಕೊಠಡಿಯ ಬಾಡಿಗೆ, ಊಟ ತಿಂಡಿಗಳು, ರಾತ್ರಿಯ ದೀಪಕ್ಕೆ ಎಣ್ಣೆ, ಬಟ್ಟೆಬರೆಗಳು ಮುಂತಾದ ಎಲ್ಲಾ ಖರ್ಚು ಗಳನ್ನೂ ನಡಗಿಸಿಕೊಳ್ಳಬೇಕಾಗಿತ್ತು. ಎಷ್ಟೋ ಸಾರಿ, ಪುಸ್ತಕಗಳಿಗಾಗಿ ಹಣ ಖರ್ಚಾಗಿಬಿಟ್ಟಾಗ ಊಟಕ್ಕೆ ಕಡಮೆ ಬೀಳುತ್ತಿತ್ತು. ಎಷ್ಟೋ ಸಾರಿ,

ದೀಪಕ್ಕೆ ಎಣ್ಣೆಯಿಲ್ಲವೆಂದು ತೋರಿದಾಗ, ಹಗಲು ಒಂದೇ ಹೊತ್ತು ಊಟ ಮಾಡಿ ಆ ದುಡ್ಡನ್ನು ರಾತ್ರಿಯ ದೀಪದಖರ್ಚಿಗೆ ಮಿಗಿಸುವನು. ಎಷ್ಟೋ ವೇಳೆ ಪೂರ್ತಿ ದಿವಸವೇ ಉಪವಾಸವಿರಬೇಕಾದ ಸಂದರ್ಭ ಉಂಟಾಗುವುದು. ಒಂದಾನೊಂದುವೇಳೆ, ಇದ್ದದುಡ್ಡಿನಲ್ಲಿ ಹೆಚ್ಚುಭಾಗವನ್ನು ಖರ್ಚುಮಾಡಿ ಪುಸ್ತಕಗಳನ್ನು ತೆಗೆದುಕೊಳ್ಳಬೇಕಾಯಿತು. ತರುವಾಯ ಮಿಕ್ಕದುಡ್ಡು, ತಿಂಗಳು ಕೊನೆಯುವರೆಗೆ ದಿನವೊಂದಕ್ಕೆ ಮೂರು ಕಾಲಾಣೆಗಳಂತೆ ಖರ್ಚು ಮಾಡಬಹುದಾದಷ್ಟೇ ಇದ್ದಿತು. ಅಷ್ಟರಿಂದಲೇ ಹೇಗೆ ಜೀವಿಸುವುದೆಂದು ತೋರಲಿಲ್ಲ. ಸ್ವಲ್ಪಹೊತ್ತು ಬಹು ಯೋಚನೆಯಾಯಿತು. ಕೊನೆಗೆ, —'ಅನೇಕ ಮಂದಿ ಭಿಕ್ಷುಕರು ದಿನಕ್ಕೆ ಎರಡು ಮೂರು ಕಾಲಾಣೆಗಳ ಮೇಲೆ ಜೀವಿಸುವುದಿಲ್ಲವೆ? ನಾನೂ ಹಾಗೇಕೆ ಇರಬಾರದು' ಎಂದುಕೊಂಡು ಮಧ್ಯಾಹ್ನ ಅರ್ಧಾಣೆಗೂ, ಸಾಯಂಕಾಲ ಕಾಲಾಣೆಗೂ ರೊಟ್ಟಿಯನ್ನು ತಂದು ತಿನ್ನುತ್ತಾ ಮೂರು ನಾಲ್ಕು ದಿನಗಳನ್ನು ಕಳೆದನು. ಅದರ ಆಮೇಲೆ ಒಂದು ರಾತ್ರಿ ರೊಟ್ಟಿಯ ಅಂಗಡಿಯವನು, ರೊಟ್ಟಿಗೆ ಮಾತ್ರ ಕಾಲಾಣೆ ತೆಗೆದುಕೊಂಡು, ತೊವ್ವೆಯನ್ನು ಪುಕ್ಕಟೆ ಕೊಡುವ ಇಂತಹ ವ್ಯಾಪಾರದಿಂದ ತನಗೆ ನಷ್ಟವಾಗುವುದರಿಂದ ಇನ್ನುಮೇಲೆ ಕಾಲಾಣೆಗೆ ರೊಟ್ಟಿ ಸಿಕ್ಕುವುದಿಲ್ಲವೆಂದು ಹೇಳಿಬಿಟ್ಟನು. ಅದಕ್ಕಾದರೂ ನಮ್ಮ ಧೀರನು ಬೆದರಿದನೇನು! ತನಗೆ ಮುಂದೆ ದುಡ್ಡು ಸಿಕ್ಕುವವರೆಗೆ ದಿನಕ್ಕೆ ಒಂದೇ ಹೊತ್ತು ತಿಂದು ಜೀವಿಸಬೇಕೆಂದು ಸಂಕಲ್ಪಿಸಿದನಲ್ಲದೆ ಸಾಲಮಾಡಿಕೊಂಡು ತಿನ್ನಲು ಬಯಸಲಿಲ್ಲ. ಇಷ್ಟಾದರೂ ಆತನು ಎಂದೂ ಸಪ್ಪೆ ಮುಖದಿಂದ ಎದುರಿನವರೆಗೆ ಜಿಗುಪ್ಸೆಯನ್ನುಂಟುಮಾಡುವಂತೆ ಇದ್ದುದಿಲ್ಲ. ಈ ಕಾರಣ ಕ್ಕಾಗಿ ಎಂದೂ ಕಾಲೇಜಿಗೆ ತಪ್ಪಿಸಿಕೊಂಡುದಿಲ್ಲ. ಹೊತ್ತುಹೊತ್ತಿಗೆ ಅನ್ನ ವಿಲ್ಲವೆಂದು ಓದಿಕೊಳ್ಳದೆ ಪಾಠಪ್ರವಚನಗಳಲ್ಲಿ ಎಂದೂ ಹಿಂದೆ ಬಿದ್ದುದಿಲ್ಲ. ಆತನ ವಾಚನ ವಿಧಾನಕ್ಕೆ ಹೊತ್ತು ವೇಳೆಗಳ ನಿಯಮವಿರಲಿಲ್ಲ. ಸೂರ್ಯಾ ಸ್ತಮಾನದಿಂದ ಸೂರ್ಯೋದಯದವರೆಗೂ ನಿದ್ರೆ ಆಹಾರಗಳ ಗಣನೆಯಿಲ್ಲದೆ, ಶಾಂತನಾಗಿ ಏಕಾಂಗಿಯಾಗಿ ಓದುತ್ತಿರುವನು. ದೇಹವನ್ನು ಅಷ್ಟುಮಟ್ಟಿಗೆ ದಂಡಿಸುತ್ತಿದ್ದುದರಿಂದ ಆತನು ಅನೇಕವೇಳೆ ರೋಗಗ್ರಸ್ತನಾಗುತ್ತಿದ್ದನು. ಆದರೇನು ಅಂತಹ ಅಸೌಖ್ಯ ಸ್ಥಿತಿಯಲ್ಲೂ ಜ್ಞಾನತೃಷ್ಣೆಯಿಂದ ಪೀಡಿತವಾದ

ಆತನ ಮನಸ್ಸು ಪಾಚನಕ್ರಿಯೆಯಲ್ಲಿ ಲೀನವಾಗಿ ಏಕಾಗ್ರತೆಯನ್ನು ಹೊಂದಿತೆಂದರೆ ರೋಗಬಾಧೆಯಾಗಲೀ ಮತ್ತಾವ ಚಿಂತೆಯಾಗಲೀ ಆತನನ್ನು ಸಮೀಪಿಸುತ್ತಿರಲಿಲ್ಲವಂತೆ ! —

---

## — ಕಾಲೇಜು ವಿದ್ಯಾಭ್ಯಾಸ —

ಎಫ್. ಎ. ತರಗತಿಗೆ ಸೇರಿದಾಗ ತೀರ್ಥರಾಮನು ಪಾರ್ಶೀ ಭಾಷೆಯನ್ನೇ ತೆಗೆದುಕೊಂಡು ಓದುತ್ತಿದ್ದನು. ಆ ಭಾಷೆಯಲ್ಲಿ ಆತನನ್ನು ಮೀರಿಸುವವರು ಯಾರೂ ಇರಲಿಲ್ಲ. ಆದರೆ, ಒಂದು ದಿನ ಕೆಲವರು ಸೇರಿ ಮಾತನಾಡಿಕೊಳ್ಳುತ್ತಿದ್ದಾಗ, — 'ಬ್ರಾಹ್ಮಣನಾಗಿಯೂ ಈ ಹುಡುಗನಿಗೆ ಸಂಸ್ಕೃತದ ಗಂಧವೇ ತಿಳಿಯದು' ಎಂದು ಆಕ್ಷೇಪಿಸಿದರಂತೆ! ಒಡನೆ ತೀರ್ಥರಾಮನು ಬಹು ನಾಚಿಕೆಪಟ್ಟು ಅಂದಿನಿಂದ ಸಂಸ್ಕೃತವನ್ನು ಕಲಿಯುವಂತೆಯೂ ಆ ವರ್ಷದ ಎಫ್. ಎ. ಪರೀಕ್ಷೆಗೆ ಆ ದೇವಭಾಷೆಯನ್ನು ತೆಗೆದುಕೊಂಡೇ ಓದುವಂತೆಯೂ ಸಂಕಲ್ಪಿಸಿದನು. ಪಾರ್ಶೀ ತರಗತಿಗೆ ಭೂಷಣಪ್ರಾಯನಾಗಿದ್ದ ಅವನನ್ನು ತನ್ನಲ್ಲಿಂದ ಕಳುಹಿಸುವುದಕ್ಕೆ ಆ ಪಂಡಿತನು ಎಷ್ಟು ತೊಂದರೆಪಟ್ಟುಕೊಂಡಿದ್ದನೋ. ಕೇವಲ ಒಂದಕ್ಷರವೂ ಬಾರದ ಅವನಿಗೆ ಸಂಸ್ಕೃತ ಭಾಷೆಯಲ್ಲಿ ಎಫ್. ಎ. ತರಗತಿಯ ಪಠನೀಯ ಗ್ರಂಥಗಳನ್ನು ಎಂದಿಗೆ ಪ್ರಾರಂಭಿಸಿ ಓದಿಸುವುದೆಂದು ಆತನನ್ನು ತನ್ನ ತರಗತಿಗೆ ತೆಗೆದುಕೊಳ್ಳಲು ಸಂಸ್ಕೃತ ಪಂಡಿತನೂ ಅಷ್ಟೇ ತೊಂದರೆ ಪಡುತ್ತಿದ್ದನು. ಆದರೆ ತೀರ್ಥರಾಮನು, ಅದನ್ನು ಲಕ್ಷಿಸದೆ, ಸಂಸ್ಕೃತವನ್ನು ಅಕ್ಷರಾಭ್ಯಾಸದಿಂದ ಪ್ರಾರಂಭಿಸಿ, ಬಹು ಸ್ವಲ್ಪ ಕಾಲದಲ್ಲೇ ಆ ಪಂಡಿತನು ಆಶ್ಚರ್ಯಗೊಳ್ಳುವಂತೆ ಅಭ್ಯಸಿಸತೊಡಗಿ ಆ ವರ್ಷದ ಎಫ್. ಎ. ಪರೀಕ್ಷೆಯಲ್ಲಿ ಸಂಸ್ಕೃತದಲ್ಲೂ ಉತ್ತಮ ರೀತಿಯಲ್ಲೇ ತೇರ್ಗಡೆಯಾದನು. ಆತನ ಮೇಧಾಶಕ್ತಿಯನ್ನೂ ಉದ್ಯೋಗ ಪರತೆಯನ್ನೂ ಏನೆಂದು ವರ್ಣಿಸಬಹುದು ! —

ವಿದ್ಯಾಭ್ಯಾಸ ವಿಷಯದಲ್ಲಿ ಇಷ್ಟು ಮಟ್ಟಿನ ಶ್ರದ್ಧಾ ಉತ್ಸಾಹಗಳನ್ನು ತೋರಿಸುವುದಾದರೆ, ಫಲವಾದರೂ ಲಭ್ಯವಾಗಲಾರದೇಕೆ? ೧೮೯೦ ರಲ್ಲಿ

ತೀರ್ಥರಾಮನು ಎಫ್. ಎ. ಪರೀಕ್ಷೆಯಲ್ಲಿ ಪ್ರಥಮ ವರ್ಗದಲ್ಲೇ ತೇರ್ಗಡೆ ಯಾದನು. ಸರ್ಕಾರದ ವಿದ್ಯಾರ್ಥಿ ವೇತನವೂ ದೊರೆಯಿತು. ಧನ್ನಾರಾಮ ನಿಗೆ ತನ್ನ ಶಿಷ್ಯನ ಪ್ರಾದುರ್ಭಾವವನ್ನು ಕಂಡು ಪರಮ ಸಂತೋಷವೆನಿಸ ದಿದ್ದೀತೆ! ಪರೀಕ್ಷೆಯು ಮುಗಿದೊಡನೆಯೇ ಬರುವ ರಜಾ ಕಾಲದಲ್ಲಿ, ತನ್ನೊಂದಿಗೆ ಬಂದು ವಾಸಿಸೆಂದು ಬರೆದಿದ್ದನು. ಆದರೆ ತೀರ್ಥರಾಮನು, —'ರಜಾ ಬಂದಿತೆಂದು ವಿದ್ಯಾರ್ಥಿ ಜೀವಿತದ ವಾತಾವರಣದಿಂದ, ಹೊರ ಟು, ಆಪ್ತೇಷ್ಟರ ಬಳಿಗೆ ಹೋಗಿ ಸೇರುವುದರಿಂದ ಮುಂದೆ ನನ್ನ ವಿದ್ಯಾ ಭ್ಯಾಸಕ್ಕೆ ಕೆಡುಕೆನಿಸುವಂತೆ ನನ್ನಲ್ಲಿ ಸೋಮಾರಿತನವೂ ಸುಖಾಭಿಲಾಷೆಯೂ ಪ್ರಾಪ್ತವಾಗಬಹುದು' ಎಂದು ಬರೆದು ಲಾಹೋರಿನಲ್ಲೇ ನಿಂತನು. ಪರೀ ಕ್ಷೆಯಲ್ಲಿ ತೇರ್ಗಡೆಯಾದ ಸಂಗತಿಯು ಹೀರಾನಂದನಿಗೂ ತಿಳಿಯಿತು. ಆಗಲಾದರೂ ಬಂದು ಮನೆಯಲ್ಲಿ ನಿಂತು, ಸಂಸಾರಕ್ಕೆ ನೆರವಾಗೆಂದು ಮಗನಿಗೆ ಬರೆದನು. ಆದರೆ ತೀರ್ಥರಾಮನು ಈ ಸಾರಿಯೂ ತಂದೆಯ ಇಷ್ಟದಂತೆ ನಡೆಯಲು ಅಶಕ್ತನಾದನು. ಈಸಾರಿಮಾತ್ರ ತಂದೆಯ ಕೋಪವು ಮಿತಿಮೀರಿತು. ಹೀರಾನಂದನು ತೀರ್ಥರಾಮನಿಗೆ ಹತ್ತನೆಯ ವಯಸ್ಸಿನಲ್ಲಿಯೇ ಎರಡು ವರ್ಷದ ಒಂದು ಮಗುವಿನೊಂದಿಗೆ ಲಗ್ನ ಮಾಡಿದ್ದನು. ಈಗ್ಗೆ ಆ ಹುಡುಗಿಯು ತನ್ನ ಮನೆಯಲ್ಲೇ ವಾಸಿಸುತ್ತಿ ದ್ದುದರಿಂದ ಮುಂದೆ ಅವಳಿಗೆ ಇನ್ನೆಷ್ಟು ದಿನ ತಾನು ಅನ್ನ ಹಾಕಲೆಂದು ಬೇಸತ್ತು, ಒಡನೆ ಅವಳನ್ನೂ ಕರೆದುಕೊಂಡು ಹೊರಟು, ಲಾಹೋರನ್ನು ಸೇರಿ—'ಇಗೋ ನಿನ್ನ ಹೆಂಡತಿ. ನೀನು ಊರಿಗೆ ಬಂದು ಕೆಲಸ ಕಾರ್ಯ ಮಾಡಿಕೊಂಡು ಸಂಪಾದಿಸಿ ಹಾಕದಿದ್ದರೆ, ನಾನು ಇನ್ನೆಷ್ಟು ದಿನ ಇವಳನ್ನು ಕಾಪಾಡಲಿ! ನಿನ್ನ ಹೆಂಡತಿ ನಿನ್ನ ಪಾಲಿಗೆ - ಏನಾದರೂ ಮಾಡಿಕೋ!' ಎಂದು ಹೇಳಿ, ಅವಳನ್ನು ಆತನ ಬಳಿ ಬಿಟ್ಟು ಹೊರಟುಹೋದನು. ಈಜು ಬಾರದೆ ಸಮುದ್ರದಲ್ಲಿ ಬಿದ್ದು ಒದ್ದಾಡುತ್ತಿದ್ದವನ ಕೊರಳಿಗೊಂದು ಕಲ್ಲು ಕಟ್ಟಿದಂತಾಯಿತು ಆಗಿನ ತೀರ್ಥರಾಮನ ಸ್ಥಿತಿ! —



— ಬಿ. ಎ. —

ಆದರೆ ಆತನ ಮನಸ್ಥಿತಿಯು ಅದರಿಂದಲೂ ಕದಲಲಿಲ್ಲ. 'ಇಂತಹ ಕಷ್ಟ ಸಂಕಟಗಳಲ್ಲಿ ಹಾಯ್ದು ಧ್ಯೇಯವನ್ನನುಸರಿಸಿ ಹೋಗತಕ್ಕದ್ದೇ ಧನ್ಯ ಜೀವಿತವು' ಎಂದುಕೊಂಡು, ಆತನು ಉತ್ಸಾಹದಿಂದಲೇ ಮುಂದುವರಿದ್ದನು. ಹಸಿವು ಬಾಯಾರಿಕೆಗಳು, ಶೀತೋಷ್ಣಗಳು ಕಷ್ಟಸಂಕಟಗಳು ಇವುಗಳಲ್ಲೊಂದೂ ಆತನ ಜ್ಞಾನಾಪೇಕ್ಷೆಯೆಂಬೊಂದು ಆಶಾಪ್ರವಾಹದೆದುರಿಗೆ ನಿಲ್ಲಲು ಶಕ್ತವಾಗುತ್ತಿರಲಿಲ್ಲ. ಆತನು ಧನಕನಕಗಳನ್ನಾಗಲೀ ವೃತ್ತಿಕ್ಷೇತ್ರಗಳನ್ನಾಗಲೀ ಅಥವ ಕೀರ್ತಿಪ್ರತಿಷ್ಠೆಗಳನ್ನಾಗಲೀ ಸಂಪಾದಿಸಬೇಕೆಂದು ಇಂತಹ ಕಠಿಣ ತಪಶ್ಚರ್ಯೆಯಲ್ಲಿ ತೊಡಗಿರಲಿಲ್ಲ. ಸಕಲ ವಿಧ ಕಷ್ಟನಷ್ಟಗಳನ್ನು ಸಹಿಸಿಯಾದರೂ ತಿಳಿಯಬೇಕಾದ - ತಿಳಿಯಬಹುದಾದ ಸಕಲ ವಿಷಯಗಳನ್ನೂ ತಿಳಿಯಬೇಕೆಂಬ ಜ್ಞಾನತೃಷ್ಣೆಯೇ ಆತನನ್ನು ಆ ರೀತಿ ಪ್ರೇರಿಸುತ್ತಿತ್ತು. ಈ ಜ್ಞಾನರೂಪಿ ಆಜ್ಯವನ್ನೇ ಆತನು ತನ್ನ ಹೃದಯಾಗ್ನಿಯಲ್ಲಿ ದಿನದಿನವೂ ಹೋಮ ಮಾಡುತ್ತಿದ್ದನು. ಅದೇ ಆತನ ತಪಸ್ಸು. ತನ್ನ ಭವಿಷ್ಯ ಜೀವಿತವನ್ನು ಯಾವ ರೀತಿ ನಡೆಯಿಸಬೇಕೆಂಬುದನ್ನು ಆತನು ತಿಳಿದಿದ್ದನೋ ಎಂಬಂತೆ ಈ ದಿನಗಳಲ್ಲಿ ದಿನದಿನಕ್ಕೂ, ಗಂಟೆ ಗಂಟೆಗೂ ಕ್ಷಣ ಕ್ಷಣಕ್ಕೂ ಆದರ್ಶರೂಪೀ ಜೀವಿತವೊಂದನ್ನು ಆತನು ರೂಪಿಸಿಕೊಳ್ಳುತ್ತಿದ್ದನು. ತಾನು ಲೋಕದಲ್ಲಿ ಮಾಡಬೇಕಾಗಿದ್ದ ಮಹತ್ಕಾರ್ಯದ ಸೂಚನೆಯು ಆತನಿಗೆ ಆಗಲೇ ತೋರಿತೋ ಎಂಬಂತೆ, ಆತನು ಸಾವಧಾನದಿಂದ ಯಾವುದೊಂದು ಬಗೆಯ ಉದ್ವೇಗಕ್ಕೂ ಮನಸ್ಸಿನಲ್ಲಿ ಸ್ಥಳಕೊಡದೆ, ಮಹಾನದೀ ಪ್ರವಾಹದಂತೆ ನಿದಾನವಾಗಿ ಸಾಗುತ್ತಿದ್ದನು. ಆತನ ಪವಿತ್ರ ಚರಿತ್ರೆಯೂ, ದೈವಿಕ ಸ್ವಭಾವವೂ, ಶಿಶುಸಹಜವಾದ ನಿಷ್ಕಪಟ ಮನೋವೃತ್ತಿಯೂ ಮನುಷ್ಯವರ್ಗಕ್ಕೇ ಅಪೂರ್ವವೆನ್ನುವಂತೆ ಆತನ ಮುಖದಲ್ಲಿ ಪ್ರದರ್ಶಿಸಲ್ಪಡುತ್ತಿದ್ದುವು.

ದೇಹಜೀವಗಳನ್ನೊಂದಾಗಿರಿಸಲು ಅತ್ಯಾವಶ್ಯಕ ಸಾಮಗ್ರಿಗಳಾದ ತಿಂಡಿತೀರ್ಥಗಳ ವಿಷಯದಲ್ಲೇ ಇಷ್ಟುಮಟ್ಟಿನ ಸ್ಥಿತಿಯಿದ್ದಮೇಲೆ ಇನ್ನು ಆತನ ಉಡುಪಿನ ಸ್ಥಿತಿಯು ಹೀಗಿದ್ದಿತೆಂದು ಹೇಳಬೇಕಾದುದಿಲ್ಲವಷ್ಟೆ!

ತೀರ್ಥರಾಮನು ದೇಶೀಯ ನೇಯಿಗೆಯ ಕೇವಲ ಒಂದು ಅಂಗರೇಖೆ (ಷರ್ಟ) ಪಂಜಾಬೀಯ ಒಂದು ಪರಾಯಿ ಮತ್ತು ತಲೆಗೊಂದು ರುಮಾಲು ಇಷ್ಟರ ಮೇಲೆಯೇ ಕಾಲಹಾಕುವನು. ಇವುಗಳ ಬೆಲೆಯು ಒಟ್ಟು ಮೂರು ರೂಪಾಯಿ ಆಗುವುದು. ಆ ಪ್ರಾಂತದಲ್ಲಿ ಪಾದರಕ್ಷೆಯಿಲ್ಲದೆ ನಡೆವುದು ಪದ್ಧತಿಯುಳ್ಳವಾದ್ದರಿಂದ ಆತನು ಬಹು ಸುಲಭ ಬೆಲೆಯ ಪೂರ್ವದ ಮಾದರಿಯ ಒಂದು ಜೊತೆ ಎಕ್ಕಡಗಳನ್ನೇ ಉಪಯೋಗಿಸುತ್ತಿದ್ದನು. ಬಿ. ಎ. ತರಗತಿಯಲ್ಲಿದ್ದಾಗಲೂ ಈ ಉಡುಪು ವ್ಯತ್ಯಾಸವಾಗಲಿಲ್ಲ. ಆದರೆ, ಮುಂದೆ ಪದವೀದಾನ ಸಮಾರಂಭದಲ್ಲಿ ನಡೆವ ಸಭೆ (Convocation Meeting) ಗೆ ಹೋಗುವಾಗ, ಗೊತ್ತಾದ ಒಂದೇ ಬಗೆಯ ಉಡುಪನ್ನೇ-ಬೂಟುಗಳನ್ನೇ ಧರಿಸಬೇಕೆಂದು ಒತ್ತಾಯವಿರುವುದರಿಂದ ಆಗ ಏನು ಮಾಡಬೇಕೆಂದು ಮಾತ್ರ ಒಂದೊಂದುವೇಳೆ ಆತನಿಗೆ ಚಿಂತೆಯುಂಟಾಗುತ್ತಿತ್ತು. ಒಂದಾನೊಂದುವೇಳೆ ಮಳೆಗಾಲದಲ್ಲಿ ಕೆಸರಿನಲ್ಲಿ ಹೋಗುತ್ತಿದ್ದಾಗ್ಗೆ, ಒಂದು ಕಾಲಿನ ಎಕ್ಕಡವು ಪಾದದಿಂದ ಜಾರಿಹೋಗಿ ಕಾಲುವೆಯಲ್ಲಿ ಬಿದ್ದು ಕೊಚ್ಚಿ ಹೋಯಿತು. ಮಾರನೆಯದಿನ ತೀರ್ಥರಾಮನು ಮಿಕ್ಕ ಒಂದು ಜೋಡನ್ನು ಒಂದು ಪಾದಕ್ಕೂ, ಇನ್ನೊಂದು ಪಾದಕ್ಕೆ ಯಾರೋ ಉಪಯೋಗಿಸಿ ಬಿಸಾಡಿದ್ದ ಹೆಂಗಸಿನ ಕಾಲಿನ ಒಂದು ಹಳೆಯ ಜೋಡನ್ನೂ ಹಾಕಿಕೊಂಡು ಕಾಲೇಜಿಗೆ ಹೋದನಂತೆ! ಮುಂದೊಂದುದಿನ ಒಂಬತ್ತೂ ಕಾಲಾಣೆಗಳನ್ನು ಕೊಟ್ಟು ಒಂದು ಜೊತೆ ಜೋಡನ್ನು ತೆಗೆದುಕೊಂಡುದಾಯಿತು.

ಇದುವರೆಗೆ ಪ್ರಾಪ್ತವಾದುವಲ್ಲ! ಮುಂದೆ ಬಿ. ಎ. ತರಗತಿಯಲ್ಲಿ ಓದುತ್ತಿದ್ದಾಗ ಆತನಿಗೆ ಪ್ರಾಪ್ತವಾದ ಪರೀಕ್ಷೆಗಳು ಕೇವಲ ಹೃದಯದ್ರಾವಕವಿವೆ. ಬಿ. ಎ. ಪರೀಕ್ಷೆಗೆ ಆತನು ಮೊದಲನೆಯವರ್ಷ ಕುಳಿತಾಗ ವಿಶ್ವವಿದ್ಯಾನಿಲಯದವರು ಪರೀಕ್ಷಾ ವಿಚಾರದಲ್ಲಿ ನಡೆಯಿಸಿದ ಪದ್ಧತಿಯಿಂದ ಒಂದು ಬಗೆಯ ಗಲಭೆಯುಂಟಾಗಿ, ಯಾವ ವಿದ್ಯಾರ್ಥಿಗಳು ನಿಶ್ಚಯವಾಗಿಯೂ ತೇರ್ಗಡೆಯಾಗಬಹುದೆಂಬ ನಂಬಿಕೆಯಿತ್ತೋ ಅಂಥವರೆಲ್ಲರೂ ಅಗದೆ, ಯಾರನ್ನು ಪರೀಕ್ಷೆಗೆ ಕಳುಹಿಸಲಿಕ್ಕೇ ಉಪಾಧ್ಯಾಯರು ಹಿಂದೆಗೆದಿದ್ದರೋ ಅಂಥವರೇ ತೇರ್ಗಡೆಯಾಗಿದ್ದರು. ಇಂತಹ ಪರಿಸ್ಥಿತಿಯಿದ್ದಾಗ

ನಮ್ಮ ತೀರ್ಥರಾಮನೂ ಮೂರು ಅಂಕಗಳು ಕಡಿಮೆಯಾಗಿ ತೇರ್ಗಡೆ ಯಾಗಲಿಲ್ಲ. ಮಿಕ್ಕ ಎಲ್ಲಾ ಉತ್ತರ ಪತ್ರಿಕೆಗಳಿಂದಲೂ ಬಂದ ಅಂಕ ಗಳಿಂದ ಆತನು ಪಂಜಾಬುಪ್ರಾಂತದಲ್ಲೇ ಪ್ರಥಮ ವಿದ್ಯಾರ್ಥಿಯಾಗಿ ದ್ದರೂ ಇಂಗ್ಲೀಷಿನಲ್ಲಿ ಮೂರು ಅಂಕಗಳು ಕಡಮೆಯಾದುದರಿಂದ ಮಾತ್ರ ಆತನಿಗೆ ತೇರ್ಗಡೆಯಾಗಲಿಲ್ಲ. ಆದುದರಿಂದ ಮತ್ತೊಂದು ವರ್ಷ ಆ ತರ ಗತಿಯಲ್ಲೇ ಓದಬೇಕೆಂದಾಯಿತು. ನಷ್ಟವೆಂಬುದು ಅಷ್ಟುಮಾತ್ರಕ್ಕೇ ಅಲ್ಲ.— ಇನ್ನೂ ಒಂದು ಹೆಜ್ಜೆ ಮುಂದರಿಸಿತು. ಆವರೆಗೆ ಬರುತ್ತಿದ್ದ ಸರ್ಕಾರಿಯ ವಿದ್ಯಾರ್ಥಿ ವೇತನವು ಈ ತೇರ್ಗಡೆಯಾಗದ ಕಾರಣದಿಂದಲೇ ನಿಲ್ಲಿಸಲ್ಪಟ್ಟಿತು. ಆ ವರ್ಷ ತೇರ್ಗಡೆಯಾಗಿದ್ದರೆ, ಇಂಗ್ಲೆಂಡಿಗೆ ಗಣಿತ ವಿದ್ಯಾಭ್ಯಾಸಕ್ಕಾಗಿ ಹೋಗಲು ಸರ್ಕಾರದವರಿಂದ ದೊರಕಲಿದ್ದ ವಿದ್ಯಾರ್ಥಿ ವೇತನವೂ ಆ ಕಾರ ಣದಿಂದಲೇ ದೊರಕಲಿಲ್ಲ. ಸಾಲದುದಕ್ಕೆ ಕುಟುಂಬ ಸಮೇತನಾದ ಆತನು ತನ್ನ ಜೀವನಕ್ಕೂ ಸಂಪಾದಿಸಿಕೊಂಡು ಮುಂದೆ ಓದಲು ಹವಣಿಸಿಕೊಳ್ಳ ಬೇಕಾಯಿತು.

ಇಂತಹ ಮಹಾನಿರುತ್ಸಾಹಕರ ಸಂದರ್ಭಗಳಲ್ಲೂ ಆತನ ಹೃದಯ ದಲ್ಲಿದ್ದ ಧೈರ್ಯ ಉತ್ಸಾಹಗಳ ಜ್ಯೋತಿಯು ಅಳಿಯದಂತೆ ಕಾಪಾಡುತ್ತಿದ್ದ ಶಕ್ತಿಯಾವುದು ? ತೀರ್ಥರಾಮನ ಹೃದಯದಲ್ಲಿ ಭಗವಾನನ ವಿಷಯಕವಾದ ಅನಿರ್ವಚನೀಯವಾದ ಭಕ್ತಿಯು ಗಣಿಯೊಂದಿತ್ತು. ತನಗೆ ಅಸಹನೀಯ ದುಃ ಖವಾಗಲಿ ಪುರುಷಪ್ರಯತ್ನದಿಂದ ನಿವಾರಿಸಲಶಕ್ಯವಾದ ಕಷ್ಟವಾಗಲಿ ಪ್ರಾಪ್ತವಾದಾಗ ಆತನು, ಏಕಾಂತದಲ್ಲಿ ಕುಳಿತು ಭಗವಂತನನ್ನು ದೀನ ಮನಸ್ಕತೆಯಿಂದ ಪ್ರಾರ್ಥಿಸಿ - ಶರಣು ಹೋಗುವನು. ತನ್ನ ಸಕಲ ಶಕ್ತಿ ಸ್ವಾತಂತ್ರ್ಯಗಳನ್ನು ಆತನ ಅಡಿದಾವರೆಗಳಿಗೊಪ್ಪಿಸಿ, ದೀನನಾದ ತನ್ನನ್ನು ಕರು ಣಿಸೆಂದು ಬೇಡುವನು. ತನ್ನ ಸಕಲ ವಿಧ ಲೋಪಗಳನ್ನೂ ಮನ್ನಿಸೆಂದು ಕೇಳಿ ಕೊಳ್ಳುವನು. ಆ ವೇಳೆಗಳಲ್ಲೆಲ್ಲ ಆನಂದಬಾಷ್ಪವು ಕೆನ್ನೆಗಳಮೇಲೆ ಹರಿದು ಧಾರೆಧಾರೆಯಾಗಿ ಸುರಿದು ಹೋಗುವುದು. ಸ್ವರವು ಗದ್ಗದವಾಗು ವುದು. ಕಂಠದ ನರಗಳು ಉಬ್ಬಿಕೊಂಡು ಮಾತನಾಡಲು ಬಾರದಂತಾಗು ವುದು. ತೀರ್ಥರಾಮನು ಬಹು ಹೊತ್ತು ಬಾಹ್ಯವಸ್ತುಗಳ ಪರಿಜ್ಞಾನವೇ ಇಲ್ಲದಂತೆ ಇದ್ದು ಬಿಡುವನು. ಮೇಲ್ಕಂಡಂತೆ ಸಕಲ ಮಾರ್ಗಗಳೂ

ಮುಚ್ಚಿದಂತಾಗಿ ಯಾವ ಕಡೆಗೆ ನೋಡಿದರೂ ಸಿರುತ್ಸಾಹವೇ ತೋರು ತ್ತಿದ್ದಾಗ ಒಂದು ರಾತ್ರಿ ತೀರ್ಥರಾಮನು, ತನ್ನ ಕೊಠಡಿಯಲ್ಲಿ ಕುಳಿತು, ಪರಮ ಪಿತನನ್ನುದ್ದೇಶಿಸಿ ಪ್ರಾರ್ಥಿಸ ತೊಡಗಿದನು. ಆತನ ನೊಂದ ಹೃದ ಯದಿಂದ,—

**ತ್ವಮೇವ ಮಾತಾ ಚ ಪಿತಾ ತ್ವಮೇವ । ತ್ವಮೇವ ಬಂಧುಶ್ಚ ಸಖಾ ತ್ವಮೇವ ॥**
**ತ್ವಮೇವ ವಿದ್ಯಾದ್ರವಿಣಂ ತ್ವಮೇವ । ತ್ವಮೇವ ಸರ್ವಂ ಮಮ ದೇವದೇವ ॥ —**

ಎಂಬ ಪ್ರಾರ್ಥನೆಯು ಹೊರಬಿದ್ದಿತು. ಹೀಗೆ ಕೇವಲ ಅಸ್ವತಂತ್ರ್ರ ನಾಗಿ ಆತ್ಮ ಸಮರ್ಪಣೆಯನ್ನು ಮಾಡಿ, ತೀರ್ಥರಾಮನು ಹಾಗೆಯೇ ನಿದ್ರೆ ಹೋಗಿ ಬಿಟ್ಟನು. ಮಾರನೆಯ ಪ್ರಾತಃಕಾಲ ಎಂದಿನಂತೆ ಕಾಲೇಜಿಗೆ ಹೋಗಿ ಎರಡನೆಯ ವರ್ಷಕ್ಕಾಗಿ ಬಿ. ಎ. ತರಗತಿಗೆ ಸೇರಿದುದಾಯಿತು. ಭಗವಂತನ ಕರುಣೆಯು ಆತನಮೇಲೆ ಪ್ರವಹಿಸಿತೋ ಎಂಬಂತೆ, ಕಾಲೇ ಜಿನ ಆವರಣದಲ್ಲೇ ಇದ್ದ ಮಿಠಾಯಿ ವರ್ತಕನಾದ ಝುಂಡೂಮಲ್ ಎಂ ಬಾತನು ಮುಂದೆ ತನ್ನ ಮನೆಯಲ್ಲೇ ಊಟ ಮಾಡಬೇಕೆಂದು ಆತನನ್ನು ಪ್ರಾರ್ಥಿಸಿಕೊಂಡದ್ದಲ್ಲದೆ, ವಾಸಿಸುವುದಕ್ಕೆ ಒಂದು ಕೊಠಡಿಯನ್ನೂ, ಕೆಲವು ಬಟ್ಟೆಗಳನ್ನೂ ಕೊಟ್ಟು ಉಪಚರಿಸಿದನು. ರಘುನಾಥಮಲ್ ಎಂಬೊಬ್ಬ ದೊಡ್ಡಮನುಷ್ಯನು ಪುಸ್ತಕಗಳಿಗೆಂದು ಸ್ವಲ್ಪ ಹಣವನ್ನು ಕೊಟ್ಟದ್ದಲ್ಲದೆ, ಮುಂದೆ ಯಾವಾಗಲಾದರೂ ಆವಶ್ಯಕವಾದಾಗ ತನ್ನನ್ನು ಸಂಕೋಚವಿಲ್ಲದೆ, ಬಂದು ಕೇಳಬೇಕೆಂದೂ ಹೇಳಿದನು. ಮತ್ತು ಆ ದಿನ ಕಾಲೇಜಿನ ಪ್ರಿನ್ಸಿಪಾಲನು ತರಗತಿಯಲ್ಲಿ ಕುಳಿತಿದ್ದ ತೀರ್ಥರಾಮನನ್ನು ಕರೆಯಕಳುಹಿಸಿ, ಯಾರೋ ಒಬ್ಬ ದೊಡ್ಡ ಮನುಷ್ಯರು ತಮ್ಮ ಹೆಸರನ್ನು ಕೊಡಲಿಷ್ಟಪಡದೆ ೫೪ ರೂಪಾಯಿಗಳನ್ನು ಕೊಟ್ಟು, ಅವುಗಳನ್ನು ಆತನಿಗೆ ಕೊಡಬೇಕೆಂದು ಹೇಳಿ ಹೋಗಿದ್ದಾರೆಂದು ತಿಳಿಸಿ ಆ ರೂಪಾಯಿಗಳನ್ನು ಆತನ ಕೈಗೆ ಕೊಟ್ಟನು. ತೀರ್ಥರಾಮನು ಅದನ್ನು ತೆಗೆದುಕೊಳ್ಳಲು ಒಪ್ಪದಿದ್ದನಾದರೂ ಅದು ನಡೆಯಲಿಲ್ಲ. ಗಣಿತ ವಿದ್ಯಾ ಪ್ರೊಫೆಸರನಾದ ಮಿ|| ಗಿಲ್ಬರ್ಟ್ ಎಂಬ ಆಂಗ್ಲೇಯ ದೊಡ್ಡಮನುಷ್ಯನು ಆತನಿಗಾಗಿ ಪ್ರತಿ ತಿಂಗಳ ಅರ್ಧ ವಿದ್ಯಾರ್ಥಿ ದಕ್ಷಿಣೆ (ಕಾಲೇಜು ಫೀ) ಯನ್ನು ಕೊಡುತ್ತಾ

ಬಂದನು. ಮಾವನು ಬಂದು ಆತನ ಪತ್ನಿಯನ್ನು ಕರೆದೊಯ್ದನು. ಮುಂದೆ ಪರೀಕ್ಷೆಗೆ ಹಣ ಕಟ್ಟಬೇಕಾದ ಸಂದರ್ಭವೊದಗಿತು. ಆ ಸಂದರ್ಭಕ್ಕೆ ಮೂವತ್ತು ರೂಪಾಯಿಗಳು ಬೇಕಾಗಿದ್ದವು. ಅದಕ್ಕೇನು ಮಾಡುವುದೆಂದು ತೀರ್ಥರಾಮನು ಸ್ವಲ್ಪ ಯೋಚನೆಗೊಳಗಾಗಿದ್ದನು. ಹೀಗಿರಲು ಮುಂದೊಂದುದಿನ. ಆತನ ಕಷ್ಟ ಸಹಿಷ್ಣುತೆ, ಜ್ಞಾನಾರ್ಜನಾಭಿಲಾಷೆ, ನಿರಲಸಿಕೆ, ಬಡತನದಲ್ಲಿ ಮುಳುಗಿ ತೇಲುತ್ತಿದ್ದರೂ ಆತನಲ್ಲಿ ತೋರಿಬರುತ್ತಿದ್ದ ಧೈರ್ಯೋತ್ಸಾಹಾದಿಗಳು ಇವುಗಳನ್ನು ಕಂಡು ಸಂತುಷ್ಟನಾಗಿದ್ದ ಮೇಲ್ಕಂಡ ಮಿ|| ಗಿಲ್ಬರ್ಟ್ ಪ್ರಭುವು ಆತನನ್ನು ಒಂದು ಪಕ್ಕಕ್ಕೆ ಕರೆದು ಕಾಗದದಲ್ಲಿ ಸುತ್ತಿದ ಒಂದು ಪೊಟ್ಟಣವನ್ನು ಆತನ ಕೈಗಿಟ್ಟನು. ತೀರ್ಥರಾಮನು ಅದನ್ನು ಮನೆಗೆ ಒಯ್ದು ಬಿಚ್ಚಿ ನೋಡಲು ಅದರಲ್ಲಿ ಸರಿಯಾಗಿ ಮೂವತ್ತು ರೂಪಾಯಿಗಳಿದ್ದವು! ಆತನು ಆಗ ಎಷ್ಟುಮಟ್ಟಿನ ಕೃತಜ್ಞತೆಯಿಂದ ಭಗವಂತನನ್ನು ವಂದಿಸಿರಬಹುದು ! —

ಪರೀಕ್ಷೆಯು ಸಮೀಪಿಸುತ್ತಿದ್ದಂತೆಲ್ಲ ತೀರ್ಥರಾಮನು ರಾತ್ರಿಹಗಲುಗಳಾಗುವನ್ನೇ ಮರೆತನೋ ಎಂಬಂತೆ - ಕೇವಲ ಅಂತರ್ಮುಖಿಯಾದ ಯೋಗಿಯಂತೆ, ಪಾಠಪ್ರವಚನಾದಿಗಳ ಸಿದ್ಧತೆಯಲ್ಲಿ ತೊಡಗಿದ್ದನು. ಆತನು ಎಷ್ಟು ಹೊತ್ತಿಗೆ ಆಹಾರ ತಿನ್ನುವನು, ಯಾವಾಗ ನಿದ್ರಿಸುವನು, ಯಾವಾಗ ಏಳುವನು ಎಂಬುದು ಯಾರಿಗೂ ತಿಳಿಯುತ್ತಿರಲಿಲ್ಲ. ಒಂದೊಂದು ರಾತ್ರಿ ಗಣಿತದ ಕಠಿಣ ಸಮಸ್ಯೆಗಳನ್ನು ಬಿಡಿಸತೊಡಗಿ ಕುಳಿತನೆಂದರೆ ಹಾಗೆಯೇ ಬೆಳಗಾಗಿ ಹೋಗುವುದು! ಬೆಳಕಾದುದನ್ನು ಕಂಡು ರಾಮನು ಹತಾಶನಾಗುವನು. ಒಂದು ರಾತ್ರಿ ತಾನು ಎಂತಹ ಅಪಾಯಕರ ಪ್ರತಿಜ್ಞೆಯನ್ನು ಮಾಡಿಕೊಂಡನೆಂಬುದನ್ನು ಆತನೇ ಹೇಳಿದ್ದಾನೆ. ಆ ರಾತ್ರಿ ಪ್ರಬುದ್ಧ ಗಣಿತ ಶಾಸ್ತ್ರದಲ್ಲಿ ಬಹು ಕಠಿಣವಾದ ನಾಲ್ಕು ಪ್ರಶ್ನೆಗಳನ್ನು ಆರಿಸಿಕೊಂಡು, ಬೆಳಗಾಗುವುದರೊಳಗಾಗಿ ಅವುಗಳ ಫಲವನ್ನು ಕಂಡುಹಿಡಿಯಬೇಕು-ಹಾಗಿಲ್ಲದಿದ್ದರೆ ತನ್ನ ತಲೆಯನ್ನು ಮುಂಡದಿಂದ ಪ್ರತ್ಯೇಕಿಸಬೇಕು ; ಎಂದು ಪ್ರತಿಜ್ಞೆ ಮಾಡಿಕೊಂಡು, ಅದಕ್ಕಾಗಿ ಹರಿತವಾದ ಒಂದು ಚೂರಿಯನ್ನೂ ಪಕ್ಕದಲ್ಲಿಟ್ಟುಕೊಂಡನಂತೆ! ಮಧ್ಯ ರಾತ್ರಿಯ ವೇಳೆಗೆ ಮೂರು ಪ್ರಶ್ನೆಗಳನ್ನು ಬಿಡಿಸಲಾಯಿತು. ನಾಲ್ಕನೆಯ ಪ್ರಶ್ನೆಯೊಂದು ಅಸಾಧ್ಯ

ದುರ್ಘಟವಿದ್ದು - ಅದನ್ನು ಕುರಿತು ಯೋಚಿಸಿಕೊಂಡಿದ್ದಂತೆಯೇ ಮುಂ ಬೆಳಕು ಕಿಟಿಕಿಯ ಮೂಲಕ ಪ್ರವೇಶಿಸಿತು. ಅದನ್ನು ಕಂಡ ತೀರ್ಥ ರಾಮನು ಅವರೆಗೆ ಪ್ರಶ್ನೆಯ ಉತ್ತರವು ಸ್ಫುರಿಸಲಿಲ್ಲವಾದುದರಿಂದ, ಹಾಗೆ ಪ್ರತಿಜ್ಞಾಭಂಗವಾದ ತರುವಾಯ ಇನ್ನು ಬದುಕಿರಬಾರದೆಂದುಕೊಂಡು, ಮನೆಯ ಮೇಲ್ಭಾಗಕ್ಕೆ ನಡೆದು ಕತ್ತಿಗೆಯನ್ನು ಕೊಯ್ದುಕೊಳ್ಳಲೆಳಿಸಿ, ಆ ಚೂರಿಯ ಹರಿತವಾದ ಭಾಗವನ್ನು ಗಂಟಲಿಗೆ ಸೋಕಿಸಿದನು. ಸ್ವಲ್ಪ ಗಾಯವಾಗಿ ರಕ್ತವೂ ಸುರಿಯತೊಡಗಿತು. ಇನ್ನೇನು ಆಳಕ್ಕೆ ತಳ್ಳಬೇಕು! ಅಷ್ಟಾದರೆ ತೀರ್ಥರಾಮನ ಕತ್ತು ಕತ್ತರಿಸಿ ಅವನ ಅವತಾರವೇ ಪೂರ್ತಿ ಯಾಗುವುದು! ಆದರೆ ಅಷ್ಟರಲ್ಲಿ ಅಂತರಿಕ್ಷದ ವಾತಾವರಣ ಭಿತ್ತಿಯಲ್ಲಿ ಆ ಪ್ರಶ್ನೆಯ ಉತ್ತರವು ಬರೆದಂತೆ ಆತನ ದೃಷ್ಟಿಗೋಚರವಾಯಿತಂತೆ! ಅದನ್ನು ಕಂಡೊಡನೆಯೇ ತೀರ್ಥರಾಮನ ಮನಸ್ಸಿಗೆ ಪರಮಾನಂದವಾಯಿ ತೆಂದು ಹೇಳಬೇಕೇನು! ಬಹು ಅನುಭವಿಗಳೂ ಗಣಿತ ವಿದ್ಯಾ ಪ್ರವೀಣರೆಂಬ ಬಿರುದಿನಿಂದ ಶೋಭಿಸುತ್ತಿದ್ದವರೂ ಆದ ಅನೇಕಮಂದಿ ಕಾಲೇಜು ಪ್ರೊಫೆ ಸರರುಗಳಿಗೇ ಬಹು ವರ್ಷಗಳಿಂದಲೂ ಜೀರ್ಣವಾಗದೆ ಉಳಿದಿದ್ದ ಆ ಪ್ರಶ್ನೆ ಗಳನ್ನು ಬಿಡಿಸಿದ ಕೇವಲ ೨೦ ವರ್ಷಪ್ರಾಯದ ವಿದ್ಯಾರ್ಥಿ ತೀರ್ಥರಾಮ ನನ್ನು ಕಂಡು ಲಾಹೋರಿನ ಸರ್ಕಾರಿ ಕಾಲೇಜಿನ ಗಣಿತದ ಪ್ರೊಫೆಸರರಾದ ಮೂಖರ್ಜಿ ಎಂಬ ಬಂಗಾಳೀ ದೊಡ್ಡ ಮನುಷ್ಯನು ಪರಮಾಶ್ಚರ್ಯಪಟ್ಟು ಹೋದನು.

ಹೀಗೆ ಅಭೂತಪೂರ್ವ ವಿಧಾನಗಳಿಂದ ಅಭ್ಯಾಸದಲ್ಲಿ ತೊಡಗಿದ್ದ ತೀರ್ಥರಾಮನು ೧೮೯೩ನೆಯ ಸಂ||ದಲ್ಲಿ ಪರೀಕ್ಷೆಗೆ ಕುಳಿತನು. ಇಂಗ್ಲೀಷ್ ಪ್ರಶ್ನಪತ್ರಿಕೆಗೆ ಆತನು ಬರೆದ ಉತ್ತರಗಳಿಂದ ಪ್ರಥಮ ವರ್ಗದಲ್ಲಿ ತೇರ್ಗಡೆ ಯಾಗುವುದಕ್ಕೆ ಅವಶ್ಯಕವಿದ್ದುದಕ್ಕಿಂತಲೂ ಹೆಚ್ಚು ಅಂಕಗಳು ಬಂದುವು. ಗಣಿತ ಪತ್ರಿಕೆಯಲ್ಲಂತೂ ೧೫೦ ಕ್ಕೆ ೧೫೦ ಅಂಕಗಳು ಬಂದುವು. ಆತನಿಗೆ ಎಷ್ಟುಮಟ್ಟಿನ ಆತ್ಮವಿಶ್ವಾಸವಿತ್ತೆಂಬುದಕ್ಕೆ ನಿದರ್ಶನವಾಗಿ ಆಗ ಒಂದು ಸಂಗತಿ ನಡೆಯಿತಂತೆ! ಪರೀಕ್ಷಕನು ೧೩ ಲೆಕ್ಕಗಳನ್ನು ಕೊಟ್ಟು ಅವುಗಳಲ್ಲಿ ಯಾವುವಾದರೂ ೯ ಲೆಕ್ಕಗಳನ್ನು ಮಾಡಿದರೆ ಸಾಕೆಂದು ಅಪೇಕ್ಷಿಸಿದ್ದನು. ಪ್ರಶ್ನ ಪತ್ರಿಕೆಯಾದರೋ ಅತಿಶಯ ಕಠಿಣವಿದ್ದು ಸಾಮಾನ್ಯವಿದ್ಯಾರ್ಥಿಗಳು

ಮೂರು ನಾಲ್ಕನ್ನಾದರೂ ಮಾಡುವುದು ಎಷ್ಟೋ ಕಷ್ಟವೆಂಬಂತಿರಲು, ಆತನು ಆ ಹದಿಮೂರನ್ನೂ ಮಾಡಿ ಆ ಪೈಕಿ ಯಾವ ಒಂಬತ್ತನ್ನಾದರೂ ಆರಿಸಿ ತೆಗೆದುಕೊಳ್ಳಬಹುದೆಂದು ಪರೀಕ್ಷಕನನ್ನೇ ಕೇಳಿಕೊಂಡಿದ್ದನು. ಇನ್ನು ಆತನು ಬಿ. ಎ. ಪರೀಕ್ಷೆಯಲ್ಲೂ ಪ್ರಥಮವರ್ಗದಲ್ಲೇ ತೇರ್ಗಡೆ ಯಾದನೆಂದು ಹೇಳಬೇಕೇನು? ಬಿ. ಎ. ಪರೀಕ್ಷೆಯಾದ ಮೇಲೆ ಆತನಿಗೆ ಎರಡು ವಿದ್ಯಾರ್ಥಿ ವೇತನಗಳು ದೊರೆತು ಒಟ್ಟಕ್ಕೆ ತಿಂಗಳೊಂದಕ್ಕೆ ಅರುವತ್ತು ರೂಪಾಯಿಗಳು ಬರುವಂತಾಯಿತು. ಅಲ್ಲದೆ ಒಂದು ಸುವರ್ಣ ಪದಕವೂ, ಒಂದು 'ಗೌನ್' ಎಂಬ ನಿಲುವಂಗಿಯೂ, ಇತರ ಅನೇಕ ಬಹುಮಾನಗಳೂ ದೊರೆತುವು. ಇವೆಲ್ಲಕ್ಕೂ, ಭಗವಂತನಲ್ಲಿ ಆತನಿಗಿದ್ದ ಅನಿರ್ವಚನೀಯ ಭಕ್ತಿಯೂ - ಏಕಾಗ್ರ ಚಿತ್ತವೃತ್ತಿಯೂ ಕಾರಣಗಳೆಂದರೆ ಅದರಲ್ಲಿ ತಪ್ಪೇನು!

---

## — ಎಂ. ಎ. ಪರೀಕ್ಷೆ —

'ಬಿ. ಎ.' ಪರೀಕ್ಷೆಯಲ್ಲಿ ತೇರ್ಗಡೆಯಾದಾಗ ತೀರ್ಥರಾಮನಿಗೆ ಹತ್ತೊಂಬತ್ತೂವರೆ ವರ್ಷ ವಯಸ್ಸಾಗಿತ್ತು. ಮುಂದೆ ಮಿಷನ್ ಕಾಲೇಜಿನಲ್ಲಿ ಎಂ. ಎ. ತರಗತಿ ಇರಲಿಲ್ಲವಾದುದರಿಂದ ಆತನು ಸರ್ಕಾರಿ ಕಾಲೇಜಿನಲ್ಲಿ ಎಂ. ಎ. ತರಗತಿಗೆ ಸೇರಿ ಓದತೊಡಗಿದನು. ಸ್ವತಃ ಅಷ್ಟು ದೊಡ್ಡ ತರಗತಿಯಲ್ಲಿದ್ದು ಕಷ್ಟತರ ಪಾಠಗಳನ್ನು ಸಿದ್ಧಪಡಿಸಿಕೊಳ್ಳಬೇಕಾಗಿದ್ದ ಆ ಕಾಲದಲ್ಲೂ ಆತನು, ಯಾರಾದರೂ ಸಹಪಾಠಿಗಳು ತನ್ನಿಂದ ಸಹಾಯವನ್ನಪೇಕ್ಷಿಸಿದರೆಂದರೆ, ಕೈಯಲ್ಲಿನ ಕೆಲಸವನ್ನಾದರೂ ಬಿಟ್ಟು ಅವರಿಗೆ ಬೋಧಿಸುವನು. ಅಷ್ಟುಮಾತ್ರವೇ ಅಲ್ಲ - ತಾನು ವಿದ್ಯಾಭ್ಯಾಸಮಾಡಿದ್ದ ಫೋರ್ಮ್ಯಾನ್ ಕ್ರಿಶ್ಚಿಯನ್ ಕಾಲೇಜಿನಲ್ಲಿ ವಿನಾವೇತನ ಗಣಿತ ಅಧ್ಯಾಪಕನಾಗಿಯೂ ಎರಡು ವರ್ಷಕಾಲ ಕೆಲಸಮಾಡಿದನು. ಆತನ ಸಹೋದ್ಯೋಗಿ ಅಧ್ಯಾಪಕರೆಲ್ಲರೂ ಆತನನ್ನು ತಮ್ಮ ಉಪಾಧ್ಯಾಯ ಸಂಗಡಕ್ಕೇ ಒಂದು ರತ್ನಭೂಷಣವೋ ಎಂಬಂತೆ ಗೌರವದಿಂದ ಕಾಣುತ್ತಿದ್ದರು. ಬಿ. ಎ. ತರಗತಿಯಲ್ಲಿ ಉತ್ತಮ ರೀತಿಯಿಂದ ತೇರ್ಗಡೆಯಾದ ಒಡನೆಯೇ ಸಿವಿಲ್

ಸರ್ವಿಸ್ ಪರೀಕ್ಷೆಗೆ ಹೋಗಬೇಕೆಂದು ಕೆಲವರು ಹಿತಚಿಂತಕರು ಪ್ರೋತ್ಸಾಹಿಸಿದರಾದರೂ, ತೀರ್ಥರಾಮನು ಉಪಾಧ್ಯಾಯನೂ ಬೋಧಕನೂ ಆಗಿರುವುದೇ ತನಗೆ ಹೆಚ್ಚು ಪ್ರಿಯಕರವಾದ ಉದ್ಯೋಗವೆಂದು ನುಡಿದುಬಿಟ್ಟನು.

ಬಿ. ಎ. ಪರೀಕ್ಷೆಯಲ್ಲಿ ತೇರ್ಗಡೆಯಾಗುವವರೆಗೆ ತೀರ್ಥರಾಮನ ಆರ್ಥಿಕಸ್ಥಿತಿ ಮಾತ್ರವಲ್ಲ - ದೇಹಸ್ಥಿತಿಯೂ ಬಹು ಶೋಚನೀಯವಾಗಿದ್ದಿತು. ಅಜೀರ್ಣರೋಗವೂ ಮಲಬದ್ಧತೆಯೂ ಆತನಿಗೆ ಎಂದೂ ತಪ್ಪಿದುದಿಲ್ಲ. ಆದರೆ ಎಂ. ಎ. ತರಗತಿಗೆ ಬಂದ ಕಾಲಕ್ಕೆ - ಸ್ಥಿತಿಗತಿಗಳು ಬಹುಮಟ್ಟಿಗೆ ಸುಧಾರಿಸಿದುವು. ಆತನು ಶುದ್ಧ ಹವೆಯಲ್ಲಿ ತಿರುಗಾಡುವುದರಿಂದ ಉಂಟಾಗುವ ಪ್ರಯೋಜನವನ್ನು ಚೆನ್ನಾಗಿ ತಿಳಿದನು. ಪ್ರತಿದಿನ ಬೆಳಿಗ್ಗೆ ಸಾಯಂಕಾಲಗಳಲ್ಲಿ ತಪ್ಪದೆ ಅಂಗಸಾಧನೆಯನ್ನು ತೆಗೆದುಕೊಳ್ಳುತ್ತಿದ್ದನು. ಆಗಿನ ದಿನಗಳಲ್ಲಿ ಅನೇಕವೇಳೆ ಸುಮಾರು ೩೦ ಮೈಲುಗಳವರೆಗೂ ಆಯಾಸಗೊಳ್ಳದೆ ನಡೆಯುವುದೂ ಆತನಿಗೆ ಸರ್ವಸಾಮಾನ್ಯವಾಗಿದ್ದಿತಂತೆ! ಆತನೇ ಕೆಲಬಗೆಯ ಅಂಗಸಾಧನೆಗಳನ್ನು ಕಂಡುಹಿಡಿದಿದ್ದನು. ಆದರಿಂದ ಬಹು ಪ್ರಯೋಜನವೂ ಉಂಟಾಗುತ್ತಿದ್ದಿತು. ಪ್ರಾತಃಕಾಲ ಐದು ಗಂಟೆಗೆ ಎದ್ದರೆ ರಾತ್ರಿ ಹತ್ತು ಗಂಟೆಯವರೆಗೆ ಒಂದು ನಿಮಿಷವನ್ನೂ ಪೋಲುಮಾಡದೆ ಸರ್ವದಾ ಜ್ಞಾನಾರ್ಜನೆಯಲ್ಲೇ ನಿರತನಾಗಿರುವನು. ಆಹಾರವಿಹಾರಗಳಲ್ಲಿ ಬಹು ಮಿತವಾಗಿರುತ್ತಿದ್ದನು. - "ಜಠರವು ಆರೋಗ್ಯಸ್ಥಿತಿಯಲ್ಲಿದ್ದಾಗ ಮಾತ್ರವೇ ನಾವು ಉತ್ಸಾಹವಂತರೂ, ಚಟುವಟಿಕೆಯುಳ್ಳವರೂ ಆಗಿರಬಲ್ಲೆವು; ಆಗಲೇ ಮನಸ್ಸೂ ಏಕಾಗ್ರವಾಗಿದ್ದು ಬುದ್ಧಿಯೂ ತಿಳಿವಾಗಿರುವುದು. ಅಂತಹ ವೇಳೆಯಲ್ಲೇ ಹೃದಯ ಶುದ್ಧತೆಯಿಂದ ಸರ್ವೇಶ್ವರನನ್ನು ಧ್ಯಾನಿಸಲೂ ಸಾಧ್ಯವಿರುವುದು" ಎಂದು ಆತನು ಆಡಿಗಡಿಗೆ ಹೇಳುತ್ತಿದ್ದನು. ಗೊತ್ತಾದ ಹೊತ್ತುಗಳಲ್ಲಿ ಆಹಾರವನ್ನು ಬಹು ಮಿತವಾಗಿ ತೆಗೆದುಕೊಳ್ಳುತ್ತ - ತೆಗೆದುಕೊಂಡುದನ್ನು ಚೆನ್ನಾಗಿ ಜೀರ್ಣಿಸಿಕೊಳ್ಳುವ ವಿಚಾರದಲ್ಲಿ ಬಹು ಗಮನವಿಟ್ಟು ಆತನು ನಡೆದುಕೊಳ್ಳುತ್ತಿದ್ದನು.

೧೮೯೫ ರಲ್ಲಿ ಎಂದರೆ ತನ್ನ ೨೨ ನೆಯ ವಯಸ್ಸಿನಲ್ಲಿ ಗೋಸ್ವಾಮಿ ತೀರ್ಥರಾಮಜೀಯು ಎಂ. ಎ. ತರಗತಿಯಲ್ಲೂ ಅತ್ಯಧಿಕ ಅಂಕಗಳನ್ನು ಪಡೆದು ತೇರ್ಗಡೆಯಾದನೆಂಬ ವೃತ್ತಾಂತವು ಎಲ್ಲಾ ಕಡೆಯಲ್ಲೂ ಹಬ್ಬಿತು. ಆತನ ಉಪಾಧ್ಯಾಯರು ಮಾತ್ರವಲ್ಲ - ಅಂತಹ ರತ್ನವೊಂದನ್ನು ತಮ್ಮ ಕಾಲೇಜಿಗೆ - ತಮ್ಮ ನಗರಕ್ಕೆ - ತಮ್ಮ ದೇಶಕ್ಕೆ ಕರುಣಿಸಿದ್ದಕ್ಕಾಗಿ ಬಹುಮಂದಿ ವಿದ್ಯಾಭಿಮಾನಿಗಳು ತಾವು ಧನ್ಯರೆಂದುಕೊಂಡರು. ಆತನ ಶ್ರೇಯಃಕಾಂಕ್ಷಿಗಳಾಗಿದ್ದವರನೇಕರು ಕೃತಾರ್ಥರಾದೆವೆಂದುಕೊಂಡರು. ಅನೇಕರು ಪ್ರೇಮಪೂರ್ವಕ ಆತನನ್ನು ಅಭಿನಂದಿಸಿದರು. ಆತನ ಅಷ್ಟುಮಟ್ಟಿನ ಅಭಿವೃದ್ಧಿಗೆ ಕಾರಣಕರ್ತರಾದ ಪ್ರೊಫೆಸರರನ್ನೂ ವಂದಿಸಿದರು. ಆತನೂ ಶಿಶು ಸಹಜವಾದ ತನ್ನ ಸರಳತೆ ಸಹಜ ಭಾವಗಳಿಂದಲೂ, ನಿಷ್ಕಲ್ಮಷ ಪ್ರೇಮದಿಂದಲೂ ಎಲ್ಲರನ್ನೂ ವಂದಿಸಿ ಭಗವಂತನ ಅಪಾರ ಕರುಣೆಯನ್ನು ಮೌನ ವಾಕ್ಯಗಳಿಂದ ಕೊಂಡಾಡಿ, ತನ್ನ ಹೃದಯಸ್ಥವಾದ ಆತನ ಚರಣಗಳನ್ನು ಆನಂದಬಾಷ್ಪಗಳಿಂದ ತೊಳೆದನು.

---

## — ಉದ್ಯೋಗ —

ತೀರ್ಥರಾಮಜೀಯುವರು ಎಂ. ಎ. ಪರೀಕ್ಷೆಯಲ್ಲಿ ತೇರ್ಗಡೆಯಾದ ವಾರ್ತೆಯನ್ನು ಕೇಳಿದೊಡನೆಯೇ, ಲಾಹೋರಿನ ಸರ್ಕಾರಿ ಕಾಲೇಜಿನ ಪ್ರಿನ್ಸಿಪಾಲರಾದ ಮಿ॥ ಡಬ್ಲ್ಯು. ಬೆಲ್ ಎಂಬ ಆಂಗ್ಲೀಯ ದೊಡ್ಡ ಮನುಷ್ಯರು, ಆತನ ಅಸಾಧಾರಣ ಪ್ರಜ್ಞೆಯನ್ನು ಕಂಡು ಸಿವಿಲ್ ಸರ್ವಿಸ್ ಪರೀಕ್ಷೆಗೆ ಹೋಗಬಹುದೆಂದು ಮತ್ತೊಂದು ವೇಳೆ ಸಲಹೆ ಕೊಟ್ಟು - ಪ್ರೋತ್ಸಾಹಿಸಿದರು. ಆದರೆ ಕೇವಲ ವಿದ್ಯಾಭಿಮಾನಿಯಾದ ಆ ಮಹಾನುಭಾವರು,—'ಅಯ್ಯಾ ಇಷ್ಟು ಕಷ್ಟಪಟ್ಟು ಸಂಪಾದಿಸಿರುವ ಗಣಿತ ಶಾಸ್ತ್ರಜ್ಞಾನವೆಂಬ ಈ ಧಾನ್ಯವನ್ನು ಮಾರುವುದಕ್ಕಲ್ಲ - ಯೋಗ್ಯ ಪಾತ್ರರಲ್ಲಿ ಹಂಚಲು ಬಯಸುತ್ತೇನೆ" ಎಂದು ಹೇಳಿಬಿಟ್ಟರು—'ಹಾಗಾದರೆ ಗಣಿತಶಾಸ್ತ್ರಾಧ್ಯಯನದಲ್ಲೇ ಅತ್ಯುಚ್ಚಸ್ಥಾನವಾದ 'ಸೀನಿಯರ್ ರ್‍ಯಾಂಗ್ಲರ್' ಆಗಲು

ಕೇಂಬ್ರಿಡ್ಜಿಗೆ ಹೋಗಿರಿ' ಎಂದು, ಮತ್ತೆ ಕೆಲವರು ಸಲಹೆಕೊಟ್ಟರು. ಆದರೆ ಭಗವದಿಷ್ಟದಲ್ಲಿ 'ಸೀನಿಯರ್ ರ್ಯಾಂಗ್ಲರ್' ಗಿಂತಲೂ ಘನತರ ವಾದ ಮತ್ತೊಂದು ಸ್ಥಳವನ್ನು ಅವರು ಹೊಂದಬೇಕೆಂದಿದ್ದರಬಹುದು ಆದುದರಿಂದಲೇ ಅದೂ ತಪ್ಪಿಹೋಯಿತು.

ಪರೀಕ್ಷೆಯಾದ ಒಡನೆಯೇ ಉದ್ಯೋಗ ಸಿಕ್ಕದಿರಲು, ಕೆಲವು ದಿನ ಗಳವರೆಗೆ ಅವರು ಎಫ್. ಎ. ಮತ್ತು ಬಿ. ಎ. ವಿದ್ಯಾರ್ಥಿಗಳಿಗೆ ಗಣಿತ ವಿದ್ಯೆಯನ್ನು ಕಲಿಸುವ ತರಗತಿಯನ್ನು ತೆಗೆದು ಪಾಠ ಹೇಳುತ್ತಿದ್ದರು. ಆದರೆ ಅಷ್ಟರಲ್ಲಿ ದೇಹಕ್ಕೆ ಸ್ವಲ್ಪ ಅಸೌಖ್ಯವಾಗಲು ಮುರಲೀವಾಲಾಕ್ಕೆ ಹೋಗಿ ಕೆಲ ದಿನಗಳಿದ್ದು ಪುನಃ ಲಾಹೋರಿಗೆ ಬಂದು, ಸನಾತನ ಧರ್ಮ ಸಭೆಯ ಕಾರ್ಯದರ್ಶಿಯಾಗಿ ಕೆಲಸ ಮಾಡತೊಡಗಿದರು. ಮುಂದೆ ಕೆಲವು ದಿನಗಳಲ್ಲೇ ಸಯಲ್ಕೋಟೆ ಎಂಬಲ್ಲಿ ತಿಂಗಳೊಂದಕ್ಕೆ ೮೦ ರೂ. ಗಳ ವೇತ ನದ ಒಂದು ಉಪಾಧ್ಯಾಯ ಉದ್ಯೋಗ ದೊರೆಯಿತು. ಅವರು ಕೆಲಸಕ್ಕೆ ಸೇರಿದ ಬಹು ಸ್ವಲ್ಪ ದಿನಗಳಲ್ಲೇ ಅವರ ಕೀರ್ತಿಯು ಅನೇಕ ಸ್ಥಳಗಳಲ್ಲಿ ಹಬ್ಬಿ ಬಹುದೂರ ಪ್ರಾಂತಗಳಿಂದಲೂ ವಿದ್ಯಾರ್ಥಿಗಳು ಬಂದು ನೆರೆಯ ತೊಡಗಿದರು. ವಿದ್ಯಾರ್ಥಿಗಳೆಂದರೆ, ತೀರ್ಥರಾಮರು ತಮ್ಮ ಪ್ರಾಣ ವೆಂದೇ ಭಾವಿಸುತ್ತಿದ್ದರು. ವಿದ್ಯಾರ್ಥಿ ಬಾಲಕರು, ಏನು ಅಪೇಕ್ಷಿಸಿದರೂ ಇಲ್ಲವೆಂದು ಅವರ ಬಾಯಿಂದ ಬರುತ್ತಿರಲಿಲ್ಲ. ಬಾಲಕರಿಗಾಗಿ ಕೊಡದ ವಸ್ತುವಾವುದೂ ಅವರ ಬಳಿಯಿರಲಿಲ್ಲ. ಅವರ ಲೆಕ್ಕದಲ್ಲೇ ಎಷ್ಟೋ ಮಂದಿ ಹುಡುಗರು ನಿತ್ಯವೂ ಹಾಲು ಕುಡಿಯುವರು. ಅವರಿಗೆ ಬರುತ್ತಿದ್ದ ಸಂಬಳದ ಬಹು ಭಾಗವು ಈ ಬಗೆಗಾಗಿ ಖರ್ಚಾಗಿ ಹೋಗುವುದು. ಅವರ ಹೃದಯಮೂಲದಿಂದ ಉಕ್ಕಿಬರುತ್ತಿದ್ದ ದಯೆ ಮಮತೆ ಸ್ವಾರ್ಥ ತ್ಯಾಗಾದಿ ಸದ್ಗುಣಗಳು, ಅವರ ವಿದ್ಯಾರ್ಥಿವರ್ಗವು ಅವರನ್ನು ದೈವತಾಂಶವೋ ಎಂದು ಭಾವಿಸುವಂತೆ ಮಾಡಿಟ್ಟುವು.—

ಮುಂದೆ ಎರಡು ಮೂರು ತಿಂಗಳೊಳಗಾಗಿಯೇ, ಲಾಹೋರು ನಗರದ ಫೋರ್‌ಮ್ಯಾನ್ ಕ್ರಿಶ್ಚಿಯನ್ ಕಾಲೇಜಿಗೆ ಗಣಿತ ಶಾಸ್ತ್ರದ ಪ್ರೊಫೆಸರ ರಾಗಿ ಅವರು ನಿಗ್ರಾಮಿಸಲ್ಪಟ್ಟರು. ಅಲ್ಲಿ ಅವರಿಗೆ ಬರುತ್ತಿದ್ದ ಸಂಬಳವೂ ಹಾಗೆಯೇ ವಿನಿಯೋಗವಾಗುವುದು. ಅವರು, ಕೇವಲ ವೈರಾಗ್ಯ ಭಾವ

ವನ್ನು ತಾಳಿ, ತಮ್ಮ ತಿಂಡಿ ಬಟ್ಟೆ ಮುಂತಾದುವುಗಳನ್ನು ಕುರಿತು ಸ್ವಲ್ಪ ಮಾತ್ರವೂ ಗಮನಿಸದೆ ಬಂದುದನ್ನೆಲ್ಲ ಯೋಗ್ಯಪಾತ್ರದಲ್ಲಿ ಹಂಚಿಬಿಡು ತ್ತಿದ್ದರು. ಹೀಗೆ ಅವರು ಉದ್ಯೋಗದಲ್ಲಿದ್ದ ಕೇವಲ ಎರಡು ವರ್ಷ ಕಾಲವೂ ಗೃಹಸ್ಥಾಶ್ರಮದಿಂದ ವಾನಪ್ರಸ್ಥಾಶ್ರಮಕ್ಕೆ ಹೊರಡುವ ಸಿದ್ಧತೆ ಯಾಗಿಯೇ ಪರಿಣಮಿಸಿತಲ್ಲದೆ, ಲೌಕಿಕರೀತ್ಯಾ ಅಭಿವೃದ್ಧಿಯಾಗಿ, ಧನ ಕನಕ - ಅಧಿಕಾರ ಪದವಿಗಳನ್ನು ಗಳಿಸುವ ಚಿಂತೆಯಾಗಲಿಯೂ ಅವರನ್ನು ಸೋಕಲಿಲ್ಲ.—

ಗೃಹಸ್ಥಾಶ್ರಮದ ಅವರ ಜೀವಿತದ ವಿಷಯವಾಗಿ ಎಲ್ಲೂ ಉಲ್ಲೇಖಿ ಸಿಲ್ಲ - ಆದರೆ, ಅವರು ಮುಂದೆ ಅಮೆರಿಕಾದಲ್ಲಿ, 'ಗೃಹಸೌಖ್ಯ-ದಾಂಪತ್ಯ ಜೀವನ'ಎಂಬ ಉಪನ್ಯಾಸ ಕೊಡುತ್ತಾ,-- 'ಮನುಷ್ಯನು ವಿವಾಹವಾದೊಡ ನೆಯೇ ಎಂದರೆ, ಪತ್ನಿಯು ಮನೆಗೆ ಬಂದೊಡನೆಯೇ ಆಕೆಯನ್ನು ಪವಿತ್ರ ಭಾವನೆಯಿಂದಲೂ, ಆಧ್ಯಾತ್ಮಿಕ ಜೀವನದಲ್ಲಿ ಆಕೆಯು ತನ್ನ ಸಹಚರಿ ಎಂಬ ಭಾವನೆಯಿಂದಲೂ ನೋಡದೆ, ಕೇವಲ ಕಾಮೋಪಭೋಗ್ಯ ವಸ್ತುವೆಂದು ಭಾವಿಸಿ ಕಣ್ಣು ಕಾಣದೆ ನಡೆಯತೊಡಗುವುದರಿಂದಲೇ ಕುಟುಂಬದಲ್ಲಿ ಕೋಪತಾಪಗಳು, ರೋಗರುಜಿನಗಳು, ಅಶಾಂತಿ ದಾರಿದ್ರ್ಯ ಮುಂತಾದ ಸಕಲ ಕಷ್ಟಗಳೂ ಬಂದೊದಗುತ್ತವೆ. ಪತ್ನಿಯು ಮನೆಯಲ್ಲಿದ್ದರೂ, ಗೃಹಸ್ಥರು ನಿಷ್ಕಲ ಬ್ರಹ್ಮಚರ್ಯದಿಂದ ಇರುವುದು ಸಾಧ್ಯ' ಎಂದು ಹೇಳ ತೊಡಗಿ - ತಮ್ಮ ಅನುಭವವನ್ನೇ ಉದಹರಿಸುತ್ತ "ರಾಮನಿಗೂ (ರಾಮ ತೀರ್ಥ-ಪೂರ್ವಾಶ್ರಮ, ತೀರ್ಥರಾಮ) ಪತ್ನಿಯು ಜೊತೆಯಲ್ಲೇ ಇದ್ದಳು. ಹಾಗಿದ್ದಾಗ್ಯೂ ಎರಡು ವರ್ಷಕಾಲ ಆ ದಂಪತಿಗಳು ಕೇವಲ ಶಿಶು ಜೀವಿತ ದಂತೆ ಕಾಲಯಾಪನೆ ಮಾಡಿದರು. ಅವರಲ್ಲಿ ಕೋಪ ತಾಪಗಳಾಗಲೀ - ಅಪ್ರೀತಿ ಅಶಾಂತತೆಗಳಾಗಲೀ ಉದಯಿಸಲಿಲ್ಲ. ರಾಮನು ತನ್ನ ಪತ್ನಿಯನ್ನು ಕೇವಲ ಆತ್ಮಭಾವನೆಯಿಂದಲೇ - ಪವಿತ್ರ ಭಾವನೆಯಿಂದಲೇ ಕಾಣುತ್ತಿ ದ್ದನು. ಪವಿತ್ರ ಪ್ರೇಮವೇ ಅವರ ದಾಂಪತ್ಯ ಜೀವನದ ರಹಸ್ಯಸೂತ್ರ ವಾಗಿದ್ದಿತು" ಎಂದು ನುಡಿದಿದ್ದಾರೆ. ಇದರಿಂದ ಅವರ ಗೃಹಸ್ಥಾಶ್ರಮದ ಆಚರಣೆಯು ಎಷ್ಟು ವಿಶುದ್ಧವಾಗಿದ್ದಿತೆಂದು ತಿಳಿಯಬಹುದಲ್ಲವೆ!



## — ಭಕ್ತಿ ಪಾರವಶ್ಯತೆ —

ಸಂಸ್ಕೃತ ಭಾಷಾಭ್ಯಾಸ ಮಾಡಿದಾಗಿನಿಂದ ಅವರು, ಹಿಂದೆ ಪಾರ್ಸೀ ಉದ್ಗ್ರಂಥಗಳನ್ನು ಓದುತ್ತಿದ್ದುದಕ್ಕಿಂತಲೂ ಹೆಚ್ಚು ಆಸಕ್ತಿಯಿಂದ ಸಂಸ್ಕೃತ ಗ್ರಂಥಗಳನ್ನು ಓದತೊಡಗಿದರು. ಇತರ ಎಲ್ಲಾ ಗ್ರಂಥಗಳಿಗಿಂತಲೂ,- ಶ್ರೀಮದ್ಭಗವದ್ಗೀತೆಯು ಅವರಿಗೆ ಹೆಚ್ಚು ಪ್ರೀತಿಪಾತ್ರವಾಯಿತು. ಆ ಅಮರ ಗ್ರಂಥವನ್ನು ಅವರು ಮೇಲೆಮೇಲೆ-ಅನೇಕವೇಳೆ ಓದುತ್ತಾ, ಅದರ ಸಂಪೂರ್ಣ ಸಾರವನ್ನೂ ಗ್ರಹಿಸಿದರು. ಭಗವದ್ಗೀತೆಯನ್ನು ಓದಿ ಓದಿದ ಹಾಗೆಲ್ಲಾ, ಅವರಲ್ಲಿ ಚಿಕ್ಕಂದಿನಿಂದಲೂ ಬೆಳೆದು ಬಂದಿದ್ದ ಭಕ್ತಿಸಸಿಯು ಬಹು ಪುಷ್ಟಿಗೊಂಡು ಬೆಳೆಯತೊಡಗಿತು. ದಿವ್ಯ ಪೀತಾಂಬರವನ್ನು ಧರಿಸಿ, ನವಿಲುಗರಿಯಿಂದ ಅಲಂಕೃತವಾದ ಕಿರೀಟದಿಂದ ಒಪ್ಪುತ್ತ - ಪಿಳ್ಳಂಗೋವಿಯನ್ನು ಊದಿಕೊಂಡು ಕರುಗಳ ಮಂದೆಯನ್ನು ಕಾಯುತ್ತಿರುವ ನೀಲಮೇಘಶ್ಯಾಮನಾದ ಶ್ರೀಕೃಷ್ಣ ಮೂರ್ತಿಯನ್ನು ಕಣ್ಣಾರೆ ಕಾಣಬೇಕೆಂದು ಅವರು ಹಲವುವೇಳೆ ಹಂಬಲಿಸುವರು. ತಮ್ಮ ಇಷ್ಟದಂತೆ ಆ ಭಗವನ್ಮೂರ್ತಿಯನ್ನು ಕಾಣಲಾರದುದಕ್ಕಾಗಿ - ತಾಯಿಯನ್ನು ಕಾಣದೆ ಅಳುವ ಎಳೆಗರುವಿನಂತೆ ಗೋಳಿಟ್ಟು ಅಳುವರು. ಎಷ್ಟೋ ರಾತ್ರಿಗಳನ್ನು ಅಂತಹ ಅಳುವಿನಲ್ಲಿ ಕಳೆದು, ಬೆಳಗಾಗಿ ಏಳುವ ವೇಳೆಗೆ ಅವರ ಹಾಸಿಗೆ - ತಲೆದಿಂಬೆಲ್ಲ ಕಣ್ಣೀರಿನಿಂದ ನೆನೆದು ಹೋಗಿರುವುದು. ರಾತ್ರಿಕಾಲದಲ್ಲಿ ಆ ನಗರಕ್ಕೆ ಸಮೀಪದಲ್ಲಿದ್ದ ರಾವೀ ನದಿಯ ತೀರಕ್ಕೆ ಹೋಗಿ, ಅಲ್ಲಿ ಯಮುನಾತೀರ ವಿಹಾರಿಯಾದ - ಗೋಪೀ ಜನ ಮನೋಹರನಾದ ಶ್ರೀಕೃಷ್ಣಮೂರ್ತಿಯನ್ನು ದರ್ಶನ ಮಾಡಲೆಳಸಿ ರಾತ್ರಿ ಬಹು ಹೊತ್ತಿನವರೆಗೆ ಅಲ್ಲೇ ಇದ್ದುಬಿಡುವರು. ಅವರ ರಜಾ ದಿನಗಳೆಲ್ಲವೂ, ಹೃದಯಸ್ಥ ಮೂರ್ತಿಯಾದ ಶ್ರೀಕೃಷ್ಣನನ್ನು ದರ್ಶನ ಮಾಡಬೇಕೆಂಬ ಉತ್ಕಟೇಚ್ಛೆಯಲ್ಲೇ - ಧ್ಯಾನಸಮಾಧಿಯಲ್ಲೇ ಕಳೆದುಹೋಗುವುವು. ಸನಾತನ ಧರ್ಮ ಸಭೆಯಲ್ಲಿ ಶ್ರೀಕೃಷ್ಣನ ವಿಷಯದಲ್ಲಾಗಲೀ - ಭಕ್ತಿಯ ವಿಷಯದಲ್ಲಾಗಲೀ ಅವರು ಉಪನ್ಯಾಸ ಕೊಡತೊಡಗಿದರೆಂದರೆ ಅವರು ಬಾಯಿಂದ ಉಚ್ಚರಿಸುತ್ತಿದ್ದ ಒಂದೊಂದು ಮಾತೂ, ಆನಂದಬಾಷ್ಪಗಳಿಂದ ತೋಯದಲ್ಲದೆ ಹೊರಬೀಳದು. ಒಂದು ಸಾರಿ 'ಹಾ-ಕೃಷ್ಣಾ' ಎಂಬ

ವೇಳೆಗೆ ಅವರ ಮೈಯೆಲ್ಲವೂ ರೋಮಾಂಚವಾಗಿ ಪುಳಕಗಳೆದ್ದು, ಸಾಂದ್ರೀಭೂತವಾಗಿ ಆನಂದಬಾಷ್ಪವು ಸುರಿಯತೊಡಗುವುದು - ಮುಂದೆ ಕಂಠವು ಗದ್ಗದಿತವಾಗಿ ಬಾಯಿಂದ ಮಾತೇ ಹೊರಡದಂತಾಗುವುದು. ಗೋಪೀ ಮನೋವಲ್ಲಭನಾದ ಶ್ರೀಕೃಷ್ಣಮೂರ್ತಿಗೆ ಅವರ ಹೃದಯ ಸರ್ವಸ್ವವೂ ಸೂರೆಹೋಯಿತೋ ಎಂಬಂತೆ, ಅವರು ಬಾಹ್ಯ ಪ್ರಪಂಚದ ಸ್ಮರಣೆಯನ್ನೇ ಅರಿಯದೆ - ಸದಾ ಆ ಧ್ಯಾನದಲ್ಲೇ ಮಗ್ನರಾಗಿದ್ದು ಬಿಡುವರು. ಒಂದಾ ನೊಂದುವೇಳೆ, ಅವರು ಬೃಂದಾವನಕ್ಕೆ ಹೋಗಿ ಅಲ್ಲಿ ಎಲ್ಲರೊಂದಿಗೆ ಸ್ನಾನ ಮಾಡುತ್ತಿದ್ದಾಗ್ಗೆ ನೀಲಮೇಘವನ್ನು ಕಂಡು - ಒಡನೆಯೇ ಶ್ರೀಕೃಷ್ಣ ಮೂರ್ತಿಯ ಸ್ಮರಣೆಯುಂಟಾಗಲು, 'ಕೃಷ್ಣಾ' ಎಂದು ಒಂದುಸಾರಿ ಉಚ್ಚರಿಸಿ ಒಡನೆ ಆವೇಶ ಬಂದವರಂತೆ ಧ್ಯಾನಮಗ್ನರಾಗಿ ಬಿಟ್ಟ ಕಣ್ಣು ಗಳಿಂದ ಅಂತರಿಕ್ಷವನ್ನೇ ನೋಡುತ್ತಾ ಎಷ್ಟೋ ಹೊತ್ತು ಹಾಗೇ ನೀರಿ ನಲ್ಲೇ ನಿಂತುಬಿಟ್ಟರು. ಬಾಹ್ಯಜ್ಞಾನವೇ ಸಂಪೂರ್ಣವಾಗಿ ಲುಪ್ತವಾಗಿ ಹೋಯಿತು. ಆಗ ಆ ಕಾಲಮೇಘಮಾಲೆಯ ಮಧ್ಯದಲ್ಲಿ ಕಾಳಿಂಗನ ಹೆಡೆಯ ಮೇಲೆ ಕುಣಿದಾಡುತ್ತ - ಪಿಳ್ಳಂಗೋವಿಯನ್ನೂದುತ್ತಿದ್ದ ಪದ್ಮಪತ್ರಾಯ ತಾಕ್ಷನಾದ ಶ್ರೀಕೃಷ್ಣನ ದಿವ್ಯ ಸ್ವರೂಪದ ದರ್ಶನವಾಗಲು ತೀರ್ಥ ರಾಮರು ಪರಮಾನಂದಭರಿತರಾದರು.—ಹೃದಯ ತಾಪವು ನೀಗಿತು.

---

## — ಜಗದ್ಗುರು ದರ್ಶನ, ವೇದಾಂತ ಪ್ರವೇಶ —

ಹೀಗಿರುತ್ತಿರಲು ಅದೇ ಸಂದರ್ಭದಲ್ಲೇ ದ್ವಾರಕಾಪೀಠದ ಶ್ರೀ ಜಗದ್ಗುರು ಶಂಕರಾಚಾರ್ಯ ಮಠದ ಶ್ರೀ ರಾಜರಾಜೇಶ್ವರ ತೀರ್ಥರೆಂಬ ಸ್ವಾಮಿಗಳವರು ಲಾಹೋರಿಗೆ ದಯಮಾಡಿಸಿದರು. ಸನಾತನ ಧರ್ಮ ಸಭೆಯ ಕಾರ್ಯದರ್ಶಿಗಳಾಗಿದ್ದುದರಿಂದ ತೀರ್ಥರಾಮಜೀಯವರೇ ಅವ ರನ್ನು ಆಹ್ವಾನಿಸಿ ಉಪಚರಿಸಿ ಅವರ ಅನುಕೂಲತೆಗಳನ್ನೆಲ್ಲ ಗಮನಿಸಬೇಕಾ ಗಿದ್ದುದರಿಂದ ಅವರ ಸಮೀಪದಲ್ಲೇ ದಿನದ ಬಹು ಹೊತ್ತನ್ನು ಕಳೆಯಲು ಅನುಕೂಲವೊದಗಿತ್ತು. ಶ್ರೀಗಳವರು ಉಪನಿಷತ್ತುಗಳು ಮತ್ತು ವೇದಾಂತ ಶಾಸ್ತ್ರಾಧ್ಯಯನದಲ್ಲಿ ಅದ್ವಿತೀಯರೆನ್ನಿಸಿದ್ದರು. ಸಂಸ್ಕೃತ ಭಾಷಾ ವಿಷಯ ದಲ್ಲಂತೂ ಅವರಿಗೆ ಅನುಪಮೇಯ ಪಾಂಡಿತ್ಯವಿತ್ತು.

ಶ್ರೀಗಳವರೊಂದಿಗೆ ಸಂಭಾಷಣೆಯಿಂದಲೂ ಶಾಸ್ತ್ರ ವಿಷಯಕ ವಿಚಾರದಿಂದಲೂ, ವೇದಾಂತ ಶ್ರವಣದಿಂದಲೂ ಶ್ರೀಕೃಷ್ಣಮೂರ್ತಿಯ ಪಾದಪದ್ಮಗಳಲ್ಲಿ ಪ್ರವಹಿಸುತ್ತಿದ್ದ ತೀರ್ಥರಾಮಜೀಯವರ ಅಪಾರ ಭಕ್ತಿತರಂಗಿಣಿಯು ಆತ್ಮಜ್ಞಾನಾನ್ವೇಷಣದ ಕಡೆಗೆ ಹೊರಳಿತು. ಒಡನೆ ಅವರು ತಮ್ಮ ಸ್ವಭಾವ ಸಿದ್ಧವಾದ ಶ್ರದ್ಧೆ - ಉತ್ಸುಕತೆಗಳಿಂದ ಉಪನಿಷತ್ತುಗಳು ಮತ್ತು ಬ್ರಹ್ಮ ಸೂತ್ರಗಳನ್ನು ಪಠಿಸತೊಡಗಿದರು. ಜನಸಂಘದಿಂದ ದೂರವಿದ್ದು ಏಕಾಗ್ರ ಮನಸ್ಕತೆಯಿಂದ ಶಾಸ್ತ್ರವಿಚಾರ ಮಾಡಬೇಕೆಂದು ತೋರಲು, ಒಡನೆ ಹರಿದ್ವಾರ ಮತ್ತು ಹೃಷೀಕೇಶಗಳ ಬಳಿಯಲ್ಲಿ ವಾಸಿಸಲು ಸಂಕಲ್ಪಿಸಿ ೧೮೯೭ ನೆಯ ಆಗಸ್ಟ್ ತಿಂಗಳಲ್ಲಿ ಮನೆಯ ಎಲ್ಲರೊಂದಿಗೆ ಅಲ್ಲಿಗೆ ಹೊರಟರು. ಅಲ್ಲಿಯ ನಿರ್ಜನವೂ ಶಾಂತವೂ ನಿಷ್ಕಲ್ಮಷವೂ ಆದ ವಾತಾವರಣವು ಅವರ ಅಧ್ಯಾತ್ಮ ತತ್ತ್ವಾನ್ವೇಷಣೆಗೆ ಅಧಿಕ ಸಹಾಯ ಮಾಡುತ್ತಿತ್ತು. ಹೀಗೆ ಅಲ್ಲಿ ಕೆಲವು ದಿನಗಳಿರುವ ವೇಳೆಗೆ ಅವರ ಮನಸ್ಸು ಸಂಪೂರ್ಣವಾಗಿ ತತ್ತ್ವಜ್ಞಾನಮಯವಾಗಲು ಮುಂದೆ ತಮ್ಮ ಜೀವಿತವನ್ನೇ ಆತ್ಮತತ್ತ್ವಾನ್ವೇಷಣೆಗಾಗಿ ವಿನಿಯೋಗಿಸಬೇಕೆಂದು ಸಂಕಲ್ಪಿಸಿ, ದೀಪಾವಳಿಯಾದ ಮಾರನೆಯ ದಿನ (ಅಕ್ಟೋಬರು ೨೫.) ಲೌಕಿಕವನ್ನೂ ದೇಹಾಭಿಮಾನವನ್ನೂ ಸಂಪೂರ್ಣವಾಗಿ ತ್ಯಾಗಮಾಡಿದರು. ಆ ಸಂದರ್ಭದಲ್ಲಿ ಅವರ ತಂದೆಯವರಿಗೆ ಬರೆದ ಪತ್ರವೊಂದು ಅತ್ಯಂತ ಹೃದಯದ್ರಾವಕವಿದೆ. ಅದರ ಮುಖ್ಯ ಸಾರಾಂಶವು—'ರಾಮನು ಆತ್ಮತತ್ತ್ವಾನ್ವೇಷಣೆಗಾಗಿ ತನ್ನ ದೇಹವನ್ನು ಈ ದಿನ ಧಾರೆಯೆರೆದುಬಿಟ್ಟಿದ್ದಾನೆ. ಇನ್ನು ಮುಂದೆ ಅವನ ವಿಚಾರವನ್ನು ಸಂಪೂರ್ಣವಾಗಿ ಮರೆತುಬಿಡಿರಿ' ಎಂದಿತ್ತು. ಪ್ರಬುದ್ಧನಾದ ವಿದ್ಯಾವಂತನಾದ ತೇಜಸ್ವಿಯಾದ ಆ ತನ್ನ ಮಗನಿಂದ ಅವರೆಗೆ ತಾನಿದ್ದ ಸುಮಾರಿಕ್ತದೆಸೆಯು ತೀರಿ ಕುಟುಂಬ ಸ್ಥಿತಿಯು ಕಣ್ಣುತೆರೆದು ಮುಪ್ಪಿನಲ್ಲಿ ನಾಲ್ಕು ದಿನ ನಿಶ್ಚಿಂತೆಯಿಂದ ಇರಬಹುದೆಂದು ಯೋಚಿಸಿದ್ದ ಆ ವೃದ್ಧನಿಗೆ ಪಾಪ ಆ ಪತ್ರದ ವಿಚಾರವು ಸಿಡಿಲಿನಂತೆ ಹೃದಯ ವೇಧಕವಾಗಿರಬಹುದಲ್ಲವೆ! ಮುಂದೆ ೧೮೯೮ ನೆಯ ಫೆಬ್ರವರಿ ತಿಂಗಳಲ್ಲಿ ಲಾಹೋರಿಗೆ ಬಂದು, ತಾವು ಸ್ವಾನುಭವದಿಂದ ಪಡೆದ ಅದ್ವೈತಾನಂದವನ್ನು ಎಲ್ಲರೊಂದಿಗೆ ಸಹ ಅನುಭವಿಸಲೆಳಸಿ 'ಅದ್ವೈತಾಮೃತವರ್ಷಿಣಿ' ಎಂಬೊಂದು ಸಭೆಯನ್ನು ನಿರ್ಮಿಸಿ,

ವಾರಕ್ಕೊಂದುವೇಳೆ ಅದರಲ್ಲಿ ಉಪನ್ಯಾಸ ಕೊಡುತ್ತಾ, ಕೆಲವು ದಿನಗಳಿದ್ದರು. ಹೀಗೆ ಪಾರಲೌಕಿಕ ವಿಚಾರದಲ್ಲಿ ಸದಾ ಆಸಕ್ತರಾಗಿರುತ್ತಿದ್ದರೂ, ಒಂದು ಕ್ಷಣವೂ ವಿರಾಮವಿಲ್ಲದಂತೆ ಲೌಕಿಕ ಕೆಲಸ ಕಾರ್ಯಗಳಲ್ಲೂ ತೊಡಗಿರುತ್ತಿದ್ದರು. ೧೮೯೮ ನೆಯ ಇಸವಿಯಲ್ಲಿ ಅವರು ಲಾಹೋರಿನ ವಿದ್ಯಾರ್ಥಿ ವರ್ಗವನ್ನುದ್ದೇಶಿಸಿ,—'ಗಣಿತ ಶಾಸ್ತ್ರದಲ್ಲಿ ಪ್ರವೀಣರಾಗುವುದು ಹೇಗೆ' ಎಂಬ ವಿಚಾರದಲ್ಲೊಂದು ಅದ್ಭುತ ಉಪನ್ಯಾಸವನ್ನು ಕೊಟ್ಟರು. ಇದೇ ಅವರ ಮೊದಲನೆಯ ಪ್ರಕಟವಾದ ಉಪನ್ಯಾಸವು —

---

## — ಗ್ರಂಥವ್ಯಾಸಂಗ —

ಗ್ರಂಥವ್ಯಾಸಂಗ ವಿಚಾರದಲ್ಲಿ ಅವರಿಗಿದ್ದ ಆತುರತೆಯನ್ನು ಹೇಳಲಳವಲ್ಲ. ಮತವಿಚಾರದ ಸಮಸ್ತ ಗ್ರಂಥಗಳನ್ನೂ ಓದಿದರು. ಮಹರ್ಷಿ ಪ್ರಣೀತಗಳಾದ ಉಪನಿಷತ್ತುಗಳು ಪತಂಜಲಿ ಜೈಮಿನಿ ಕಣಾದ ಕಪಿಲ ವ್ಯಾಸ ಗೌತಮ ಶ್ರೀಕೃಷ್ಣ ಶಂಕರಾಚಾರ್ಯ ಪ್ರಭೃತಿ ಮಹಾ ಪುರುಷರಿಂದ ಉಕ್ತವಾದ ಸಮಸ್ತ ಗ್ರಂಥಗಳೂ ಅವರಿಗೆ ಕರತಲಾಮಲಕವಾಗಿದ್ದುವು. ಹಾಗೆಯೇ ಹಫೀಜ್, ಅತ್ತಾರ್, ಷಾಮ್ಸೆಟ್ಯಾಬ್ರಿಜ್, ಮೌಲಾನಾರಮ್ ಕಾಂತ್ ಎಂಬ ಪಾರ್ಶೀ ತತ್ವಜ್ಞಾನಿಗಳ ಗ್ರಂಥಗಳೂ, ಸ್ಕೋಪನ್ ಹಾರ್, ಫಿಚ್ಟೆ, ಹೀಗಲ್, ಗೋಥೆ, ಕಾರ್ಲೈಲ್ ಮುಂತಾದ ಪಾಶ್ಚಾತ್ಯ ತತ್ವಜ್ಞಾನಿಗಳ ಗ್ರಂಥಗಳೂ, ಅವುಗಳಂತೆಯೆ ತುಲಸೀದಾಸ್, ಸೂರದಾಸ್, ಕಬೀರ್ ತುಕಾರಾಂ ನಾನಕ್ ಮುಂತಾದ ಹಿಂದೀ ಮಹಾರಾಷ್ಟ್ರ ಕವಿಗಳ ಅವಿನಾಶಿ ಗ್ರಂಥರತ್ನಗಳೂ ಅವರಿಗೆ ಸ್ಫೂರ್ತಿದಾಯಕವೂ ಮಾರ್ಗದರ್ಶಕವೂ ಆಗಿದ್ದುವು. ಅವರಿಗೆ ಪಾರ್ಶಿ ಇಂಗ್ಲಿಷ್ ಹಿಂದೀ ಉರ್ದು ಮತ್ತು ಸಂಸ್ಕೃತ ಭಾಷೆಯ ಸಮಸ್ತ ತತ್ವ ಗ್ರಂಥಗಳೂ ಹೃದ್ಗತವಾಗಿದ್ದುವು. ೧೯೦೬ ನೆಯ ಸಂವತ್ಸರದಲ್ಲಿ ಅವರು ನಾಲ್ಕು ವೇದಗಳನ್ನೂ ಸ್ವರಪೂರ್ವಕ - ಮಂತ್ರ ಉಚ್ಚಾರ ಅರ್ಥ ಪ್ರಯೋಗ ಸಮೇತವಾಗಿ ಓದಿದರು. ಭೌತಿಕ ತತ್ವಶಾಸ್ತ್ರ-ರಸಾಯನಶಾಸ್ತ್ರ ವನಸ್ಪತಿಶಾಸ್ತ್ರ ಮುಂತಾದುವುಗಳಲ್ಲೂ ಅವರಿಗೆ ಪ್ರವೇಶವಿತ್ತು.— ಮಾತ್ರವಲ್ಲ ಸ್ಪೆನ್ಸರ್, ಡಾರ್ವಿನ್, ಟಿಂಡಲ್, ಹಕ್ಸ್ಲೀ, ಪ್ರೊ.

ಜೇಮ್ಸ್ ಮುಂತಾದವರ ಗ್ರಂಥಗಳ ಪರಿಚಯವೂ ಅವರಿಗೆ ವಿಶೇಷವಾಗಿತ್ತು. ಮುಂದೆ ಅಮೆರಿಕೆಯಲ್ಲಿದ್ದಾಗ್ಗೆ, ಕೇವಲ ಎರಡು ವರ್ಷಕಾಲದೊಳಗಾಗಿ ಹೆಚ್ಚುಕಡಮೆ ದಿನವೂ ಇರುತ್ತಿದ್ದ ಉಪನ್ಯಾಸಾದಿಗಳ ಗಲಭೆಯಲ್ಲೂ ಅಮೆರಿಕಾಖಂಡದ ಗ್ರಂಥ ಭಾಂಡಾರವನ್ನೆಲ್ಲ ಓದಿ ಮುಗಿಸಿದರು. ಇಂತಹ ಗ್ರಂಥವ್ಯಾಸಂಗಾಸಕ್ತಿಯೂ ಆತುರತೆಯೂ ಅಪೂರ್ವವಲ್ಲವೆ ? —



## — ಆ ತ್ಮ ಜ್ಞಾ ನಾ ನು ಭ ವ —

ಪರಸ್ಪರ ವಿರುದ್ಧಗಳೆನಿಸಬಹುದಾದ ಅನ್ಯಮಂದಿ ತಾತ್ವಿಕರ ಗ್ರಂಥಗಳನ್ನು ಪರಿಶೋಧಿಸಿದ್ದರಾದರೂ, ಅವರು ಒಂದನ್ನು ಭೂಷಿಸಿ ಮತ್ತೊಂದನ್ನು ದೂಷಿಸುವ ಉದ್ಯೋಗಕ್ಕೆ ಹೋಗದೆ, ಪ್ರತಿಯೊಬ್ಬರ ಗ್ರಂಥವನ್ನೂ ನಿಷ್ಪಕ್ಷಪಾತ ದೃಷ್ಟಿಯಿಂದ, ಆ ಯಾ ಗ್ರಂಥ ಕರ್ತರ ಸಿದ್ಧಾಂತ- ಮತ್ತು ಧ್ಯೇಯಗಳ ದೃಷ್ಟಿಯಿಂದಲೇ ವಿಮರ್ಶಿಸಿ ಅವುಗಳಲ್ಲಿದ್ದ ಸಾರವನ್ನು ಮಾತ್ರ ಗ್ರಹಿಸುತ್ತಿದ್ದರು. ಅವರು ಕೇವಲ ತಾತ್ವಿಕರು ಮಾತ್ರವಲ್ಲ, ವೈಜ್ಞಾನಿಕರು ಮಾತ್ರವಲ್ಲ, ಸಾಹಿತ್ಯಭಕ್ತರು ಮಾತ್ರವಲ್ಲ. ಈ ಎಲ್ಲವನ್ನೂ ಒಂದೇ ದೇಹದಲ್ಲಿ ಗಳಿಸಿದ ಮಹಾನುಭಾವರಾಗಿದ್ದರು. ಅತ್ಯುಚ್ಚತರ ಬೌದ್ಧಿಕ ಬೆಳವಣಿಗೆಯೊಂದಿಗೆ, ಅಲಕ್ಷ್ಯವಾದ ಆತ್ಮಿಕ ಬೆಳವಣಿಗೆಯೂ ಅಪೂರ್ವರೀತಿಯಿಂದ ಸೇರಿ ಅವರ ಜೀವಿತವು ಸಂಪೂರ್ಣತೆಯ ಕಡೆಗೆ ಸಾಗಿದ್ದಿತು. ಲಾಹೋರು ನಗರವಾಸವು ಅವರಿಗೆ ತೃಪ್ತಿಯನ್ನುಂಟುಮಾಡಲು ಅಶಕ್ತವಾಯಿತು. ತೌರುಮನೆಗೆಂದರೆ ಒಂಟಿಗಾಲಿನಿಂದ ನಿಂತಿರುವ ನವವಧುವಿನಂತೆ, ಅವಕಾಶ ದೊರೆಯಿತೆಂದರೆ, ಅವರು ಹಿಮಾಲಯದ ತಪ್ಪಲಿನ ಪರ್ವತಾರಣ್ಯಗಳಿಗೆ ಹೋಗಿ ಅಲ್ಲಿ ಉಪನಿಷತ್ತುಗಳ ರಹಸ್ಯ ವಿಚಾರಗಳನ್ನು ಕುರಿತು ಸದಾ ಧ್ಯಾನಮಗ್ನರಾಗಿರುವರು.

ತೀರ್ಥರಾಮಜೀಯವರು ೧೮೯೮ನೆಯ ಸಂವತ್ಸರದಲ್ಲಿ ಹೃಷೀಕೇಶದ ಸಮೀಪದಲ್ಲಿನ ಬ್ರಹ್ಮಪುರಿಯ ಕಾಡಿಗಾಗಿ ಹೊರಟರು. ಅವರ ಬಳಿ ಯಾವ ಪದಾರ್ಥವೂ ಇರಲಿಲ್ಲ. ಜೊತೆಗೆ ಯಾರೂ ಹೋಗಲಿಲ್ಲ. ಕೆಲವು ಉಪನಿಷದ್ಗ್ರಂಥಗಳನ್ನು ಮಾತ್ರ ಕೈಲಿ ತೆಗೆದುಕೊಂಡು, ಏಕಾಂಗಿಯಾಗಿ

ಆ ನಿರ್ಜನಾರಣ್ಯಕ್ಕೆ ನಡೆದು, ಮೇಲೆಮೇಲೆ ಉಪನಿಷದ್ವಾಕ್ಯಗಳ ರಹಸ್ಯಾರ್ಥಗಳನ್ನು ಕುರಿತು ಯೋಚಿಸುತ್ತ ಗಂಗಾತೀರದ ಬಂಡೆಗಳಮೇಲೆ ಕುಳಿತು ಕಾಲ ಕಳೆಯುತೊಡಗಿದರು. ರಾತ್ರಿಹಗಲುಗಳಾಗುವುದೂ, ಮಳೆಬಿಸಿಲುಗಳ ಉಪದ್ರವವೂ, ಹಸಿವು ನೀರಡಿಕೆಗಳ ಬಾಧೆಯೂ ಅವರ ಗಮನಕ್ಕೇ ಬರುತ್ತಿರಲಿಲ್ಲ. ಅವರ ಮನಸ್ಸೆಲ್ಲವೂ ಆತ್ಮಾನುಭವವನ್ನು ಹೊಂದಬೇಕೆಂಬುದರಲ್ಲಿ ಮಗ್ನವಾಗಿ ಹೋಗಿತ್ತು. ತಮ್ಮ ಇಚ್ಛಿತಾರ್ಥವು ಸಿದ್ಧಿಯಾಗದಿದ್ದರೆ ಆ ಪ್ರಯತ್ನದಲ್ಲೇ ದೇಹತ್ಯಾಗ ಮಾಡಲೂ ಆ ಧೀರರು ಸಿದ್ಧರಿದ್ದರು.

ಕೊನೆಗೊಂದುದಿನ ಪ್ರಾತಃಕಾಲದಲ್ಲಿ ಧ್ಯಾನಮಗ್ನರಾಗಿ ಕುಳಿತಿದ್ದ ಅವರಿಗೆ - ಅಲೌಕಿಕವಾದ ಅಪ್ರಮೇಯವಾದ ಬ್ರಹ್ಮಾನಂದಾನುಭವದ ಸೌಭಾಗ್ಯವು ಲಭ್ಯವಾಯಿತು. ಯಾವ ಆ ಸ್ಥಿತಿಯನ್ನು ಕುರಿತು ಯೋಚಿಸುವಲ್ಲಿ ಮನಸ್ಸೂ, ಬುದ್ಧಿ - ಚಿತ್ತಗಳೂ ಕೇವಲ ಅಶಕ್ತಗಳಾಗಿವೆಯೋ, ಯಾವ ಆ ಸ್ಥಿತಿಯನ್ನು ಕುರಿತು ವಾಕ್ಯವು ವರ್ಣಿಸಲರಿಯದೋ ಮತ್ತು ಯಾವ ಆ ಸ್ಥಿತಿಯು ಪ್ರಾಪ್ತವಾದಮೇಲೆ ಸಕಲವಿಧ ಸಂಶಯಗಳೂ ನಾಶವಾಗಿ - ಕರ್ಮ ಗ್ರಂಥಿಗಳೆಲ್ಲವೂ ಛಿದ್ರವಾಗಿ, ಆಶಾಮೋಹಗಳೆಲ್ಲವೂ ದಹಿಸಿಹೋಗಿ ಹೃದಯವೇದನೆಯೂ ಶಮನವಾಗುವುದೋ ಅಂತಹ ಅಚಿಂತನೀಯ - ಅನಿರ್ವಚನೀಯ, ಕೇವಲ ಅನುಭವೈಕವೇದ್ಯವಾದ ಆ ಸ್ಥಿತಿಯನ್ನು ಏನೆಂದು ವರ್ಣಿಸುವುದು ? ಹೇಗಿತ್ತೆಂದು ಹೇಳುವುದು ! ಅಂತಹ ಮಹತ್ಸುಖವನ್ನು ಅನುಭವಿಸಿದ ಆ ಧನ್ಯಜೀವಿ - ಮಹಾನುಭಾವರನ್ನು ಏನೆಂದು ಸ್ತುತಿಸುವುದು ! —

ಕೇವಲ ದುರ್ಲಭವೂ ಅಪೂರ್ವವೂ ಆದ ಆತ್ಮಜ್ಞಾನದ ಆ ಅನುಭವವಾದ ಮೇಲೆ ಅವರ ಹೃದಯಕವಾಟವು ತೆರೆದಂತಾಯಿತು. ಅಂತರ್ಜ್ಯೋತಿಯು ಪ್ರಕಾಶಿತವಾದಂತಾಯಿತು. ಸುತ್ತಲಿದ್ದ ಒಂದೊಂದು ವಸ್ತುವೂ, ಪ್ರಕೃತಿಯ ಸಮಸ್ತಸೃಷ್ಟಿಯೂ ನವನವೀನ ಸೌಂದರ್ಯದಿಂದ ಅವರ ಕಣ್ಣುಗಳಿಗೆ ತೋರಸಾಗಿತು. ಮುಖದಲ್ಲಿ ಒಂದು ಬಗೆಯ ಅಪೂರ್ವ ತೇಜಸ್ಸು ಉದಯಿಸಿತು. ಆವರೆಗೆ ಅವರು ಓದಿದ್ದ ವೇದಶಾಸ್ತ್ರಾದಿಗಳ ಅಂತರ್ಯ ರಹಸ್ಯಾರ್ಥಗಳೆಲ್ಲವೂ ಬಹು ಸ್ಪಷ್ಟರೀತಿಯಿಂದ ಅವರಿಗೆ ಗೋಚರಿಸತೊಡಗಿದುವು.— ಮುಂದೆ ಅವರು ಶ್ರುತಿಸ್ಮೃತಿಗಳ ವಿಚಾರದಲ್ಲಾಗಲೀ

ಮತ ಅಥವ ತತ್ವ ವಿಚಾರದಲ್ಲಾಗಲೀ, ರಾಜನೀತಿ ಅಥವ ಸಾಮಾಜಿಕ ನೀತಿಯ ವಿಚಾರದಲ್ಲಾಗಲೀ ಏನು ಹೇಳತೊಡಗಿದರೂ ಅದೆಲ್ಲವೂ ಒಂದು ಬಗೆಯ ಅಪೂರ್ವ ಕಳೆಯಿಂದ ಶೋಭಿಸತೊಡಗಿತು. ಅವರ ಬಾಯಿಂದ ಹೊರಡುತ್ತಿದ್ದ ಒಂದೊಂದು ಮಾತೂ ಒಂದು ಬಗೆಯ ದೈವೀಕ ಸೌಂದರ್ಯದಿಂದ ವ್ಯಾಪ್ತವಾಗಿ ಶ್ರೋತೃಗಳ ಕರ್ಣಗಳಿಗೆ ಅಮೃತಸೇಚನೆಯಂತೆ ಬೋಧವಾಗುತ್ತಿತ್ತು. ಅವರಿಗೆ ದೇಹವಾಸನೆಯು ಸಂಪೂರ್ಣ ಮರೆತು ಹೋಯಿತು. ವಿಶ್ವವನ್ನೇ ತಾವಾಗಿಯೂ, ತಮ್ಮನ್ನೇ ವಿಶ್ವವಾಗಿಯೂ ಭಾವಿಸಿ, ಆ ಮಹಾಮಹಿಮರು ಪೂರ್ವಯುಗದ ಮಹರ್ಷಿಗಳೋ ಎಂಬಂತೆ ಶೋಭಿಸತೊಡಗಿದರು.

---

## — ಶರೀರಮಾದ್ಯಂ ಖಲು ಧರ್ಮಸಾಧನಂ —

ನಮ್ಮ ಕಥಾನಾಯಕರು ತಮ್ಮ ಚಿಕ್ಕ ವಯಸ್ಸಿನಲ್ಲಿ ವಿಶೇಷ ದೇಹ ದಾರ್ಢ್ಯವಿಲ್ಲದೆ, ಒಂದಲ್ಲ ಒಂದು ರೋಗದಿಂದ ನರಳುತ್ತಲೇ ಇದ್ದರು. ಆದರೆ ಅವರಿಗೆ 'ಧರ್ಮಸಾಧನೆಗೆ ಮೂಲಭೂತವಾದುದು ಆರೋಗ್ಯ ಸ್ಥಿತಿಯಲ್ಲಿರುವ ದೇಹವು' ಎಂದು ತೋರಿದೊಡನೆಯೇ ಅಂಗಸಾಧನೆಮಾಡಿ ದೇಹವನ್ನು ಸುಸ್ಥಿತಿಯಲ್ಲಿಟ್ಟುಕೊಳ್ಳಲು ಶ್ರದ್ಧೆವಹಿಸಿದರು. ಅವರ ಮುಖ್ಯವಾದ ಅಂಗಸಾಧನೆಯೆಂದರೆ ನಡೆಯುವಿಕೆ! ದಿನವೊಂದಕ್ಕೆ ಮೂವತ್ತು ನಾಲ್ವತ್ತು ಮೈಲುಗಳನ್ನಾದರೂ ನಡೆಯುವರು. ಇದಲ್ಲದೆ ತಪ್ಪದೆ ದಿನಕ್ಕೆರಡುವೇಳೆ ಅಂಗಸಾಧನೆ ಮಾಡುವರು. ಸಾಯುವ ದಿನ ಸಹ - ಕೆಲವು ಗಂಟೆಗಳ ಮುಂಚೆ ಎಂದಿನಂತೆ ಅಂಗಸಾಧನೆ ಮಾಡದಿರಲಿಲ್ಲ. ಈ ಕ್ರಮಾನುಸರಣೆಯಿಂದ ಕೇವಲ ಎಲುಬಿನ ವಿಗ್ರಹದಂತಿದ್ದ ಅವರ ದೇಹವು ದೃಢಪಟ್ಟು ಮಾಂಸಖಂಡಗಳಿಂದ ತುಂಬಿತು. ಶುದ್ಧರಕ್ತವು ಪ್ರತಿಭಾಗದಲ್ಲೂ ಸಂಚರಿಸುತ್ತಿರಲು ದೇಹವು ದಿವ್ಯ ಸುವರ್ಣಛಾಯೆಯಿಂದ ಶೋಭಿಸತೊಡಗಿತು. ಮುಖವು ತೇಜಸ್ವಿಯಾಯಿತು. ಅವರಲ್ಲಿ ತೋರಿಬರುತ್ತಿದ್ದ ಲವಲವಿಕೆಯೂ ಉತ್ಸಾಹವೂ ಅವರ್ಣನೀಯವು. ನಡಿಗೆಯಲ್ಲಿ ಅವರನ್ನು ಮೀರಿಸಿದವರಿರಲಿಲ್ಲ. ಅಮೆರಿಕಾದಲ್ಲಿ ಒಂದುವೇಳೆ ನಾಲ್ವತ್ತು ಮೈಲು

ದೂರದ ನಡೆವ ಜೂಜಿನಲ್ಲಿ, ಕೇವಲ ವಿನೋದಕ್ಕಾಗಿ ಸೇರಿ, ಮೊದಲನೆ ಯವನಾಗಿ ಗೆದ್ದವನಿಗಿಂತಲೂ ಎರಡು ಗಂಟೆ ಮುಂಚಿತವಾಗಿಯೇ ಗುರಿ ಯನ್ನು ತಲುಪಿದರಂತೆ! ಹಿಮಾಲಯದಲ್ಲಿದ್ದಾಗ್ಗೆ ಕೇವಲ ಒಂದು ಕೌಪೀನ ವನ್ನು ಧರಿಸಿ ಗಂಗೋತ್ರಿ, ಯಮುನೋತ್ರಿ, ಬದರಿ, ಕೇದಾರನಾಥ್ ಮುಂ ತಾದ ಶಿಖರಗಳನ್ನು ನಿರ್ಭಯವಾಗಿ ಹತ್ತುವರು. ಕೈಯಿಟ್ಟರೆ ಕೊರೆದು ಹೋಗುವಂತಹ ಹಿಮಪ್ರವಾಹಗಳನ್ನು ನಿಶ್ಶಂಕೆಯಿಂದ ನಡೆದುಕೊಂಡೇ ದಾಟುವರು. ಮಳೆಗಾಲದಲ್ಲಿ ಗಂಗಾ ಪ್ರವಾಹವನ್ನು ನಿರ್ಭಯವಾಗಿ ಈಜಿ ದಾಟುವರು. 'ಭೂಮಿಯೇ ಹಾಸಿಗೆಯೂ ದಿಕ್ಕುಗಳೇ - ಅಂತರಿಕ್ಷವೇ ಹೊದಿಕೆಯೂ ಆಗಿರಲು ಹಿಮಗಡ್ಡೆಗಳಮೇಲೆ, ಮಹಾರಣ್ಯಗಳಲ್ಲಿ ಏಕಾಂಗಿ ಯಾಗಿ ಮಲಗಿಬಿಡುವರು. ಗಾಢಾಂಧಕಾರ ಕವಿದ ಮಹಾರಣ್ಯಗಳಲ್ಲಿ ರಾತ್ರಿವೇಳೆಯಲ್ಲಿ ಮರಣಭೀತಿಯು ಶಂಕೆಯೇ ಇಲ್ಲದೆ, ಎಲ್ಲಿಗೆಂದರಲ್ಲಿಗೆ ಹೋಗುವರು. ಕಾಡುಮೃಗಗಳೂ ದುಷ್ಟ ಪ್ರಾಣಿಗಳೂ ಅವರ ಒಡನಾಡಿ ಗಳೋ ಎಂಬಂತೆ ಇದ್ದುವೆಂದು ಹೇಳಬಹುದು. ಏಕೆಂದರೆ ಅವುಗಳಿಂದ ಅವರು ಎಷ್ಟುಮಾತ್ರಕ್ಕೂ ಭೀತರಾಗಿರಲಿಲ್ಲ. ಅವರು ವಾಸಿಸುತ್ತಿದ್ದ ಗುಹೆಯ ಸಮೀಪದಲ್ಲೇ ಮತ್ತೊಂದು ಬಿಲದಲ್ಲಿ ಒಂದು ಘಟಸರ್ಪವೂ ಇದ್ದಿತಂತೆ! ಅದು ಮುಖದ ಕಡೆಯಿಂದ ಬಿಲದಲ್ಲಿ ದೂರಲು ಪ್ರಾರಂಭಿಸಿ ದರೆ ಪೂರ್ತಿ ಅದರ ದೇಹವು ಬಿಲಪ್ರವೇಶ ಮಾಡುವುದಕ್ಕೆ ಮೂವತ್ತು ನಿಮಿ ಷವಾಗುತ್ತಿದ್ದಿತಂತೆ! ಅಂತಹ ಭಯಂಕರ ಘಟಸರ್ಪವು ಹತ್ತಿರದಲ್ಲೇ ಇದ್ದರೂ ತೀರ್ಥರಾಮಜೀಯವರು ಯಾವ ಬಗೆಯಲ್ಲೂ ಕಾತರಗೊಳ್ಳದೆ, ರಾತ್ರಿಯೆನ್ನದೆ - ಹಗಲೆನ್ನದೆ ಅಲ್ಲೆಲ್ಲಾ ಸುತ್ತುತ್ತಿದ್ದರು. ನಿರ್ಭಯವೂ ಧೈರ್ಯ ಸಾಹಸಗಳೂ, ಶಕ್ತಿ ತೇಜಸ್ವಿತೆಗಳೂ, ನಿರಲಸಿಕೆ ನಿಶ್ಚಲತೆಗಳೂ ಅವರಿಂದಲೇ ಹುಟ್ಟಿ ಬಂದುವೋ ಎಂಬಂತಿದ್ದರೂ, ಅವರು ಸಾತ್ವಿಕರೂ ಘನಗಾಂಭೀರ್ಯ ನಿಧಿಗಳೂ, ಹಸನ್ಮುಖಿಗಳೂ, ಅಹಂಕಾರ ಮಮಕಾರ ದಂಭಾದಿವರ್ಜಿತರೂ, ಶ್ರದ್ಧಾವಂತರೂ, ಜಿತೇಂದ್ರಿಯರೂ ಶಿಶುಸಹಜ ವಾದ ಸರಳ ಹೃದಯರೂ ನಿಷ್ಕಪಟಿಗಳೂ ಆಗಿದ್ದರು. ಅವರ ಹೃದಯಸ್ಥ ವಾಗಿದ್ದ ನಿರಂತರಾನಂದದ ತೆರೆಗಳೋ ಎಂಬಂತೆ ಮುಖದಲ್ಲಿ ಯಾವಾ ಗಲೂ ಮಂದಹಾಸವು ಶೋಭಿಸುತ್ತಿರುವುದು. ಪ್ರಸನ್ನ ನೇತ್ರಗಳಿಂದ

ಅವರು ಒಂದುಸಾರಿ ಯಾರನ್ನಾದರೂ ನೋಡಿದರೆಂದರೆ ಅವನ ಹೃದಯದ ತಾಪವೆಲ್ಲವೂ ನೀಗಿ ಅಲ್ಲಿ ನವಚೈತನ್ಯವು ಉತ್ಪನ್ನವಾಗುವಂತಿರುವುದು. ಸದಾ ಓಂ ಓಂ ಓಂ ಎಂಬ ಪವಿತ್ರ ಮಂತ್ರೋಚ್ಚಾರಣೆಯಿಂದ ತಾವು ಕುಳಿತ ನಿಂತ ನಡೆದಾಡಿದ ಪ್ರದೇಶವನ್ನೆಲ್ಲ ಪವಿತ್ರಗೊಳಿಸುತ್ತ, ಆ ಸಾಧುವರ್ಯರು, ಧರ್ಮೋದ್ಧಾರ - ದೇಶೋದ್ಧಾರಗಳಿಗಾಗಿ ಮಾತ್ರ ದೇಹಪಂಜರದಲ್ಲಿ ಸಿಲು ಕಿದ್ದರೋ ಎಂಬಂತೆ ಸದಾ ಆತ್ಮಮಯ ಚಿತ್ತರಾಗಿಯೇ ಇದ್ದುಬಿಡುವರು.

---

## — ಮತ - ವೇದಾಂತ —

ಆರ್ಷೇಯ ಗ್ರಂಥಗಳಲ್ಲಿ ಆಚಾರ್ಯರು ಬರೆದಿಟ್ಟಿರುವ ಸಿದ್ಧಾಂತ ವಾಕ್ಯಗಳನ್ನು ಗಿಳಿಪಾಠದಂತೆ ಒಪ್ಪಿಸುವುದೇ ಮತಧರ್ಮಪಾಲನೆಯೆಂದು ತೀರ್ಥರಾಮಜಿಯವರು ಎಷ್ಟುಮಾತ್ರಕ್ಕೂ ಒಪ್ಪುತ್ತಿರಲಿಲ್ಲ. ಧಾರ್ಮಿಕ ವಿಚಾರದಲ್ಲಿ ಯಾವುದಾದರೊಂದು ಮಾತನ್ನು ಹೇಳಬೇಕಾದರೆ, ಅದನ್ನು ತಮ್ಮ ಜೀವನದಲ್ಲಿ ಆಚರಿಸಲು ಸಾಧ್ಯವೇ ಎಂಬುದನ್ನು ನೋಡಿ - ಅಲ್ಲಲ್ಲ ಮೊದಲು ಆಚರಿಸಿ, ತರುವಾಯ ಹೇಳುತ್ತಿದ್ದರು. ಹೀಗೆ ಮಾಡಬೇಕು, ಹಾಗೆಮಾಡಬೇಕು ಎಂದು, ಪರರಿಗೆ ಹೇಳುವುದಲ್ಲ,—ಹೀಗೆ ಹಾಗೆ ಪ್ರತಿ ಯೊಬ್ಬನೂ ಮಾಡಿದರೇಯೇ ಮುಂದೆ ಗತಿಯೆಂಬುದು ಅವರ ಅಭಿಪ್ರಾಯ ವಾಗಿತ್ತು. ಪ್ರತಿಯೊಬ್ಬನೂ ತನ್ನಲ್ಲಿರುವ ಆತ್ಮನನ್ನು ಸರ್ವಪ್ರಯತ್ನಗ ಳಿಂದ ತಿಳಿಯಲು ಯತ್ನಿಸಬೇಕೆಂದು ಅವರು ಒತ್ತಿ ಹೇಳುತ್ತಿದ್ದರು. ಆತ್ಮ ತತ್ತ್ವಾನ್ವೇಷಣೆಗಾಗಿ ಹೊರಡುವವನಿಗೆ, ಅಹಂಕಾರವು ದೊಡ್ಡ ಪ್ರತಿಬಂಧಕ ವಾಗುತ್ತದೆಯೆಂಬುದೂ ಅದನ್ನು ಸಂಪೂರ್ಣವಾಗಿ ಹುಟ್ಟಡಗಿಸಿದಲ್ಲದೆ ವಿಶ್ವವ್ಯಾಪ್ತವಾದ ಆತ್ಮತತ್ವವನ್ನು ತಿಳಿಯುವ ಪ್ರಯತ್ನವು ಸಾಗದೆಂಬುದೂ ಅವರ ಮತ. "ಆತ್ಮಸಿದ್ಧಿಗಾಗಿ ಪ್ರಯತ್ನಿಸುವಲ್ಲಿ ಮಾರ್ಗವು ಎಲ್ಲರಿಗೂ ಒಂದೇ ರೀತಿಯಾಗಿರದು; ಕೆಲವರಿಗೆ ಮುಳ್ಳಿನ ಹಾಸಿಗೆಯಾಗಿಯೂ ಮತ್ತೆ ಕೆಲವರಿಗೆ ಮಲ್ಲಿಗೆಯ ಹಾಸಿಗೆಯಾಗಿಯೂ ಇದ್ದೀತು; ಇದರೂ ಆದೊಂದು ಕಾರ್ಯಕ್ಕಾಗಿ ಎಂತಹ ಕಷ್ಟನಷ್ಟಗಳನ್ನು ಅನುಭವಿಸಲಿಕ್ಕಾದರೂ, ಸರ್ವಸ್ವ ವನ್ನೂ ಕೊನೆಗೆ ಪ್ರಾಣವನ್ನಾದರೂ ತ್ಯಜಿಸಲಿಕ್ಕಾದರೂ ಮಾನವನು ಸಿದ್ಧನಾಗಿರಬೇಕೆ"ಂದು ಅವರು ಅಡಿಗಡಿಗೆ ಹೇಳುತ್ತಿದ್ದರು.

ವೇದಾಂತ ಶಾಸ್ತ್ರವನ್ನು ನಮ್ಮ ಕಥಾನಾಯಕರು ತರ್ಕವಾದಕ್ಕಾಗಿ ಯಲ್ಲ; ಪಾಂಡಿತ್ಯಪ್ರದರ್ಶನಕ್ಕಾಗಿಯಲ್ಲ; ಅಥವ ಪರೋಪದೇಶಕ್ಕಾಗಿಯೂ ಅಲ್ಲ, ತಮ್ಮ ಸ್ವಂತ ಆಚರಣೆಗಾಗಿ ಅಭ್ಯಸಿಸಿದ್ದರು. ಅವರ ವೇದಾಂತಮಾ ರ್ಗಾನುಸರಣೆಯಲ್ಲಿ ಒಣಶಾಸ್ತ್ರವಿರಲಿಲ್ಲ. ಜೀರ್ಣವಾಗದ ದೊಡ್ಡ ದೊಡ್ಡ ಶ್ರುತಿವಾಕ್ಯಗಳನ್ನು ಉದಹರಿಸುವ ವಾಗಾಡಂಬರವಿರಲಿಲ್ಲ. ಅವರು ವೇದಾಂತ ತತ್ವರಹಸ್ಯಗಳನ್ನು ತಮ್ಮ ಜೀವಿತದ ಜೀವಾಳವನ್ನಾಗಿಸಿದ್ದರು. ತನುವನ್ನೂ ಮನೋಬುದ್ಧಿಗಳನ್ನೂ ಅಹಂಕಾರವನ್ನೂ, ತಮ್ಮದೆಂದಿದ್ದ ಸಮಸ್ತವನ್ನೂ ಅವರು ವಿಶ್ವಪ್ರೇಮದ ಹೋಮವೇದಿಕೆಯಲ್ಲಿ ಬಲಿದಾನ ವಾಗಿ ಅರ್ಪಿಸಿದ್ದರು. ಯಾವ ಸ್ಥಿತಿಯಲ್ಲಿ ಮನಸ್ಸು ಪ್ರತ್ಯೇಕ ವ್ಯಕ್ತಿತ್ವ ವನ್ನು ಮರೆತು ವಿಶ್ವಮೂರ್ತಿಯಲ್ಲಿ ಲೀನವಾಗುವುದೋ, ಎಲ್ಲಿ ಸಮಸ್ತ ವಿಧವಾದ ತರ್ಕವೂ ಅಡಗಿ ಸಕಲವಿಧ ಸಂಶಯಗಳೂ ಉಡುಗಿ ಮನಸ್ಸು ನಿರಂತರಾನಂದವನ್ನು ಅನುಭವಮಾಡುವುದೋ ಅಂತಹ ಪರಮ ದುರ್ಲಭ ವಾದ ಆ ಸ್ಥಿತಿಯಿಂದ - ಆ ದೃಷ್ಟಿಯಿಂದ ಅವರು ಜಗದ ಜೀವಿಗಳನ್ನು ನೋಡುವರು. ನಮಗೆ ಲೋಪದೋಷಗಳಿಂದ ಕೂಡಿದುದೆಂದೂ, ಅಪೂ ರ್ಣವಾದುದೆಂದೂ ತೋರುವ ಈ ಸೃಷ್ಟಿಯು, ಆ ದೃಷ್ಟಿಯಿಂದ ಅವರಿಗೆ ಪರಮ ಸೌಂದರ್ಯಯುಕ್ತವಾಗಿ ಕಾಣಿಸುವುದು. ಸರ್ವಾಂಗ ಸಂಪೂ ರ್ಣತೆಯಲ್ಲದೆ ಭಿನ್ನತೆಯೇ ಅವರಿಗೆ ಗೋಚರಿಸದು.—

---

## — ಮಾ ನ ಪ್ರ ಸ್ಥಾ ತ್ರ ಮ —

೧೮೯೯ ನೆಯ ಏಪ್ರಿಲ್ ಮೇ ತಿಂಗಳುಗಳಲ್ಲಿ ಅವರು ಕಾಶ್ಮೀರ ದೇಶ ದಲ್ಲಿ ಸಂಚಾರ ಹೊರಟರು. ಆ ದೇಶದ ಶ್ರೀನಗರ ಮುಂತಾದ ಪ್ರಸಿದ್ಧ ಪಟ್ಟಣಗಳನ್ನು ಸಂದರ್ಶಿಸಿ, ಅಮರನಾಥ ಕ್ಷೇತ್ರದ ಯಾತ್ರೆಯನ್ನೂ ತೀರಿ ಸಿಕೊಂಡು, ಲಾಹೋರಿಗೆ ಹಿಂದಿರುಗುವ ವೇಳೆಗೆ ಅವರಿಗೆ ದೇಹದಲ್ಲಿ ಅಸೌಖ್ಯ ತೋರಿತು. ಜ್ವರವೂ ಕಿಬ್ಬೊಟ್ಟೆಯಲ್ಲಿನ ನೋವೂ ಸಹಿಸಲಸಾಧ್ಯ ವೆಂಬಂತಾದುವು. ಒಂದುದಿನ ರಾತ್ರೆಯಂತೂ ಎಲ್ಲರೂ ಅವರ ಆಸೆ ಯನ್ನು ಬಿಟ್ಟುಬಿಟ್ಟಿದ್ದರು. ಆದರೆ ಅವರಿಂದ ಮುಂದೆ ಆಗಬೇಕಾದ

ಕಾರ್ಯಕ್ಕಾಗಿ ಭಗವಂತನೇ ಉಳಿಸಿದನೋ ಎಂಬಂತೆ ಬಾಹ್ಯ ಪ್ರಜ್ಞಾ ವಿಹೀನರಾಗಿದ್ದ ಅವರ ಅಷ್ಟು ಉತ್ಕಟಾವಸ್ಥೆಯಲ್ಲಿದ್ದ ರೋಗವು ಮಾರನೆಯ ಪ್ರಾತಃಕಾಲವೆಂಬ ವೇಳೆಗೆ ಚೆನ್ನಾಗಿ ಗುಣತೋರಲು ನಿದ್ರೆಯಿಂದ ಎದ್ದವ ರಂತೆ ಮೇಲಕ್ಕೆದ್ದರು. ಮುಂದೆ ಅವರು ತಮ್ಮ ಹೃದಯದಲ್ಲಿ ಪ್ರಕಾ ಶಿತವಾದ ವಿಚಾರಗಳು ಸಾಧ್ಯವಾದಷ್ಟು ಶೀಘ್ರವಾಗಿ ಲೋಕಕ್ಕೆ ತಿಳಿಯ ಬೇಕೆಂದು ಆಸಿಸಿ, ಅದಕ್ಕಾಗಿ 'ಅಲಿಫ' ಎಂಬೊಂದು ಉದರ್ೂ ಭಾಷೆಯ ಪತ್ರವನ್ನು ಹೊರಡಿಸತೊಡಗಿದರು. ಅದರಲ್ಲಿ ಬಹು ವಿಚಕ್ಷಣೆಯಿಂದ ತಾವೇ ಅಮೌಲ್ಯವಾದ ಅನೇಕ ಲೇಖನಗಳನ್ನು ಬರೆಯುತ್ತಿದ್ದರು. ನಂತರ ಕೆಲವು ದಿನಗಳಲ್ಲಿ ಅವರಿಗೆ ಸಮುದ್ರದ ವೈಭವ ಗಾಂಭೀರ್ಯಗಳನ್ನು ನೋ ಡಬೇಕೆನ್ನಿಸಿತು. ಒಡನೆ ಕೈಯಲ್ಲಿ ಖರ್ಚಿಗಾಗಿ ಒಂದು ಬಿಡಿಕಾಸನ್ನೂ ತೆಗೆದುಕೊಳ್ಳದೆ ಕರಾಚಿಗೆ ಹೊರಟರು. ಅವರ ವಿದ್ವತ್ತು ತಪಶ್ಚರ್ಯೆ ಮುಂತಾದುವುಗಳ ಕೀರ್ತಿಯು ಅವರಿಗಿಂತಲೂ ಮುಂಚಿತವಾಗಿಯೇ ಆ ಸ್ಥಳವನ್ನು ತಲುಪಿದ್ದುದರಿಂದ ಆ ನಗರವಾಸಿಗಳು ಅವರನ್ನು ಬಹು ಗೌರವ ದಿಂದ ಎದುರುಗೊಂಡು ಆದರಿಸಿದರು.

ಅಲ್ಲಿಂದ ಹಿಂತಿರುಗಿ ಲಾಹೋರನ್ನು ಸೇರಿದರೆಂಬ ವೇಳೆಗೆ ಅವರಿಗೆ, ಇವರೆಗೆ ಕಾಲೇಜಿನಲ್ಲಿ ದಿನಕ್ಕೆರಡು ಗಂಟೆಗಳಂತೆ ಮಾಡುತ್ತಿದ್ದ ಕೆಲಸವೂ ಬಹು ಭಾರವಾಗಿ ತೋರಿತು;—ಎಂದರೆ, ಆತ್ಮ ವಿಚಾರವನ್ನು ಬಿಟ್ಟು ಅಷ್ಟು ಸ್ವಲ್ಪ ಕಾಲವನ್ನೂ ಇತರ ವಿಚಾರಗಳಲ್ಲಿ ತೊಡಗಿಸಲು ಅವರಿಗೆ ಅಸಾಧ್ಯ ವೆನ್ನಿಸಿತು. ಮನಸ್ಸು ಸಂಪೂರ್ಣವಾಗಿ ತತ್ವವಿಚಾರ ವ್ಯಾಪ್ತವಾಗಿರಲು, ಮನೆಯಲ್ಲಾಗಲೀ ಜನಸಂಘದಿಂದ ಕೂಡಿದ ಪಟ್ಟಣವಾಸದಲ್ಲಾಗಲೀ ಇರಲು ಸಾಧ್ಯವಿಲ್ಲದೆ, ಅವರು ಕೆಲಸಕ್ಕೆ ರಾಜೀನಾಮೆಯನ್ನು ಕಳುಹಿಸಿ ಹೆಂಡತಿ ಮಕ್ಕಳೊಂದಿಗೂ ಮತ್ತೆ ಎರಡು ಮೂರು ಮಂದಿ ಅನುಯಾಯಿ ಗಳೊಂದಿಗೂ ಹೊರಟು ಹರಿದ್ವಾರವನ್ನು ಸೇರಿ, ಅಲ್ಲಿಂದ ದೇವಪ್ರಯಾ ಗದ ಮಾರ್ಗವಾಗಿ ತೆಹರಿಯನ್ನು ತಲುಪಿ, ಅಲ್ಲಿಯ ನಿರ್ಜನಾರಣ್ಯದಲ್ಲಿ - ಗಂಗಾತೀರದಲ್ಲಿ ಒಂದು ಆಶ್ರಮವನ್ನು ಕಲ್ಪಿಸಿಕೊಂಡು ವಾಸಿಸತೊಡಗಿದರು.

'ಭಗವಂತನು ಸರ್ವಲೋಕ ರಕ್ಷಕನು. ಭಕ್ತರು ಎಲ್ಲಿ ಎಂತಹ ಸ್ಥಿತಿಯಲ್ಲಿದ್ದರೂ ಅವರನ್ನು ಕಾಪಾಡುವವನು ಆತನೇ' ಎಂಬ ವಿಷಯದಲ್ಲಿ

ಅವರಿಗಿದ್ದ ಶ್ರದ್ಧಾಭಕ್ತಿಗೆ ಉದಾಹರಣೆಯಾಗಿ ಅಲ್ಲಿ ಒಂದು ಸಂಗತಿ ನಡೆಯಿತು. ತೀರ್ಥರಾಮರು ತಮ್ಮ ಅನುಯಾಯಿಗಳನ್ನು ಕುರಿತು ತಮ್ಮಲ್ಲಿದ್ದ ವಸ್ತುಗಳನ್ನೆಲ್ಲಾ ಗಂಗೆಗೆ ಸಮರ್ಪಿಸಿ ಭಕ್ತಿಶ್ರದ್ಧೆಗಳಿಂದ ಭಗವಧ್ಯಾನಪರರಾಗಿರೆಂದು ಬೋಧಿಸಿದರು. ಹಾಗೆಯೇ ಎಲ್ಲರೂ ತಮ್ಮಲ್ಲಿದ್ದ ಸಕಲ ಪದಾರ್ಥಗಳನ್ನೂ ಗಂಗೆಯಲ್ಲಿ ಎಸೆದು ನಿಶ್ಚಿಂತರಾಗಿ ದೇವರನ್ನು ಧ್ಯಾನಿಸುತ್ತಾ ಕುಳಿತರು. ಮಧ್ಯಾಹ್ನವಾಯಿತೆಂಬ ವೇಳೆಗೆ, ಆಶ್ಚರ್ಯವಾಶ್ಚರ್ಯವು! ಸ್ವಾಮಿ ರಾಮನಾಥನೆಂಬೊಬ್ಬ ಕಲ್ಕತ್ತೆಯ ಗೃಹಸ್ಥನು ಗಂಗೋತ್ರಿಗೆ ಯಾತ್ರೆಹೋಗಲು ಆ ಮಾರ್ಗವಾಗಿಯೇ ಬಂದು, ಸಮಾಧಿಮಗ್ನರಾಗಿದ್ದ ತೀರ್ಥರಾಮರಿಗೆ ನಮಸ್ಕರಿಸಿ, ಇತರರಿಂದ ಅಲ್ಲಿನ ವಿಚಾರವನ್ನೆಲ್ಲ ಕೇಳಿ ತಿಳಿದು, ಸಮೀಪದ ಗ್ರಾಮದಲ್ಲಿದ್ದ ಅಂಗಡಿಯವನನ್ನು ಕರೆಯಿಸಿ, ಆ ಆಶ್ರಮದಲ್ಲ ವಾಸಿಸುತ್ತಿದ್ದವರಿಗೆ ತನ್ನ ಖರ್ಚಿನಿಂದ ಒಂದು ತಿಂಗಳಿಗೆ ಬೇಕಾದಷ್ಟು ಪದಾರ್ಥಗಳನ್ನು ಕೊಡಿಸಿ, ತೀರ್ಥರಾಮಜೀಯವರ ಪಾದ ರಜವನ್ನು ಶಿರಸ್ಸಿನಲ್ಲಿ ಧಾರಣಮಾಡಿಕೊಂಡು ಹೊರಟುಹೋದನು.

ಅಪೂರ್ವವಾದ ಈ ಸಂಗತಿಯು ನಡೆದ ತರುವಾಯ ಆಶ್ರಮವಾಸಿಗಳೆಲ್ಲರೂ ಪರಮಾಶ್ಚರ್ಯಮಗ್ನರಾಗಿ, ಮುಂದೆ ಭಗವಂತನಲ್ಲಿ ಇನ್ನೂ ಹೆಚ್ಚಿನ ಶ್ರದ್ಧಾಭಕ್ತಿಗಳನ್ನು ಇಟ್ಟು ಧ್ಯಾನನಿಷ್ಠೆಗಳಿಂದ ಇರತೊಡಗಿದರು. ಲಾಹೋರಿನ ಜನಸಂಘದ ಗಲಭೆಯು ತಪ್ಪಿದುದರಿಂದ ತೀರ್ಥರಾಮರ ಮನಸ್ಸು ಶಾಂತವಾಗಿ ನೂತನೋತ್ಸಾಹದಿಂದ 'ಅಲಿಫ' ಪತ್ರಿಕೆಗೆ ಅವರು ಅನೇಕ ಅಪೂರ್ವ ಅಧ್ಯಾತ್ಮಿಕ ವಿಚಾರಗಳಲ್ಲಿ ಲೇಖನಗಳನ್ನು ಬರೆದು ಕಳುಹಿಸತೊಡಗಿದರು.

---

## — ಸನ್ಯಾಸ —

"ತೀರ್ಥರಾಮರು, ರಾಮತೀರ್ಥರಾದರು."

ಮುಂದೆ ಒಂದಾನೊಂದುದಿನ ಮಧ್ಯರಾತ್ರಿ. ಎಲ್ಲರೂ ಆಶ್ರಮದಲ್ಲಿ ಮಲಗಿ ನಿದ್ರಿಸುತ್ತಿದ್ದಾರೆ; ತೀರ್ಥರಾಮರು ಎದ್ದು ಏಕಾಂಗಿಯಾಗಿ ಹೊರಹೊರಟರು. ಎಲ್ಲಿಗೆಂದು ಅವರಿಗೇ ತಿಳಿಯದು! ಆದರೆ ಅವರು

ಹೊರಟ ಮಾರ್ಗಮಾತ್ರ ಉತ್ತರಕಾಶಿಯ ಕಡೆಗೆ ಹೋಗುತ್ತಿತ್ತು. ಗಾಢಾಂಧಕಾರ, ಮಾತ್ರವಲ್ಲ - ಹೆಜ್ಜೆಯೇ ಕಾಣಿಸದು. ಎಲ್ಲಿ ನೋಡಿದರೂ ನಿಶ್ಶಬ್ದ. ಪ್ರಕೃತಿಯು ಸ್ತಬ್ಧವಾಗಿದೆ. ಸಾಲದುದಕ್ಕೆ ಅಗಾಧ ಕಾರ್ಮೋಡ, ಆಗಾಗ್ಗೆ ಗುಡುಗು ಮಿಂಚುಗಳು! ಏಕಾಂಗಿಯಾಗಿ ಹೋಗುತ್ತಿರುವ ಅವರಮೇಲೆ ಕುಂಭದ್ರೋಣವಾಗಿ ಮಳೆಸುರಿಯುತ್ತಿದೆ. ಕೊಡೆಯಿಲ್ಲ, ಪಾದರಕ್ಷೆಯಿಲ್ಲ, ಮೈತುಂಬ ಬಟ್ಟೆಯಿಲ್ಲ. ಕೇವಲ ಉಟ್ಟುದೊಂದು ಪಂಚೆ. ಮಾರ್ಗವೋ ಕಡಿದಾದ ಪರ್ವತಾರಣ್ಯಗಳಲ್ಲಿ ಹೋಗುತ್ತಿದೆ. ಪಕ್ಕದ ಉನ್ನತವಾದ ಬೆಟ್ಟಗಳಿಂದ ಗಿರಿನದೀ ಪ್ರವಾಹಗಳು ರಭಸದಿಂದ ಸುರಿಯುತ್ತಿವೆ. ಹೋಗುತ್ತ ಹೋಗುತ್ತ ಇದ್ದಂತೆಯೇ ಅವರೆಗೆ ನಡೆದು ಬರುತ್ತಿದ್ದ ಮಾರ್ಗವೂ ಅದೃಶ್ಯವಾಯಿತು. ಮುಂದೆ-ಮುಂದೇನು? ಎದುರಿಗೊಂದು ಕಡಿದಾದ ದೊಡ್ಡಬಂಡೆ. ಅದಕ್ಕಾಗಿ ತೀರ್ಥರಾಮರು ಅಪ್ರತಿಭರಾಗಲಿಲ್ಲ. ಆ ಬಂಡೆಯಮೇಲೆ ಹತ್ತಿ ದಾಟಿ ಮುಂದುವರಿಯಬೇಕೆಂದು, ಆ ಬಂಡೆಯ ಸಂದುಗೊಂದುಗಳಿಂದ ನೇತಾಡುತ್ತಿದ್ದ ಹುಲ್ಲುಗಳನ್ನು ಹಿಡಿದುಕೊಂಡು ಅದರ ಮೇಲಕ್ಕೆ ಹತ್ತಲು ಪ್ರಯತ್ನಿಸುತ್ತಿದ್ದಾರೆ. ಹಿಮಗಡ್ಡೆಗಳಿಂದಲೂ, ಸುರಿಯುತ್ತಿರುವ ಮಳೆಯ ನೀರಿನಿಂದಲೂ ಕಾಲಿಟ್ಟರೇ ಜಾರಿಹೋಗುತ್ತಿರುವ ಆ ಬಂಡೆಯಮೇಲೆ ಹತ್ತುವುದೆಂತು! - ಬಹು ಅನುಭವಿಗಳೂ, ಜನ್ಮತಃ ಅರಣ್ಯವಾಸಿಗಳೂ ಸಹ ಆ ದೃಶ್ಯವನ್ನು ನೋಡಿ ನಡುಗಬಹುದು! ಸ್ವಲ್ಪ ಹೊತ್ತಿನೊಳಗಾಗಿ ಅತಿಶಯ ಚಪಲತೆಯಿಂದ ತೀರ್ಥರಾಮರು ಹೇಗೋ ಹತ್ತಿ, ಆ ಬಂಡೆಯ ಮೇಲೆ ನಿಂತು, 'ಓಂ, ಓಂ, ಓಂ,' ಎಂದು ಬಂಧಮುಕ್ತವಾದ ವಿಹಂಗಮದಂತೆ ಕೇಕೆ ಹಾಕುತ್ತಿದ್ದಾರೆ. ಅವರ ಆನಂದಕ್ಕೆ ಪಾರವಿಲ್ಲ. ಆಹಾ, ಮೃತ್ಯುವನ್ನು ಸಹ ಇಷ್ಟು ಮಟ್ಟಿಗೆ ದುರ್ಲಕ್ಷಿಸಿ ಆತ್ಮಾನಂದಸಾಗರದಲ್ಲಿ ಮುಳುಗಿರುವ ಧೀರನಾರು!

ಆಶ್ರಮದಲ್ಲಿ ಏಕಾಏಕಿ ತೀರ್ಥರಾಮರು ಕಾಣದಿದ್ದ ಪರಿಯು ಅವರ ಪತ್ನಿಗೆ ಬಹು ಭೀತಿಯನ್ನುಂಟುಮಾಡಿತು. ಎಲ್ಲಿಗೆ ಹೋದರೆಂಬುದು ತಿಳಿಯಲಿಲ್ಲ. ಪಾಪ, ಚಿರದುಃಖಿನಿಯಾದ ಆ ಸಾಧ್ವಿಗೆ ಈ ಅಗಲಿಕೆಯು ಅಸಹನೀಯವಾಗಿ ದೇಹದಲ್ಲಿ ಅಸೌಖ್ಯ ತೋರಿತು. ಮುಂದೆ ನಾಲ್ಕಾರು ದಿನಗಳಲ್ಲೇ ತೀರ್ಥರಾಮರು ಹಿಂದಿರುಗಿ ಬಂದರಾದರೂ ಆಕೆಗೆ ಆಸಾ

ಖ್ಯವು ನಿವಾರಣೆಯಾಗಲಿಲ್ಲ. ಆದುದರಿಂದ ಶಿಷ್ಯರಾದ ನಾರಾಯಣಸ್ವಾಮಿ ಯವರು ಅವರೆಲ್ಲರನ್ನೂ ಕರೆದುಕೊಂಡು ಮೈದಾನ ಪ್ರದೇಶಕ್ಕೆ ಹೊರಟು ನಡೆದರು.

ಇದಾದ ತರುವಾಯ ಆರು ತಿಂಗಳಕಾಲ ತೀರ್ಥರಾಮರು ಆ ಮಹಾ ರಣ್ಯಗಳಲ್ಲೇ ವಾಸಿಸುತ್ತ ಸದಾ ಧ್ಯಾನಮಗ್ನರಾಗಿರುತ್ತಿದ್ದರು. ಆಮೇಲೆ ಶ್ರೀ ವಿವೇಕಾನಂದರು, ಮಹಾಸಮಾಧಿಯನ್ನು ಹೊಂದುವುದಕ್ಕೆ ಕೆಲವು ದಿನಗಳಿಗೆ ಮುಂಚೆ, ಅಲ್ಲಿಂದ ಹೊರಟು ಕೆಳಕ್ಕೆ ಬಂದು ಸನ್ಯಾಸಾಶ್ರಮ ವನ್ನು ಸ್ವೀಕಾರಮಾಡಲು ಇಚ್ಛಿಸಿದರು. ಶಾರದಾಪೀಠದ ಶ್ರೀ ಶಂಕ ರಾಚಾರ್ಯ ಸ್ವಾಮಿಗಳವರು ಅವರಿಗೆ ತಾವು ಯಾವಾಗ ಸನ್ಯಾಸಾಶ್ರಮ ಸ್ವೀಕಾರ ಮಾಡಲು ಸಿದ್ಧರಾದೆವೆಂದು ತೋರುವುದೋ ಆಗ ಪವಿತ್ರಗಂಗಾ ತೀರದಲ್ಲಿ ಆ ರೀತಿ ಮಾಡಬಹುದೆಂದು ಅನುಮತಿಸಿದ್ದರು. ಆ ಮೇರೆಗೆ, ಮುಂದೊಂದು ದಿನ ತೀರ್ಥರಾಮರು ಪವಿತ್ರವಾದ ಆ ದೇವತರಂಗಿಣಿಯ ಒಂದು ನಡುಗುಡ್ಡೆಯಲ್ಲಿ ಕುಳಿತು ಸದಾ ಓಂ, ಓಂ, ಓಂ, ಎಂಬ ಮಂ ತ್ರೋಚ್ಚಾರಣೆಯಲ್ಲೇ ಮಗ್ನರಾಗಿ - ಗುರುಸ್ಮರಣ ಪೂರ್ವಕ, ತಮ್ಮ ಯಜ್ಞೋಪವೀತವನ್ನು ತೆಗೆದು ರಭಸದಿಂದ ಹರಿಯುತ್ತಿದ್ದ ಆ ಗಂಗಾಪ್ರವಾ ಹದಲ್ಲಿ ತೇಲಿಸಿಬಿಟ್ಟರು. ಶುಕ್ಲ ವಸ್ತ್ರಗಳಿಗೆ ಬದಲಾಗಿ ಕಾವಿ ವಸ್ತ್ರಗಳನ್ನು ಧರಿಸಿದರು. ಹೀಗೆ ವ್ಯಕ್ತವಾಗಿ ಸನ್ಯಾಸಾಶ್ರಮ ಸ್ವೀಕಾರಮಾಡಿ ಗೋ ಸ್ವಾಮಿ ತೀರ್ಥರಾಮರು - ಸ್ವಾಮಿ ರಾಮತೀರ್ಥರಾದರು. ಮುಂದೆ ಅವರು ಸಾಮಾನ್ಯವಾಗಿ ಯಾರದೃಷ್ಟಿಗೂ ಗೋಚರವಿಲ್ಲದಂತೆ, ಸದಾ ಗಂಗಾತೀರದ ಅರಣ್ಯಗಳಲ್ಲೇ ವಾಸಿಸುತ್ತ ಸರ್ವದಾ ಆತ್ಮಾನಂದದಲ್ಲೇ ಮಗ್ನರಾಗಿರುತ್ತಿದ್ದರು.

---

## — ಸು ಮೇ ರು ದ ರ್ಶ ನ —

ಪ್ರೊಫೆಸರ್ ತೀರ್ಥರಾಮರು ಸನ್ಯಾಸಾಶ್ರಮ ಸ್ವೀಕಾರಮಾಡಿ ಸ್ವಾಮಿ ರಾಮತೀರ್ಥರಾದರೆಂಬ ವಾರ್ತೆಯು ಲಾಹೋರ್ ನಗರದಲ್ಲಿ ಹಬ್ಬಿತು. ಅವರ ಸಂದರ್ಶನಕ್ಕಾಗಿ ಅನೇಕರು ಬರತೊಡಗಿದರು. ಬರುತ್ತಾ

ಬರುತ್ತಾ ಈ ನಿರ್ಜನ ಸ್ಥಳದಲ್ಲೂ ಗಲಭೆ ಹೆಚ್ಚಾಗುತ್ತಾ ಬಂದಿತು. ಆದುದರಿಂದ ಶ್ರೀ ರಾಮತೀರ್ಥರು ಆ ಸ್ಥಳವನ್ನು ಬಿಟ್ಟು ತಮ್ಮೊಂದಿಗೆ ನಾರಾಯಣ, ತುಲಾರಾಮ ಎಂಬಿಬ್ಬರು ಶಿಷ್ಯರನ್ನು ಮಾತ್ರ ಕರೆದುಕೊಂಡು ಯಮುನೋತ್ರಿಗಾಗಿ ಹೊರಟು, ಆ ಸ್ಥಳದ ಉಷ್ಣೋದಕದ ಊಟೆಯ ಬಳಿ ಒಂದು ಗುಹೆಯಲ್ಲಿ ಒಂದು ತಿಂಗಳಕಾಲ ವಾಸಿಸಿದರು. ಅದರ ಸಮೀಪದಲ್ಲೇ ಯಮುನಾನದೀ ಮೂಲವಾದ ಸುಮೇರು ಶಿಖರವೆಂಬ ಮನೋಹರ ಪ್ರದೇಶವೊಂದುಂಟೆಂದು ಕೇಳಿ ಅಲ್ಲಿಗಾಗಿ ಹೊರಟರು. ಅದು ಸಂಪೂರ್ಣವಾಗಿ ಹಿಮದಿಂದ ಮುಚ್ಚಲ್ಪಟ್ಟ ಪ್ರದೇಶ; ದುರ್ಗಮವಾದ ಪರ್ವತಾರಣ್ಯ ಮಾರ್ಗಗಳಲ್ಲಿ ಹತ್ತಿ, ಅಲ್ಲಿಗೆ ಸೇರುವುದು ಮಹಾ ಪ್ರಯಾಸ ಕಾರ್ಯ! ಆದರೂ ರಾಮತೀರ್ಥರು ನಿರ್ಭಯವಾಗಿ - ಬಹು ಅಪಾಯಕರವಾದ ಕೋಡುಗಲ್ಲುಗಳ ಮೇಲೆ ಹತ್ತಿ ನಡೆದು ಸುಮೇರು ಶಿಖರದನ್ನು ಸೇರಿದರು. ಆ ಸ್ಥಳದ ಪ್ರಕೃತಿ ಸೌಂದರ್ಯವೂ, ನಾಲ್ಕಾರು ಮೈಲುಗಳವರೆಗೆ ಕೇವಲ ಮೈದಾನದಂತೆ - ಪರ್ವತಶಿಖರದಮೇಲೆ ಸಮತಳ ಪ್ರದೇಶವಿದ್ದು ಅಲ್ಲಿ ವಿಸ್ತಾರವಾಗಿ ಹರಡಿದ್ದ ಹಿಮರಾಶಿಯೂ ಅವರ ಮನಸ್ಸರೋವರದಲ್ಲಿ ಆನಂದದ ತೆರೆಗಳನ್ನು ಉಕ್ಕಿಸುತ್ತಿರಲು, ಧ್ಯಾನಪರವಶರಾಗಿ ಅಲ್ಲಿ ಎಷ್ಟೋಹೊತ್ತು ಕುಳಿತುಬಿಟ್ಟರು. ಅಲ್ಲಿಂದ ಮುಂದೆ ಗಂಗೋತ್ರಿ, ಕೇದಾರನಾಥ ಬದರೀನಾರಾಯಣ ಮುಂತಾದ ಸ್ಥಳಗಳನ್ನೂ ಸಂದರ್ಶಿಸಿ, ತರುವಾಯ ಆಲ್ಮೋರಾ ಮಾರ್ಗವಾಗಿ ಪರ್ವತವನ್ನಿಳಿದರು. ೧೯೦೧ ನೆಯ ಡಿಶಂಬರು ತಿಂಗಳಲ್ಲಿ ಮಥುರಾ ಪಟ್ಟಣದಲ್ಲಿ ನಡೆಯಲಿದ್ದ ಒಂದಾನೊಂದು ಧಾರ್ಮಿಕ ಮಹಾಸಭೆಯ ಅಧ್ಯಕ್ಷರಾಗಿ, ತಮ್ಮ ಅಪೂರ್ವ ಸಂದೇಶಗಳನ್ನೊಳಕೊಂಡ ಉಪನ್ಯಾಸದಿಂದ ಸಹಸ್ರಾರು ಮಂದಿ ಶ್ರೋತೃಗಳ ಹೃದಯಗಳನ್ನು ಆಕರ್ಷಿಸಿದರು. ಜನಗಳಾದರೋ ಅವರ ತೇಜಸ್ವಿರೂಪಕ್ಕೂ, ಅಲೌಕಿಕ ಪ್ರಜ್ಞೆಗೂ ಲುಬ್ಧರಾಗಿ, ಅವರೆಲ್ಲಿ ಹೋದರೆ ಅಲ್ಲಿಗೆ ನಡೆಯುತ್ತಾ ಅವರ ದಿವ್ಯಬೋಧನೆಗಳಿಂದ ಹೃದಯ ಶಾಂತಿಯನ್ನು ಹೊಂದುತ್ತಿದ್ದರು.



## — ಪ ರ ದೇ ಶ ಪ್ರ ಯಾ ಣ —

‘ ಜಪಾನ್, ಅಮೆರಿಕಾ ’

೧೯೦೨ ನೆಯ ಸಂ||ದಲ್ಲಿ ಫೈಜಾಬಾದ್‌ನಲ್ಲಿ ನಡೆದ ‘ ಸಾಧಾರಣ ಧರ್ಮ ಸಭಾ ’ ಕ್ಕೆ ಅಧ್ಯಕ್ಷರಾಗಿ ಬಂದು, ಹಿಂದಿರುಗಿ ತೆಹರಿಯ ತಪೋವನಕ್ಕಾಗಿ ಪ್ರಯಾಣ ಮಾಡುತ್ತಿದ್ದಾಗ ಆ ತೆಹರಿ ಸಂಸ್ಥಾನದ ಮಹಾರಾಜನು ಸ್ವಾಮಿಯವರ ಆಗಮನ ವೃತ್ತಾಂತವನ್ನು ಕೇಳಿ, ಬಂದು ದರ್ಶನ ತೆಗೆದುಕೊಂಡನು. ಆತನಿಗೆ ಹರ್ಬರ್ಟ್ ಸ್ಪೆನ್ಸರ್ ಮುಂತಾದ ಪಾಶ್ಚಾತ್ಯಪಂಡಿತರ ಗ್ರಂಥಗಳ ಪಠನೆಯಿಂದ ‘ ದೇವರಿದ್ದಾನೆ ’ ಎಂಬ ವಿಷಯದಲ್ಲೇ ಸಂದೇಹವುಂಟಾಗಿ, ಮನಸ್ಸಿನಲ್ಲಿ ಮುಕ್ಕಾಲು ಮೂರು ವೀಸ ಪಾಲು ನಾಸ್ತಿಕತೆಯೇ ನೆಲೆಗೊಂಡಿತ್ತು. ಶ್ರೀಯವರೊಂದಿಗೆ ಸ್ವಲ್ಪ ಹೊತ್ತಿನ ಸಂಭಾಷಣೆಯೊಳಗಾಗಿ ಆ ತ ನ ಮನಸ್ಸಿನ ಸಂದೇಹಗಳೆಲ್ಲವೂ ನೀಗಿ, ಮುಂದೆ ಪರಮಾಸ್ತಿಕನಾದ ಆತನು, ರಾಮತೀರ್ಥರಿಗೆ ಸಾಷ್ಟಾಂಗ ನಮಸ್ಕಾರ ಮಾಡಿ, ತನ್ನ ರಾಜಧಾನಿಯವರೆಗೆ ಆಗಮಿಸಿ, ತನ್ನ ಮನೆಯನ್ನು ಪವಿತ್ರಗೊಳಿಸಬೇಕೆಂದು ಅವರನ್ನು ಬೇಡಿಕೊಂಡು, ಕರೆದೊಯ್ದು ಕೆಲ ದಿನಗಳು ಇಟ್ಟುಕೊಂಡಿದ್ದನು.

ಅಷ್ಟರಲ್ಲಿ, ಹಿಂದೆ ಅಮೆರಿಕಾಖಂಡಕ್ಕೆ ವಿವೇಕಾನಂದರು ಹೋಗಿದ್ದಾಗ್ಗೆ ಚಿಕಾಗೋ ನಗರದಲ್ಲಿ ನಡೆದಿದ್ದ ‘ಪ್ರಪಂಚದ ಸಕಲ ಮತಗಳ ಸಮ್ಮೇಳನ’ವೊಂದು ಈ ಸಾರಿ ಜಪಾನ್ ದೇಶದ ಟೋಕಿಯೋ ನಗರದಲ್ಲಿ ನಡೆಯಲಿದೆ ಎಂಬೊಂದು ವರ್ತಮಾನವು ಪತ್ರಿಕೆಗಳಲ್ಲಿ ಹಬ್ಬಿತು. ಅದನ್ನು ಕಂಡ ತೆಹರಿಯ ರಾಜನು, ಶ್ರೀ ಸ್ವಾಮಿಯವರನ್ನು ಆ ಸಮ್ಮೇಳನಕ್ಕೆ ಹಿಂದೂಮತದ ಪ್ರತಿನಿಧಿಯಾಗಿ ಹೋಗಬೇಕೆಂದೂ, ಅದಕ್ಕಾಗಿ ತಗುಲುವ ಖರ್ಚುವೆಚ್ಚಗಳನ್ನೆಲ್ಲ ತಾನೇ ವಹಿಸುತ್ತೇನೆಂದೂ ಕೇಳಿಕೊಂಡು ಒಪ್ಪಿಸಿದನು. ತರುವಾಯ ಸ್ವಾಮಿ ರಾಮತೀರ್ಥರೂ ಜೊತೆಗೆ ಶಿಷ್ಯನಾದ ನಾರಾಯಣಸ್ವಾಮಿಯೂ ೧೯೦೨ ನೆಯ ಆಗಸ್ಟು ೨೮ ರಲ್ಲಿ ಕಲ್ಕತ್ತೆಯಿಂದ ಹಡಗುಹತ್ತಿ ಜಪಾನಿಗಾಗಿ ಪ್ರಯಾಣಮಾಡಿದರು. ಮಾರ್ಗದಲ್ಲಿ ಒಂದೊಂದು ರೇವು ಪಟ್ಟಣದಲ್ಲಿದ್ದ ಹಿಂದೂ ವರ್ತಕರೂ, ಅವರನ್ನು ಆದರ ಗೌರವ

ಗಳಿಂದ ಕಂಡು, ಅವರ ಅಪೂರ್ವ ತೇಜಸ್ವಿತೆಯನ್ನು ಕಂಡು ಪರಮಾನಂದ ಪಡುತ್ತಿದ್ದರು. ಜಪಾನ್ ದೇಶವನ್ನು ಸೇರಿದಮೇಲೆ ವಿಚಾರಿಸಲಾಗಿ, ಅವರು ಸಮ್ಮೇಳನದ ವಿಚಾರದಲ್ಲಿ ಕೇಳಿದ್ದೆಲ್ಲವೂ ಸುಳ್ಳು ವರ್ತಮಾನವೆಂದು ತಿಳಿಯಬಂತು! ಆದರೇನು! ಶ್ರೀ ರಾಮತೀರ್ಥರು ತಮ್ಮ ಪ್ರತಿಭೆಯನ್ನು ಪ್ರಕಾಶಗೊಳಿಸಲು ಅವಕಾಶ ದೊರೆವುದು ದುರ್ಲಭವೆ? ಟೋಕಿಯೋ ಕಾಲೇಜಿನಲ್ಲಿ, ಅಲ್ಲಿಯ ವಿಶ್ವವಿದ್ಯಾಲಯದ ಪರವಾಗಿ ಒಂದು ಉಪನ್ಯಾಸ ನಡೆಯಿತು. ಅಲ್ಲದೆ 'ಕಾರ್ಯಸಿದ್ಧಿಯ ಮಾರ್ಗ' ಎಂಬೊಂದು ಉಪನ್ಯಾಸ ವನ್ನೂ ಅಲ್ಲಿಯ ವಿದ್ಯಾರ್ಥಿಗಳಿಗಾಗಿ ಹೇಳಿದರು. ಸ್ವಾಮಿಯವರ ವಾಗ್ಝೋ ರಣೆ, ಅವರು ಉಪಯೋಗಿಸುತ್ತಿದ್ದ ಶುದ್ಧವಾದ ಸರಳವಾದ ತಿಳಿವಾದ ಆಂಗ್ಲೇಯವಾಣಿ. ಅಂತಹ ಮಧುರವಾಣಿಯಲ್ಲಿ ಆಚ್ಛಾದಿತವಾಗಿರುತ್ತಿದ್ದ ಅಪೂರ್ವ ಭಾರತೀಯ ವೇದಾಂತ ರಹಸ್ಯಗಳು, ಇವುಗಳು ಅಲ್ಲಿಯ ಪಂಡಿತ ಶ್ರೇಷ್ಠರನ್ನೂ ಬೆರಗುಮಾಡಿದುವು. ಅಲ್ಲೇ ಪೂರಣ್‌ಸಿಂಗರೆಂಬ ಭಾರತೀ ಯರೊಬ್ಬರು ಶ್ರೀಯವರ ಪರಿಚಯಹೊಂದಿ, ಅವರ ಋಷಿ ಸಹಜವಾದ ಜೀವಿತಾದರ್ಶದಿಂದ ಆಕರ್ಷಿತರಾಗಿ ಸನ್ಯಾಸ ಸ್ವೀಕಾರ ಮಾಡಿದರು.

ಅಲ್ಲಿಂದ ಮುಂದೆ, ಆಗ್ಗೆ ಜಪಾನ್‌ದೇಶದಲ್ಲಿ ತಮ್ಮ ಸರ್ಕಸ್ ಕಂಪೆನಿ ಯೊಂದಿಗೆ ಸಂಚಾರಮಾಡುತ್ತಿದ್ದ ಪ್ರೊ. ಛತ್ರೆ ಎಂಬೊಬ್ಬ ಹೈಂದವ ಗೃಹ ಸ್ಥರ ಪ್ರಾರ್ಥನೆಯಮೇಲೆ, ಸ್ವಾಮಿಯವರು ಅವರೊಂದಿಗೆ ಅಮೆರಿಕಾ ಖಂಡಕ್ಕೂ ಪ್ರಯಾಣಮಾಡಿದರು. ಅಮೆರಿಕಾವನ್ನು ಸೇರಿದ ಮೇಲೆಯೇ ರಾಮತೀರ್ಥರ ಕೀರ್ತಿಚಂದ್ರಿಕೆಯು ಪ್ರಪಂಚದಲ್ಲೆಲ್ಲ ಹಬ್ಬಿ ಹರಡಲು ಅವ ಕಾಶವಾಯಿತು. ಅಲ್ಲಿಯ ಚಿಕಾಗೋ ಫಿಲೆಡೆಲ್‌ಫಿಯ, ಸಾನ್‌ಫ್ರಾನ್ ಸಿಸ್ಕೊ ಮುಂತಾದ ನಗರಗಳಲ್ಲಿ ಅವರು ಅನೇಕಾನೇಕ ಉಪನ್ಯಾಸಗಳನ್ನು ಕೊಟ್ಟರು. ಅಮೆರಿಕಾದಲ್ಲಿ ಶ್ರೋತೃಗಳಿಂದ 'ಟಿಕೆಟ್' ಗಳ ಮೂಲಕ ಹಣ ವಸೂಲುಮಾಡುವ ಪದ್ಧತಿಯುಂಟು. ಆದರೆ ಸ್ವಾಮಿ ರಾಮ ತೀರ್ಥರು ಭಾರತೀಯರು ಜ್ಞಾನವಿಕ್ರಯ ಮಾಡತಕ್ಕವರಲ್ಲವಾದುದರಿಂದ, ತಮ್ಮ ಉಪನ್ಯಾಸಗಳಿಗೆ ಹಾಗೆ ಟಿಕೆಟ್ ಹಾಕಕೂಡದೆಂದು ಹೇಳಿಬಿಟ್ಟರು. ಒಂದೊಂದು ಉಪನ್ಯಾಸಕ್ಕೆ ಸ್ಥಳವನ್ನು ಸಿದ್ಧಗೊಳಿಸುವುದೆಂದರೆ ಅಗಾಧ ಖರ್ಚು ತಗುಲುತ್ತಿತ್ತು. ಆದರೂ ಅವರ ಉಪನ್ಯಾಸದ ಸೊಬಗಿನಿಂದ

ಆಕರ್ಷಿತರಾಗಿದ್ದ ಆ ದೇಶೀಯರು ಅಪ್ರಾರ್ಥಿತರಾಗಿ ಬಂದು, ಅವರನ್ನು ಪ್ರಾರ್ಥಿಸಿ, ಉಪನ್ಯಾಸಗಳನ್ನಿಡಿಸಿ ಕೇಳಿ-ಕೇಳಿಸಿ ಆನಂದಪಡುವರು. ಅವರು ತಮ್ಮ ಉಪನ್ಯಾಸಗಳಿಗಿಡುತ್ತಿದ್ದ ಹೆಸರುಗಳೂ, ಮತ್ತು—'ಸ್ತ್ರೀ ಪುರುಷರೂಪೀ ನನ್ನ ಆತ್ಮವೇ!' 'ಗೃಹಸ್ಥ ಗೃಹಿಣೀ ಸ್ವರೂಪದ ವಿಶ್ವಮೂರ್ತಿಯೆ' ಎಂದು ಮುಂತಾಗಿ ಉಪನ್ಯಾಸ ಪ್ರಾರಂಭದಲ್ಲಿ ಸಭಿಕರನ್ನುದ್ದೇಶಿಸಿ ಹೇಳುತ್ತಿದ್ದ ಸಂಬೋಧನೆಯೂ ಅವರಲ್ಲಿ ಅತಿಶಯ ಕೌತುಕವನ್ನುಂಟು ಮಾಡಿದ್ದುವು. ಅವರ ವಾಗ್ವೈಖರಿಯ ಸೌಂದರ್ಯಕ್ಕೂ ಸ್ವರ್ಗೀಯ ಸುರೂಪಕ್ಕೂ ಮೋಹಿತರಾಗಿ ಜನರು ಕಿಕ್ಕಿರಿದು ನೆರೆಯುತ್ತಿದ್ದರು. ಅಲ್ಲಿ ಅವರು ಕೊಟ್ಟ ಉಪನ್ಯಾಸಗಳೆಲ್ಲವೂ 'ಇನ್ ಉಡ್ಸ್ ಆಫ್ ಗಾಡ್ ರಿಯಲೈಜೇಷನ್' ಎಂಬ ಹೆಸರಿನಿಂದ ಸುಮಾರು ೧೫೦೦ ಪುಟಗಳ ೩ ಪುಸ್ತಕಗಳ ರೂಪದಲ್ಲಿ ಪ್ರಕಟವಾಗಿವೆ. ಆ ಉಪನ್ಯಾಸಗಳು, ಹಿಂದೂಧರ್ಮ, ವೇದಾಂತ, ಮೂರ್ತಿಪೂಜೆ, ಪ್ರಾಣಾಯಾಮ, ಜಿತೇಂದ್ರಿಯತ್ವ, ಗೃಹಸ್ಥಧರ್ಮ, ಸತ್ಯಾನ್ವೇಷಣೆ ಮುಂತಾದ ಅನೇಕ ಧಾರ್ಮಿಕವಿಚಾರಗಳಲ್ಲಿ ಅಡಗಿರುವ ತೊಡಕಾದ ಪ್ರಶ್ನೆಗಳನ್ನು ಬಹು ಸರಳ ನವೀನ ತಾತ್ವಿಕರೂಪದಲ್ಲಿ ಬಿಡಿಸಿ ಮನೋರಂಜನೆಯನ್ನುಂಟುಮಾಡುತ್ತಿವೆ. ಅಲ್ಲದೆ, ಹಿಂದೂದೇಶದ ವಿಷಯದಲ್ಲಿ ಅವರು ಆ ದೇಶೀಯರಿಗೆ ಮಾಡಿದ ಮನವಿಯೊಂದರಿಂದ, ಈ ದೇಶದ ವಿಷಯದಲ್ಲಿ ಅವರಿಗೆ ಉನ್ನತಭಾವವೂ ಕೃತಜ್ಞತಾಭಾವವೂ ಉಂಟಾಗಿ ಈ ದೇಶದಿಂದ ಅಲ್ಲಿಗೆ ಹೋಗುವ ವಿದ್ಯಾರ್ಥಿಗಳಿಗೆ - ವಿದ್ಯಾರ್ಥಿ ವೇತನಗಳನ್ನು ಕೊಟ್ಟು ವಿದ್ಯಾಭ್ಯಾಸ ಮಾಡಿಸಲು ವಿಶ್ವವಿದ್ಯಾನಿಲಯಗಳಲ್ಲಿ ಅನುಕೂಲತೆಯುಂಟಾಯಿತು. ಅಲ್ಲದೆ ನಿಜವಾದ ಹಿಂದೂ ಧರ್ಮದ ಅಭ್ಯಾಸಕ್ಕಾಗಿಯೂ ಅವರು ಅನೇಕ ಸಂಘಗಳನ್ನು ಸ್ಥಾಪಿಸಿಕೊಂಡರು.

ಪಾರವನ್ನರಿಯದ ಆನಂದವು ಉಕ್ಕುತ್ತಿರಲು, ಸ್ವಾಮಿ ರಾಮತೀರ್ಥರು ಸರ್ವದಾ ಹಸನ್ಮುಖಿಗಳಾಗಿ, ಸಂತೋಷಚಿತ್ತರಾಗಿ ಇರುವರು. ಅವರ ಜೊತೆಗಿದ್ದವರಲ್ಲೂ ಸಹ ವ್ಯಸನ ಕೋಪ ದಂಭ ಮುಂತಾದುವುಗಳೊಂದೂ ನಿಲ್ಲದೆ ಓಡಿಹೋಗುವುವು. ಧಾರ್ಮಿಕ ವಿಷಯವಾದ ಯಾವ ಸಂದೇಹವಿದ್ದರೂ ಅವರ ಸಮ್ಮುಖದಲ್ಲಿ ಸೂರ್ಯನನ್ನು ಕಂಡ ತಮದಂತೆ ಮಾಯವಾಗುವುದು. ಒಂದಾನೊಂದುವೇಳೆ ಅತಿಶಯ ನಾಸ್ತಿಕ ಸ್ವಭಾವದ

ಒಬ್ಬ ಸ್ತ್ರೀಯು ಅವರೊಂದಿಗೆ ತರ್ಕಮಾಡುವ ನಿಶ್ಚಯದಿಂದ ಬಂದು, ಧ್ಯಾನಮಗ್ನರಾಗಿದ್ದ ಅವರು ಬಹಿರ್ಮುಖರಾಗುವವರೆಗೆ ಕಾದಿದ್ದು, ಒಡನೆ ಸಮೀಪಕ್ಕೆ ಹೋಗಿ,—'ಪ್ರಭೋ ನನ್ನಲ್ಲಿದ್ದ ನಾಸ್ತಿಕತೆಯು ಹಾರಿಹೋಯಿತು. ನಿಮ್ಮ ದರ್ಶನವಾದೊಡನೆಯೇ ನನ್ನ ಸಂಶಯಗಳೆಲ್ಲವೂ ನಿವಾರಣೆಯಾದುವು''ಎಂದು ನುಡಿದಳಂತೆ! ವೆಲ್‌ಮ್ಯಾನ್‌ಎಂಬ ಮತ್ತೊಬ್ಬ ಸ್ತ್ರೀಯು ಅವರ ಬೋಧನೆಗಳಿಂದ ಆಕರ್ಷಿತಳಾಗಿ ತನ್ನ ಅಪಾರ ಆಸ್ತಿಯನ್ನು ತ್ಯಜಿಸಿ ಸನ್ಯಾಸಿಯ ಕಾವಿ ಉಡುಪನ್ನು ಧರಿಸಿ, ಹಿಂದೂಸ್ಥಾನಕ್ಕೆ ಬಂದು ಅವರ ಜನ್ಮಸ್ಥಳವಾದ ಮುರಲೀವಾಲಾ ಗ್ರಾಮವನ್ನು ಸಂದರ್ಶಿಸಿ ತನ್ನ ಜನ್ಮವು ಸಾರ್ಥಕವಾಯಿತೆಂದುಕೊಂಡಳು. ಅವರ ಸಾಧುಜೀವನಕ್ಕೆ ಮುಗ್ಧರಾಗಿ ಅಮೆರಿಕನರು 'ಜೀವಂತ ಕ್ರೈಸ್ತನು ಅಮೆರಿಕಾಕ್ಕೆ ಬಂದಿದ್ದಾನೆ' ಎಂದು ಪ್ರಚುರಪಡಿಸಿದರು. ಅಲ್ಲಿಯ ಪತ್ರಿಕೆಗಳೆಲ್ಲವೂ, ಅಮೆರಿಕಾಕ್ಕೆ ಕೇವಲ ಹೊಸದೆಂದು ತೋರುವ ಸ್ವಾಮಿಜೀಯವರ ನಿಸ್ಪೃಹತೆ, ನಿಷ್ಕಾಪಟ್ಯ, ದಂಭರಾಹಿತ್ಯ ಸಾಧುಜೀವನ, ಒಂದಿಗೇ ಅಪಾರವಿದ್ವತ್ತು ಸರಳಭಾವ ಮುಂತಾದುವುಗಳನ್ನು ಕುರಿತು ಸಹಸ್ರ ಮುಖಗಳಿಂದ ಹೊಗಳಿದುವು. ಬಹು ದೂರ ಪ್ರದೇಶಗಳಿಂದ ಯಾತ್ರೆಗೋ ಎಂಬಂತೆ ಬರುತ್ತಿದ್ದ ಜನರು ಮಾತ್ರವಲ್ಲ - ಸಂಯುಕ್ತ ಸಂಸ್ಥಾನದ ಪ್ರೆಸಿಡೆಂಟರು ಸಹ ಅವರು ವಾಸಿಸಿದ್ದ ಸ್ಥಳಕ್ಕೆ ಬಂದು ಅವರ ದರ್ಶನಮಾಡಿ ಗೌರವಿಸಿದರು.

---

## — ಮಾತೃ ಭೂಮಿಗೆ —

ಅಮೆರಿಕಾದೇಶದ ಅಂತಹ ಶೀತಳಪ್ರದೇಶದಲ್ಲಿ ವಾಸಿಸುತ್ತಿದ್ದಾಗಲೂ, ಶ್ರೀ ರಾಮತೀರ್ಥರು ಕೇವಲ ಹಣ್ಣುಗಳು, ಗೆಡ್ಡೆಗೆಣಸುಗಳು ಮತ್ತು ಹಾಲು ಇಷ್ಟನ್ನಲ್ಲದೆ ಮತ್ತಾವ ಪದಾರ್ಥವನ್ನೂ ಮುಟ್ಟುತ್ತಿರಲಿಲ್ಲ. ಹೀಗೆ ಎರಡೂವರೆ ವರ್ಷಕಾಲ ಅಲ್ಲಿ ವಾಸಿಸಿ, ಅಲ್ಲಿಂದ ಸಹಸ್ರಾರು ಮಂದಿ ಅಮೆರಿಕಾ ದೇಶೀಯರು ತಮ್ಮ ಆತ್ಮೀಯರೊಬ್ಬರನ್ನು ಅಗಲುತ್ತಿರುವಂತೆ ಕಣ್ಣೀರಿಟ್ಟುಕೊಂಡು ಸಾಗಕಳುಹುತ್ತಿರಲು, ೧೯೦೪ ರಲ್ಲಿ ಮಾತೃದೇಶಾಭಿಮುಖರಾಗಿ ಪ್ರಯಾಣಮಾಡಿದರು. ಬರುತ್ತಾ ಮಾರ್ಗದಲ್ಲಿ

ಈಜಿಪ್ಟ ದೇಶದ ಕೈರೋ ನಗರದಲ್ಲಿಳಿದು, ಅಲ್ಲಿಯ ಮಹಮ್ಮದೀಯ ಪ್ರಮುಖರ ಆಹ್ವಾನವನ್ನು ಸ್ವೀಕರಿಸಿ, ಅವರ ಮಸೀದಿಯಲ್ಲಿ ಮುಂಡಿಸಿ ಉರ್ದೂ ಭಾಷೆಯಲ್ಲಿ ಉಪನ್ಯಾಸ ಮಾಡಿ, ಅವರನ್ನು ಆನಂದಾಶ್ಚರ್ಯ ಗಳಿಂದ ಮುಗ್ಧರನ್ನಾಗಿಸಿದರು. ಅಲ್ಲಿಂದ ಪ್ರಯಾಣಮಾಡಿ ಬೊಂಬಾಯಿ ಯಲ್ಲಿ ಹಡಗಿಳಿಯಲು ಅನೇಕನುಂದಿ ದೇಶಾಭಿಮಾನಿ ಧರ್ಮಾಭಿಮಾನಿಗಳು ಅವರನ್ನು ಎದುರುಗೊಂಡು ಸನ್ಮಾನಮಾಡಿದರು. ತರುವಾಯ ಅಲ್ಲೂ, ಆಗ್ರಾ, ಮಥುರಾ, ಲಕ್ನೋ, ಅಜ್ಮೀರ್ ಮುಂತಾದ ಸ್ಥಳಗಳಲ್ಲೂ ಸಹ ಸ್ರಾರುಮಂದಿ ವಿದ್ಯಾವಂತರಿಂದ ನೆರೆದ ಸಭೆಗಳಲ್ಲಿ ಉಪನ್ಯಾಸ ಮಾಡಿದರು. ಆರ್ಯ ಸಮಾಜದವರು, ಸನಾತನ ಧರ್ಮೀಯರು, ಬ್ರಹ್ಮ ಸಮಾಜದವರು, ಸಿಕ್ಕರು, ಕ್ರೈಸ್ತರು, ಮಹಮ್ಮದೀಯರು ಮುಂತಾದ ಸಮಸ್ತ ಧರ್ಮಗಳವರೂ ಅವರ ಸರ್ವಮಾನ್ಯವಾದ ಉಪನ್ಯಾಸಗಳನ್ನು ಕೇಳಿ - ಅವರೆಲ್ಲಿಲ್ಲಿ ಹೋದರೆ ಅಲ್ಲೆಲ್ಲಾ ಗೌರವದಿಂದ ಸ್ವೀಕರಿಸಿ ಧನ್ಯರಾದರು.

ಹೀಗೆ ಪರದೇಶ - ಸ್ವದೇಶ ಪ್ರಯಾಣಗಳನ್ನು ಮುಗಿಸಿಕೊಂಡು ಬಂದ ತರುವಾಯ, ಸ್ವಾಮಿಜೀಯವರು ಪುನಃ ತಮ್ಮ ಪ್ರೇಮಾಸ್ಪದವಾದ ಹಿಮಾಲಯದ ಪರ್ವತಾರಣ್ಯಗಳಿಗಾಗಿ ನಡೆದರು. ಈ ಸಾರಿ, ಹಿಮಾಲಯದಲ್ಲಿ ವೈದಾನಪ್ರದೇಶದಿಂದ ಬಹುದೂರ ೧೨-೧೩ ಸಹಸ್ರ ಅಡಿಗಳ ಎತ್ತರದಲ್ಲಿರುವ ವ್ಯಾಸಾಶ್ರಮ - ವಸಿಷ್ಠಾಶ್ರಮಗಳನ್ನು ಸಂದರ್ಶಿಸಿ, ಕೆಲ ಕೆಲವು ದಿವಸಗಳವರೆಗೆ ಅಲ್ಲಿ ವಾಸಿಸಿದ್ದರು. ಕೊನೆಗೆ, ತೆಹರಿಯ ಮಹಾರಾಜನು ಅವರಿಗಾಗಿ ಗಂಗಾನದಿಯ ಸಮೀಪದಲ್ಲೊಂದು ಕುಟೀರವನ್ನು ನಿರ್ಮಿಸಿ ಕೊಟ್ಟು, ಅಲ್ಲಿ ವಾಸಿಸಿ ತನಗೆ ಮಾರ್ಗದರ್ಶಕರಾಗಿರಬೇಕೆಂದು ಬೇಡಿಕೊಳ್ಳಲು, ಅಲ್ಲಿ ಕೆಲವು ದಿನಗಳಿದ್ದರು.

---

## — ನಿ ರ್ಯಾ ಣ —

ಗಂಗಾತೀರದ, ಮೇಲ್ಕಂಡ ಮನುಷ್ಯನಿರ್ಮಿತ ಕುಟೀರದಲ್ಲಿ ವಾಸಿಸಲೂ ಅವರ ಮನಸ್ಸು ಸಮಾಧಾನಪಡದಿರಲು, ಅಲ್ಲಿಂದ ಬಹು ದೂರದಲ್ಲಿದ್ದ ಮತ್ತೊಂದು ಗುಹೆಗೆ ಆಗಾಗ ಹೋಗಿ ವಾಸಿಸುತ್ತಿದ್ದರು.

ಆಗ ಅವರ ಜೊತೆಗೆ ಯಾರೂ ಇರುತ್ತಿರಲಿಲ್ಲ. ಕೊನೆಯ ವೇಳೆ ಪೂರಾಣ್ ಸಿಂಗ್ ಮತ್ತು ನಾರಾಯಣಸ್ವಾಮಿ ಇವರನ್ನು ಕಂಡಾಗ್ಗೆ,—'ಇನ್ನು ರಾಮನ ಲೇಖನಿಯು ಬರೆಯಲಾರದೆ ನಿಲ್ಲಬಹುದು; ನಾಲಿಗೆಯೂ ಮಾತ ನಾಡಲಾರದೆ ಮುಚ್ಚಬಹುದು, ಮುಂದೆ ಆ ಕೆಲಸಗಳನ್ನು ಹೆಚ್ಚು ಉತ್ಸಾ ಹದಿಂದ ನೀವೇ ಮಾಡಬೇಕಾಗಿದೆ' ಎಂದು ಹೇಳಿದರು. ಮತ್ತು ನಾರಾಯಣ ಸ್ವಾಮಿಯನ್ನು ಕುರಿತು, ವಾರಕ್ಕೊಂದುವೇಳೆ. ತಮ್ಮ ಬಳಿಗೆ ಬರತಕ್ಕು ದೆಂದು ನೇಮಿಸಿದ್ದರು. ಹೀಗಿರುವಲ್ಲಿ ಗುರು ದರ್ಶನಕ್ಕಾಗಿ ತಮಗೆ ಗೊ ತ್ತಾಗಿದ್ದ ಭಾನುವಾರಕ್ಕಾಗಿ ಎದುರುನೋಡುತ್ತಾ ಇರುತ್ತಿರುವಲ್ಲಿ ಐದು ದಿನಗಳು ಕಳೆದಿದ್ದುವು. ಆ ದಿನ ಅಕಸ್ಮಾತ್ತಾಗಿ ಒಬ್ಬ ಆಳು ಬಂದು, ಶ್ರೀ ತೀರ್ಥರಾಮರು ಗಂಗೆಯಲ್ಲಿ ಸ್ನಾನಮಾಡುತ್ತಿದ್ದಾಗ್ಗೆ ಆ ಪ್ರವಾಹ ದಲ್ಲಿ ಕೊಚ್ಚಿಹೋದರೆಂಬ ಪರಮದಾರುಣವಾದ ವರ್ತಮಾನವನ್ನು ತಿಳಿಸಿ ದನು. ಆ ದಿನ (೧೯೦೬ ನೆಯ ಅಕ್ಟೋಬರ್ ೧೭ ಶನಿವಾರ) ದೀಪಾವಳಿ. ಶ್ರೀ ಸ್ವಾಮಿಯವರು, 'ಸ್ವಾನಂದ ಸಾಮ್ರಾಜ್ಯ' ವೆಂಬ ಲೇಖನವನ್ನು ಬರೆಯಲು ಪ್ರಾರಂಭಿಸಿದ್ದರು. ಮಧ್ಯಾಹ್ನ ೧೧ ಗಂಟೆಯ ವೇಳೆಗೆ ಉಪ ನ್ಯಾಸವೂ ಮುಗಿಯಿತು. ಸೇವಕ ಭೋಲಾದತ್ತನು ಬಂದು ಭೋಜನಕ್ಕೆ ಸಿದ್ಧವಾಗಿದೆಯೆಂದನು. ತರುವಾಯ ಇಬ್ಬರೂ ಹೊರಟು ಸ್ನಾನಕ್ಕೆಂದು ಭಾಗೀರಥೀ ತೀರಕ್ಕೆ ನಡೆದರು. ಸೇವಕನು ಮೇಲೆ ನಿಂತಿರಲು, ಶ್ರೀ ಯವರು ನೀರೊಳಕ್ಕಿಳಿದರು. ನೀರಿನಲ್ಲಿ ಆಳಕ್ಕಾಳಕ್ಕೆ ನಡೆದು ಹೋಗು ತ್ತಾ, ಕಾಲಪ್ರೇರಿತರೋ ಎಂಬಂತೆ ಎಂದಿಗಿಂತಲೂ ಬಹುದೂರಕ್ಕೆ ಹೋದರು. ಒಡನೆ ಆಯತಪ್ಪಿ, ಪ್ರವಾಹಕ್ಕೆ ಸಿಕ್ಕು ಸ್ವಲ್ಪ ದೂರ ಕೊಚ್ಚಿ ಹೋದರು. ಅವರಿಗೆ ಬಹು ಚೆನ್ನಾಗಿ ಈಜಲು ಬರುತ್ತಿದ್ದಿತಾದರೂ, ಪ್ರವಾಹ ರಭಸದಲ್ಲಿ ಹೋಗುತ್ತಾ ಒಂದು ಸುಳಿಗೆ ಸಿಕ್ಕು ಸ್ವಲ್ಪ ಹೊತ್ತಿ ನೊಳಗಾಗಿಯೇ ಮುಳುಗಿ ಕಾಣಿಸದಂತಾದರು.. ಭೋಲಾದತ್ತನು ಗಾಬರಿ ಯಿಂದ ಸಹಾಯಕ್ಕಾಗಿ ಕಿರಿಚಿಕೊಂಡನು. ಆದರೆ ಸಮೀಪದಲ್ಲಿ ಯಾರೂ ಇರಲಿಲ್ಲವಾಗಿ ಯಾವ ಸಹಾಯವನ್ನೂ ಅಪೇಕ್ಷಿಸುವಂತಿರಲಿಲ್ಲ. ಸ್ವಲ್ಪ ಹೊತ್ತಿನಮೇಲೆ ಯೋಗಾಸನದಿಂದ ಇದ್ದ ಶ್ರೀರಾಮತೀರ್ಥರು ಒಂದಾ ವರ್ತಿ ಮೇಲಕ್ಕೆ ಕಾಣಿಸಿಕೊಂಡರು. ಕೊನೆಯಸಾರಿ 'ಓಂ' ಎಂಬ

ಮಂತ್ರೋಚ್ಚಾರಣೆಯು ಅವರ ಮುಖದಿಂದ ಬಂದುದನ್ನು ಸೇವಕನು ಕೇಳಿದನು. ಈ ವಿಚಾರವನ್ನೆಲ್ಲವನ್ನೂ ಕೇಳಿದ ಸ್ವಾಮಿ ನಾರಾಯಣನು, ಕಣ್ಣೀರಿನ ಪ್ರವಾಹವನ್ನು ಸುರಿಸುತ್ತ, ಆ ಸ್ಥಳಕ್ಕೆ ಬಂದು ನೋಡಲು, ಅವರು ಕುಳಿತಿರುತ್ತಿದ್ದ ಸ್ಥಾನದಲ್ಲಿ ಸಂಪೂರ್ಣವಾಗಿ ಬರೆಯಲ್ಪಟ್ಟ 'ಸ್ವಾನಂದ ಸಾಮ್ರಾಜ್ಯ' ಲೇಖನವು ಸಿಕ್ಕಿತು. ಅದರ ಬಳಿಯಲ್ಲಿದ್ದ ಮತ್ತೊಂದು ಚಿಕ್ಕಲೇಖನವು ಮೃತ್ಯುವನ್ನು ಆಹ್ವಾನಿಸಿ ಬರೆದುದಾಗಿದ್ದಿತು. ಅದರಲ್ಲಿ,—

"ಓ ಮೃತ್ಯುವೇ ನಿನಗಿಷ್ಟವಾದರೆ ಈ ದೇಹವನ್ನು ಕೊಂಡುಹೋಗು, ನಾನದಕ್ಕಾಗಿ ಲಕ್ಷ್ಯಮಾಡುವುದಿಲ್ಲ. ನಾನು ಉಪಯೋಗಿಸಲು ಸಾಕಷ್ಟು ಇತರ ದೇಹಗಳುಂಟು. ನಾನು ಚಂದ್ರಕಿರಣಗಳೆಂಬ ರಜತಮಯ ದೈವಿಕ ಸೂತ್ರಗಳನ್ನು ಧರಿಸಿ ಬದುಕಬಲ್ಲೆ. ಪರ್ವತದ ಝರಿಗಳಂತೆಯೂ ಗಿರಿನದಿಗಳಂತೆಯೂ ರೂಪುಧಾರಣಮಾಡಿ ದೇವದೂತನಾಗಿ ಸಂಚರಿಸಬಲ್ಲೆ. ಸಮುದ್ರ ತರಂಗಗಳಾಗಿ ನರ್ತಿಸಬಲ್ಲೆ. ನಾನಾರೆಂಬೆ! ಗಂಭೀರವಾಗಿ ಸುಳಿವ ಮಂದಮಾರುತನು ನಾನು! ಭಯಂಕರವಾಗಿ ಬೀಸುವ ಬಿರುಗಾಳಿ ನಾನು! ಇವುಗಳೆಲ್ಲವೂ ಕೇವಲ ವ್ಯತ್ಯಾಸಗೊಂಡು ಸಂಚರಿಸುವ ನನ್ನ ವಿವಿಧ ರೂಪಗಳು, ಅಷ್ಟೆ! ನಾನು ದೂರದ ಗಿರಿಗಳೆಡೆಯಿಂದ ಬಂದೆ. ಮೃತರನ್ನು ಸಜೀವಗೊಳಿಸಿದೆ, ನಿದ್ರಿಸುವವರನ್ನು ಎಚ್ಚರಿಸಿದೆ, ಕೆಲ ನಗುಮುಖಗಳನ್ನು ಅನಾವರಣಗೊಳಿಸಿದೆ! ದುಃಖಿಸುತ್ತಿದ್ದ ಕೆಲವರ ಕಣ್ಣೀರೊರೆಸಿದೆ. 'ಬುಲ್ ಬುಲ್' ಪಕ್ಷಿಯನ್ನೂ - ಗುಲಾಬಿಯನ್ನೂ ನೋಡಿ ಎರಡನ್ನೂ ಕೈಕೊಂಡು ಆದರಿಸಿದೆ. ಇದನ್ನು ಮುಟ್ಟಿದೆ - ಅದನ್ನು ಸ್ಪರ್ಶಿಸಿದೆ. ನನ್ನ ಟೋಪಿಯನ್ನಾಡಿಸಿ - ಇಗೋ ನಾನಡೆದೆ. ನಾನಿಲ್ಲಿ ಹೋಗುತ್ತೇನೆ - ಅಗೋ ಅಲ್ಲಿ ಹೋಗುತ್ತೇನೆ. ನನ್ನನ್ನಾರೂ ಗುರ್ತಿಸಲಾರರು. ನನ್ನೊಂದಿಗೆ ಏನನ್ನೂ ಒಯ್ಯುವುದಿಲ್ಲ. ಓಂ, ಓಂ, ಓಂ" ಎಂದಿತ್ತು.

ಅದನ್ನು ಓದಿದ ಶಿಷ್ಯನು ಅಪಾರ ವ್ಯಸನದಿಂದ ತನ್ನ ಗುರುವಿನ ದೇಹದ ದರ್ಶನಕ್ಕಾಗಿ ಅಲ್ಲೇ ಕಾದಿದ್ದನು. ಏಳು ದಿನಗಳಾದ ಮೇಲೆ, ಸ್ವಾಮಿಯವರ ದೇಹವು ಮೇಲಕ್ಕೆ ತೇಲಿತು. ನೋಡಲಾಗಿ, ಯೋಗಾಸನದಲ್ಲಿದ್ದು ಬಾ

ಯಿಯು 'ಓಂ' ಎಂಬ ಮಂತ್ರೋಚ್ಚಾರಕ್ಕಾಗಿಯೇ ಎಂಬಂತೆ ಅರ್ಧ ತೆರೆದಿದ್ದಿತು. ದೇಹವೂ ಸ್ವಲ್ಪವಾದರೂ ಕೆಡದೆ, ಜಲಚರಗಳಿಂದಲೂ ಮುಟ್ಟಲ್ಪಡದೆ ಸುರಕ್ಷಿತವಾಗಿಯೇ ಇದ್ದಿತು. ಆಹಾ, ಏಳು ದಿನಗಳು ನೀರಿನಲ್ಲಿದ್ದರೂ ಮಾನುಷದೇಹವು ಅಷ್ಟು ಸುರಕ್ಷಿತ ರೀತಿಯಲ್ಲಿರುವುದು ಎಂತಹ ಆಶ್ಚರ್ಯವು! ಶಿಷ್ಯವರ್ಗದವರು ತಮ್ಮ ಗುರುವರ್ಯರ ಆ ದೇಹವನ್ನು ಯುಕ್ತರೀತಿಯಿಂದ ಸೇವಿಸಿ - ಮನಸಾರೆ ವಿಲಪಿಸಿ, ಪುನಃ ಗಂಗಾಮಾತೆಗೇ ಅರ್ಪಿಸಿಬಿಟ್ಟರು. ಗ್ರಂಥಾರಂಭದಲ್ಲಿ ಹೇಳಿದಂತೆ, ಭಾರತದೇಶ ಸರೋವರದಲ್ಲಿ ಉದಯಿಸಿದ ಈಯೊಂದು ಅಪೂರ್ವ ಕಮಲಪುಷ್ಪವು ಸಂಪೂರ್ಣ ರೀತಿಯಿಂದ ವಿಕಸಿತವಾಗಿ ತನ್ನ ಸೌರಭದಿಂದ ಪೂರ್ವ ಪಶ್ಚಿಮ ದೇಶಗಳೆರಡನ್ನೂ ತೃಪ್ತಿಗೊಳಿಸಿ ಇಂತು ಬಾಡಿಹೋಯಿತು. ಅಂತು ಬೆಳಗಿದ ಸೂರ್ಯನು - ಇಂತು ಅಸ್ತಮಿಸಿದನು.



# ಉ ಪ ಸಂ ಹಾ ರ

ಈ ಚಿಕ್ಕ ಪುಸ್ತಕದಲ್ಲಿ ಶ್ರೀಯುವರ ಅಪಾರವಾಗಿರುವ ಉಪನ್ಯಾಸಗಳ ಸಾರಾಂಶವನ್ನಾಗಲೀ, ಅವರು ತಮ್ಮ ಆನಂದಲಹರಿಯಲ್ಲಿ ರಚಿಸಿದ ಪದ್ಯಪುಷ್ಪಗಳ ಸೌಂದರ್ಯವನ್ನಾಗಲೀ ಉದಹರಿಸಲು ಅವಕಾಶವಾಗದ್ದಿದುದಕ್ಕಾಗಿ ವಾಚಕರು ಕ್ಷಮಿಸಬೇಕು.

ಶ್ರೀ ಸ್ವಾಮಿಜೀಯುವರು ಯಾವ ಮತವನ್ನೂ ಸ್ಥಾಪಿಸಲಿಲ್ಲ. ಅಥವ ನವೀನ ರೀತಿಯ ಯಾವ ಸಮಾಜ ಅಲ್ಲವೆ ಕೂಟವನ್ನೂ ಏರ್ಪಡಿಸಲಿಲ್ಲ. ಅವರು,—'ಭಾರತ ದೇಶೋದ್ಧಾರಕ್ಕಾಗಿ ಯಾವ ಯಾವ ಸಮಾಜಗಳು ದುಡಿಯುತ್ತವೆಯೋ, ಯಾವ ಯಾವ ಸಂಸ್ಥೆಗಳು ಬೋಧಿಸುತ್ತವೆಯೋ ಅವೆಲ್ಲವೂ ರಾಮನವೇ! ರಾಮನು ಆ ಎಲ್ಲದರ ಮೂಲಕವೂ ಕೆಲಸ ಮಾಡುತ್ತಾನೆ' ಎನ್ನುತ್ತಿದ್ದರು. ಅವರಲ್ಲಿ 'ನಾನು' ಎಂದುಕೊಳ್ಳುವಷ್ಟು ಸ್ವಾರ್ಥತೆಯೂ ಇರಲಿಲ್ಲ.—

ಯಾವ ಶ್ರೀ ಸ್ವಾಮೀ ರಾಮತೀರ್ಥರು, ತಾವು ಸ್ವತಃ ನಿರ್ಮಮರಾದರೂ ದೇಶಕೋಶಗಳ ಗೊಡವೆಯನ್ನೊಲ್ಲದ ಕೇವಲ ಆತ್ಮಾನಂದಶೀಲರಾದರೂ, ದಯಾಮಯರೂ ವಿಶ್ವಕುಟುಂಬಿಗಳೂ ಆದುದರಿಂದ ಬಡಭಾರತಮಾತೆಯ ದುಸ್ಥಿತಿಗಾಗಿ ಕಣ್ಣೀರಿಟ್ಟು ಗೋಳಿಡುತ್ತಿದ್ದರೋ, ಆಕೆಯ ಉದ್ಧಾರಕ್ಕಾಗಿ - ಕೇವಲ ವಾಚಾಮಾತ್ರದಲ್ಲಿನಿಂತು ಅನುಪಯೋಗವಾಗುತ್ತಿರುವ ವೇದಾಂತವು, ಕಾರ್ಯರೂಪಿ ವೇದಾಂತವಾಗಲೆಂದು ಆಸಿಸುತ್ತಿದ್ದರೋ, ಅವರ ಆ ಆಶಯವು ಸಾರ್ಥಕವಾಗಲಿ. ಭಾರತೀಯರು ಮೇಲೆ ಮೇಲೆ ಆ ಮಹಾನುಭಾವರ ಬೋಧನೆಗಳನ್ನು ಗ್ರಹಿಸಿ, ಆಲಸ್ಯವನ್ನು ನೀಗಿ ಕಾರ್ಯತತ್ಪರರಾಗಲಿ! ಸರ್ವೇಶ್ವರನು, ಶ್ರೀ ಸ್ವಾಮೀಜೀಯವರ ಪವಿತ್ರಾತ್ಮದ ಪ್ರಭಾವವು, ಭಾರತೀಯರನ್ನು, ಸರ್ವ ವಿಧದಿಂದಲೂ ದೇಶೋದ್ಧಾರ ಭಾಷೋದ್ಧಾರ ಆತ್ಮೋದ್ಧಾರಗಳಿಗಾಗಿ ನಡುಗಟ್ಟಿ ಕಡುಗಲಿಗಳಾಗಿ ಶ್ರಮಿಸಲು ಉತ್ತೇಜನಗೊಳಿಸುವಂತೆ ಅನುಗ್ರಹಿಸಲಿ.

**ತ ಭಾ ಸು.**



ಶ್ರೀ ರಾಮತೀರ್ಥರ ಉಪನ್ಯಾಸಗಳ ಕರ್ನಾಟಕ ಅನುವಾದವು, ನಾಲ್ಕು ಭಾಗಗಳಾಗಿ ದಾವಣಗೆರೆಯ ಶ್ರೀ|| ಹರ್ಡೀಕರ್ ಮಂಜಪ್ಪನವರಿಂದ ಪ್ರಕಟವಾಗಿವೆ.

ಸುಬೋಧ ಮುದ್ರಣಾಲಯ, ಬೆಂಗಳೂರು ಸಿಟಿ.—೧೯೨೮.

-- ಶ್ರೀರಾಮಸಹಾಯಂ --

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸ ಪುಸ್ತಕಾವಳಿ)

**ಮುನ್ನುಡಿ : —**

ನಿಷ್ಕಳಂಕ ಯಶಸ್ಕರಾಗಿ ತಮ್ಮ ಇಹಲೋಕ ಜೀವಿತಗಳನ್ನು ಸಾಗಿಸಿದ ಮಹಾಪುರುಷರ ಪವಿತ್ರ ಜೀವನಚರಿತ್ರೆಗಳನ್ನು ಪಠಿಸಿ ಪರಿಚಯ ಹೊಂದುವ ಭಾಗ್ಯಕ್ಕೆ ಸಮಾನವಾದ ಸೌಭಾಗ್ಯವು ಮತ್ತೊಂದುಂಟೆ? ದೈವೀ ಸಂಪತ್ತುಗಳೆನಿಸುವ ಅಭಯ, ಚಿತ್ತಶುದ್ಧಿ, ಜ್ಞಾನಪ್ರಾಪ್ತಿಗಾಗಿ ಪ್ರಯತ್ನಿಸುವಿಕೆ, ದಾತೃತ್ವ, ಇಂದ್ರಿಯನಿಗ್ರಹ, ಮನೋವಾಕ್ಕಾಯಗಳಲ್ಲಿ ಏಕಪ್ರಕಾರವಾಗಿರುವಿಕೆ, ಅಹಿಂಸೆ, ಸತ್ಯ, ಅಕ್ರೋಧ, ಭೂತದಯೆ, ಹೃದಯಮಾರ್ದವ, ಪ್ರಭುಶಕ್ತಿ, ಉತ್ಸಾಹ ಇವುಗಳಲ್ಲದೆ ದಾನ ಧರ್ಮ ಪರೋಪಕಾರಗಳು, ದೇಶಾಭಿಮಾನ ಭಾಷಾಭಿಮಾನ ಧರ್ಮಾಭಿಮಾನಗಳು, ನಿರ್ಮೋಹ ನಿಷ್ಕಾಪಟ್ಯಗಳು, ಒಂದಿಗೇ ಸರ್ವೇಶನ ಪಾದಾರವಿಂದಗಳಲ್ಲಿ ಅಚಲ - ಅನನ್ಯಶರಣ್ಯತೆ, ಶ್ರದ್ಧಾಭಕ್ತಿಗಳು, ಧೈರ್ಯ ಸಾಹಸಾದಿಗಳು ಪರಮೌದಾರ್ಯಸ್ವಭಾವ ಮುಂತಾದ ಸ್ವರ್ಗೀಯ ಗುಣಗಳನ್ನು ತಮ್ಮ ಸ್ವಂತ ಜೀವಿತದಲ್ಲಿ ಆಚರಿಸಿ, ಅಕ್ಷರಶಃ ಆದರ್ಶಮೂರ್ತಿಗಳಾದ ಮಹನೀಯರ ಜೀವಿತಗಳು ಮಾನವ ಲೋಕಕ್ಕೇ ಮಾರ್ಗದರ್ಶಕಗಳಲ್ಲವೆ? ಲೌಕಿಕದಲ್ಲಿನ ನಡೆವಳಿಕೆಯನ್ನು ತಿಳಿಯದೆ, ಇಂದೊಂದು ನಾಳೆಯೊಂದರಂತೆ ಮಾರ್ಗಗಳನ್ನು ಕೈಕೊಂಡು "ಇತೋಭ್ರಷ್ಟಸ್ತತೋಭ್ರಷ್ಟಃ" ಆಗದಂತೆ, ಜನಾಂಗವನ್ನು ಗೊತ್ತಾದ ಒಂದು ಮಾರ್ಗದಲ್ಲಿ ಕರೆದೊಯ್ದು ಇಚ್ಛಿತ ಮೋಕ್ಷಸ್ಥಾನವನ್ನು ಸೇರಿಸುವಲ್ಲಿ ಮಹಾಪುರುಷರ ಜೀವಿತಗಳು, ಕತ್ತಲೆಯ ರಾತ್ರಿಯಲ್ಲಿನ ತಾರೆಗಳಂತೆಯೂ, ಕುರುಡನ ಕೈಕೋಲಿನಂತೆಯೂ ಸಹಾಯಕಗಳಾಗಲಾರವೆ! ಅವುಗಳ ಪಠನೆಯು ಐಹಿಕ ಪಾರತ್ರಿಕ ಸಾಧನೆಗೆ ಮಾರ್ಗದರ್ಶಕವಾಗಲಾರದೆ !

ಪ್ರಕೃತದ ಪ್ರಪಂಚ ಸ್ಥಿತಿಯಲ್ಲಿ, ನಮಗೆ, ತಮ್ಮ ಭುಜಬಲದಿಂದ ಪರ್ವತ ಶಿಖರಗಳನ್ನು ಕಿತ್ತು ಎತ್ತುವವರಾಗಲೀ, ತಪಶ್ಶಕ್ತಿಯಿಂದ ಭೂಮಿಯನ್ನು, ಚಾಪೆಯಂತೆ ಸುತ್ತುವವರಾಗಲೀ, ಯೋಗ ಸಾಮರ್ಥ್ಯದಿಂದ ಸಮುದ್ರವನ್ನೇ ಆಪೋಶನವಾಗಿ ಕುಡಿದು ಬಿಡುವವರಾಗಲೀ ದೊರಕುವುದು ಅಸಾಧ್ಯ! ಒಂದುವೇಳೆ ಅಂಥವರ ಆದರ್ಶಗಳು, ಕಥೆ ಪುರಾಣಗಳಲ್ಲಿ ದೊರಕಿದರೂ ಅವರನ್ನು ಅನುಸರಿಸಿ, ಅಂತಂತಹ ಕಾರ್ಯಗಳನ್ನು ಮಾಡ ತೊಡಗಲಿಕ್ಕಾದರೂ ಯಾರಿಗೆ ಸಾಧ್ಯವುಂಟು! ನಮ್ಮ ನಿತ್ಯಾಚರಣೆಗೆ ದುಸ್ಸಾಧ್ಯವೆನಿಸುವಂತಹ ಆ ಬಗೆಯ ಆದರ್ಶಗಳಿಂದ ನಮಗೆ ಕೇವಲ ಆಶ್ಚರ್ಯ ಮಾತ್ರವಲ್ಲದೆ ಮತ್ತಾವ ಬಗೆಯ ಲಾಭವಾಗಲು ಸಾಧ್ಯವಿದೆ? ಆದುದರಿಂದ ಈಗಿನ ಕಾಲಕ್ಕೆ ಜನಾಂಗಕ್ಕೆ ಆದರ್ಶಮೂರ್ತಿಗಳಾಗಿ ಬೇಕಾದವರು ಮೇಲ್ಕಂಡಂತೆ ಅದ್ಭುತ ಶಕ್ತಿಸಾಮರ್ಥ್ಯವಂತರಾದ ವ್ಯಕ್ತಿಗಳಲ್ಲ:— ಮನುಷ್ಯರಾಗಿ, ಮನುಷ್ಯರಲ್ಲೇ ವಾಸಿಸಿ, ಮನುಷ್ಯರಂತೆಯೇ ಕಷ್ಟಸುಖಗಳನ್ನನುಭವಿಸಿ, ಆದರೆ ಮನುಷ್ಯ ಸಾಮಾನ್ಯರಿಗೆ ಅಸಾಧ್ಯವೆಂದು ತೋರುವಂತಹ ಸದ್ಗುಣ ಸದಾಚಾರಗಳನ್ನು ಅನುಷ್ಠಾನದಲ್ಲಿ ತಂದವರೂ, ಕಾಮಕ್ರೋಧಾದಿಗಳನ್ನು ಜಯಿಸಿದವರೂ, ಮಹದೈಶ್ವರ್ಯವನ್ನು ಗಳಿಸಿದ್ದರೂ, —ದೇವೇಂದ್ರ ಭೋಗಕ್ಕೆ ಸ್ವಾಮಿಗಳಾಗಿದ್ದರೂ ಆ ಎಲ್ಲವನ್ನೂ ಬಟ್ಟೆಗೆ ಹತ್ತಿದ ತೃಣವೋ ಎಂಬಂತೆ ತ್ಯಜಿಸಿ ಬಿಡಲು ಸರ್ವದಾ ಸಿದ್ಧರಾದವರೂ, ಸರಸ್ವತಿಯನ್ನು ಪ್ರಸನ್ನೀಕರಿಸಿಕೊಂಡವರೋ ಎಂಬಂತೆ ವಿದ್ಯಾಸಂಪನ್ನರಾಗಿದ್ದರೂ, ನಿಗರ್ವಿಗಳೂ, ಸರ್ವಸುಲಭರೂ ಆದವರೂ, ಬೇಕಾಗಿದೆ. ತಮ್ಮ ಐಶ್ವರ್ಯ ಪದವಿಗಳು, ಜಾತಿಕುಲಗಳು, ಪ್ರಜ್ಞಾಪ್ರತಿಷ್ಠೆಗಳಿಂದ ಬೀಗುವವರಲ್ಲ – ಆ ಎಲ್ಲವನ್ನೂ ಗಳಿಸಿದ್ದೂ ಸಮುದ್ರಮಧ್ಯದ ಜಲರಾಶಿಯಂತೆ ಶಾಂತರಾಗಿ ಸರಳರಾಗಿ ಸಮದರ್ಶಿಗಳಾಗಿ ಸ್ವದೇಶೀಯರನ್ನೂ ಸ್ವಜನಗಳನ್ನೂ ಸಮಾನ ಭಾವದಿಂದ ನೋಡುವ ಸದ್ಗುಣಿಗಳ ಆವಶ್ಯಕವಿದೆ. ನಮ್ಮ ಪ್ರಕೃತ ಕಥಾನಾಯಕರಾದ ಸ್ವರ್ಗೀಯ ದೇಶಬಂಧು ಚಿತ್ತರಂಜನದಾಸರ ಚರಿತ್ರೆಯು ಅಂತಹ ಒಂದು ಆದರ್ಶವನ್ನು ಕೊಡಬಲ್ಲುದು. ಮಹನೀಯ ಗುಣವಿಶಿಷ್ಟರಾದ ಇಂತಹ ಪುರುಷಶ್ರೇಷ್ಠರ ಚರಿತ್ರ ಪಠನೆಯು ಶ್ರೇಯಸ್ಸಾಧಕವಲ್ಲವೆ?—

ಇಂದಿನ ಬಾಲಕ ಬಾಲಿಕೆಯರೇ - ಯುವಕ ಯುವತಿಯರೇ ಭವಿಷ್ಯಜ್ಜನಾಂಗವೆಂಬುದಕ್ಕೆ ಸಂದೇಹವಿಲ್ಲವಷ್ಟೆ ! ಸಾರ್ವತ್ರಿಕ ಜನಾಂಗ ಸುಧಾರಣೆಯು ಅದಕ್ಕೆ ಮೂಲಭೂತವಾದ ಮಾನಸಿಕ ಸುಧಾರಣೆಯನ್ನು ಅವಲಂಬಿಸಿಕೊಂಡಿದೆಯೆಂಬುದಾದರೂ ತಪ್ಪಲ್ಲ. ಭವಿಷ್ಯಜ್ಜನಾಂಗ ವೃಕ್ಷಕ್ಕೆ ಬೀಜಸ್ವರೂಪರಾದ ನಮ್ಮ ಬಾಲಕ ಬಾಲಿಕೆ - ಯುವಕ ಯುವತಿಯರಿಗೆ ಭಾರತೀಯ ಮಹಾಪುರುಷರ ಪವಿತ್ರ ಜೀವಿತಗಳನ್ನೊದಗಿಸಿ ತನ್ಮೂಲಕ ಆ ಉದಾಹರಣೆಗಳು ಅವರ ಎಳೆಯ - ತಿಳಿ ಮನಸ್ಸಿನಮೇಲೆ ಬಿಂಬಿಸುವಂತೆ ಮಾಡಿದರೆ ಅದರಿಂದ ಶ್ರೇಷ್ಠ ಪರಿಣಾಮವಾಗಲಾರದೆ ? - ಅವರೂ ತಮ್ಮ ಪ್ರೌಢ ವಯಸ್ಸಿನಲ್ಲೂ ಲೌಕಿಕ ಜೀವಿತದಲ್ಲೂ ಸಚ್ಚರಿತ್ರರಾಗಲು, ದೇಶಾಭಿಮಾನಿಗಳಾಗಲು, ದೈವಭಕ್ತರಾಗಲು, ಉದಾರಿಗಳಾಗಲು, ತ್ಯಾಗಿಗಳಾಗಲು, ಜಿತೇಂದ್ರಿಯರಾಗಲು, ದೃಢಪ್ರತಿಜ್ಞರಾಗಲು, ಕರ್ತವ್ಯಶೀಲರಾಗಲು ಸಹಾಯಕವಾಗಲಾರದೆ ? ಈ ಮಹದುದ್ದೇಶವನ್ನು ಮನಸ್ಸಿನಲ್ಲಿಟ್ಟು, ಜನಾಂಗರೂಪೀ ಜನಾರ್ದನನ ಸೇವಾಕಾರ್ಯವೆಂಬ ಭಾವನೆಯಿಂದ, 'ಸುಬೋಧ ಕುಸುಮಾಂಜಲಿ ಗ್ರಂಥಮಾಲೆ'ಯು ಈ ಪ್ರಕಟನ ಕಾರ್ಯದಲ್ಲಿ ತೊಡಗಿ ಹವಿಮೂರು ಸಂವತ್ಸರಗಳಿಂದ ಶ್ರಮಿಸುತ್ತಿದೆ. ಕರ್ಣಾಟಕ ಮಹಾಜನರು ನಮ್ಮ ಈ ನಿಶ್ಚಿತೋದ್ದೇಶವನ್ನು ಮನಕ್ಕೆ ತಂದು, ಈ ರಾಷ್ಟ್ರೋದ್ಧಾರಕ ಕಾರ್ಯಕ್ಕೆ ಸ್ವಹಸ್ತಪರಹಸ್ತಗಳಿಂದ ಸಹಕರಿಸಿ ಪ್ರೋತ್ಸಾಹಿಸಬೇಕೆಂದು ಕೋರುತ್ತೇವೆ.

ಬೆಂಗಳೂರು ನಗರ
ತಾ|| ೨೦-೭-೧೯೨೮

ಇತಿ ಸುಜನ ವಿಧೇಯ,
**ಯಂ. ರಾಮರಾವ್,**

**Truth is growing — Hearts are glowing**
**With the Flame of Liberty ;**
**Light is breaking — Thrones are quaking**
**Hark ! the Trumpet of the Free**

ಪ್ರಥಮ ಮುದ್ರಣ 3,000 ಪ್ರತಿಗಳು—ಜುಲೈ 1928.

ಸುಬೋಧ ಮುದ್ರಣಾಲಯ, ಬೆಂಗಳೂರುನಗರ

ಶ್ರೀರಾಮಸಹಾಯಂ

ದೇಶಬಂಧು

# ಚಿತ್ತರಂಜನದಾಸರು

ಆಹಾ, ನಮ್ಮ ಮಾತೃಭೂಮಿಯಾದ ಈ ಭಾರತದೇಶವು, ಪುರಾಣ ಕಾಲದಲ್ಲಿ ಮಾತ್ರವಲ್ಲ, ಈಗಿನ ಕಲಿಕಾಲದ ಹತ್ತೊಂಬತ್ತನೆಯ ಶತಮಾನ ದಲ್ಲಿ ಸಹ ಎಂತೆಂತಹ ನರಾಗ್ರಣಿಗಳಿಗೆ ಜನ್ಮವಿತ್ತಿದೆ! ಮೃತಜೀವಿಗಳೆನಿಸಿ ಕೊಂಡ ಪುರಾಣ ಪುರುಷರನೇಕರ ಉದಾಹರಣೆಗಳಿದ್ದರೂ ಕಾಲವೈಪರೀತ್ಯ ದಿಂದ ಆ ಎಲ್ಲವನ್ನೂ ಮರೆತು ಜೀವನ್ಮೃತರೆನ್ನಿಸಿದ್ದ ಭಾರತ ದೇಶೀಯರನ್ನು ಅವರ ಗಾಢನಿದ್ರೆಯಿಂದ ತಟ್ಟಿ ಎಬ್ಬಿಸಿದ ಶ್ರೀ ರಾಜಾ ರಾಮಮೋಹನ ರಾಯ್, ಶ್ರೀ ಸ್ವಾಮಿ ದಯಾನಂದ ಸರಸ್ವತಿ, ಲೋಕಮಾನ್ಯ ಬಾಲ ಗಂಗಾಧರ ತಿಲಕ್, ಶ್ರೀ ರಾಮಕೃಷ್ಣ ಪರಮಹಂಸ, ಶ್ರೀ ರಾಮತೀರ್ಥ ಮುಂತಾದ ಸ್ವರ್ಗೀಯ ಮಹಾಪುರುಷರೇನು, ಮಹರ್ಷಿ ಅರವಿಂದ ಘೋಷ್, ಜಗದೀಶ ಚಂದ್ರಬೋಸ್, ಪ್ರಫುಲ್ಲ ಚಂದ್ರರಾಯ್, ಕವಿರತ್ನ ರವೀಂದ್ರನಾಥ ಠಾಕೂರ, ಲಾಲಾ ಲಜಪತ್‌ರಾಯ್ ಅಲ್ಲದೆ ಈ ಎಲ್ಲರಿ ಗಿಂತಲೂ ಅಧಿಕವಾಗಿ ಜಗದ್ವಂದ್ಯನೆನ್ನಿಸಿರುವ ಮಹಾತ್ಮಾ ಗಾಂಧಿ ಮುಂತಾದ ನರಪುಂಗವರೇನು, ಇವರೆಲ್ಲರೂ ಜನಿಸಿದುದು ಭಾರತಮಾತೆಯ ಪವಿತ್ರ ಗರ್ಭದಲ್ಲೇ ಅಲ್ಲವೆ? ಈ ಧನ್ಯಾತ್ಮರು ತಮ್ಮ ನಿತ್ಯಾಚರಣೆಯಲ್ಲಿ ಕೈಕೊಂಡು ನಡೆಯಿಸಿದ - ನಡೆಯಿಸುತ್ತಿರುವ ಕಾರ್ಯಗಳಿಂದ ಕೇವಲ ಭಾರತದೇಶ ಮಾತ್ರವಲ್ಲ: ಸಕಲ ಭೂಖಂಡಗಳೂ ಅಭಿವೃದ್ಧಿಗೆ ಬಂದಿವೆ. ಅವರ ದಿವ್ಯ ಬೋಧನೆಗಳಿಂದ ಪಂಚಭೂಖಂಡಗಳಲ್ಲಿನ ಲಕ್ಷೋಪಲಕ್ಷ ಸಜ್ಜನರು ಉಪಕೃತರಾಗಿದ್ದಾರೆ. ತನ್ಮೂಲಕ ಆ ದೇಶಗಳೆಲ್ಲವೂ ಕೃತಜ್ಞತೆ ಯಿಂದ, ಆ ಮಹಾಮಹಿಮರ ಜನ್ಮಸ್ಥಾನವಾದ ನಮ್ಮ ಈ ಭಾರತ ಭೂ

ಮಾತೆಯ ಚರಣತಲಕ್ಕೆ ತಮ್ಮ ಶಿರಸ್ಸನ್ನು ಚಾಚುತ್ತಿವೆ! ಅವರಲ್ಲನೇಕ ಮಂದಿ, ಆಕೆಯ ಸೇವೆಗಾಗಿ ತಮ್ಮ ತನುಮನ ಧನಗಳನ್ನು ಅರ್ಪಿಸಲು ಸಿದ್ಧರಾಗಿದ್ದಾರೆ. ಇಂತಹ ಸತ್ಸಂತಾನವುಳ್ಳ ಭಾರತಮಾತೆಯ ಯಶಶ್ಚಂದ್ರಿಕೆಯು ದಶದಿಕ್ಕುಗಳಲ್ಲೂ ಬೆಳಗುತ್ತಿದೆ. ಧನ್ಯ ಭಾರತಮಾತೆ!

ಕರ್ಮ ಭೂಮಿಯೆನಿಸಿಕೊಂಡು ಪ್ರಸಿದ್ಧವಾದ ಈ ಪವಿತ್ರ ದೇಶದ ಸಕಲ ಪ್ರದೇಶಗಳಲ್ಲೂ ಅನೇಕಮಂದಿ ಸಜ್ಜನರು ಜನ್ಮಿಸಿ, ಆರ್ಯಮತದ ಅಮೌಲ್ಯ ತತ್ವಗಳು ನಶಿಸದಂತೆ ಸರ್ವದಾ ಕಾಯ್ದುಕೊಂಡು ಬಂದಿರುತ್ತಾರೆ. ಆರ್ಯಮಹರ್ಷಿಗಳ ಉಚ್ಚಾದರ್ಶಗಳು ಅಳಿಸಿ ಹೋಗದಂತೆ ಕಾಪಾಡಿರುತ್ತಾರೆ. ಮಹಾಕವಿಗಳ, ಮತಾಚಾರ್ಯರುಗಳ, ಮತ್ತು ಮಹಾಭಕ್ತರ ದಿವ್ಯ ಬೋಧನೆಗಳು ಮರೆತುಹೋಗದಂತೆ ಆಗಾಗ ಜ್ಞಾಪಿಸುತ್ತಿದ್ದಾರೆ. ಪೂರ್ವಿಕರ ದಿವ್ಯಸಿದ್ಧಾಂತಗಳನ್ನು ಸ್ವತಃ ತಮ್ಮ ಜೀವಿತಗಳಲ್ಲಿ ಆಚರಿಸಿ, 'ಕರ್ಮಭೂಮಿ' ಎಂಬ ಹೆಸರನ್ನು ಸಾರ್ಥಕಗೊಳಿಸಿದ್ದಾರೆ. ಅಷ್ಟುಮಾತ್ರವಲ್ಲ; ಜಗತ್ತಿನ ಇತರ ದೇಶಗಳು ಕಾಮ ಕ್ರೋಧ ಲೋಭ ಮೋಹ ಮದ ಮಾತ್ಸರ್ಯಗಳಿಗೊಳಗಾಗಿ ನಾಶವಾಗಿ ಹೋಗುವುದನ್ನು ಕಂಡು ಕರುಳು ಮರುಗಿ, ಭ್ರಾತೃವಾತ್ಸಲ್ಯದಿಂದ ಆ ಜನಾಂಗಗಳನ್ನು ಕುರಿತು,— ಕ್ಷಣಿಕಗಳಾದ ಈ ಧನಕನಕಾದಿಗಳನ್ನು ನಂಬಿ ಅಮೌಲ್ಯ ಜೀವಿತಗಳನ್ನು ನಾಶಗೊಳಿಸಬೇಡಿರೆ'ಂದು ಬೋಧಿಸುತ್ತಿದ್ದಾರೆ. ಭಾರತ ದೇಶದ ಪವಿತ್ರ ಸಂಸ್ಕೃತಿಯನ್ನು ಜಗತ್ತಿನ ವಿವಿಧ ಜನಾಂಗಗಳ ಮನಸ್ಸಿನ ಮೇಲೆ ಮೂಡಿಸಲು ಪ್ರಯತ್ನಿಸುತ್ತಿದ್ದಾರೆ: ಕಾಲಕರ್ಮ ಪರಿಪಾಕದಿಂದ ಭಾರತೀಯರು ಇಂದು ಪರದೇಶೀಯರಿಗೆ ರಾಜಕಾರಣದಿಂದ ದಾಸರಾದಂತೆ ಇರಬಹುದು,— ಹಾಗೆ ತೋರಬಹುದು. ಆದರೆ ಜಿತೇಂದ್ರಿಯರಾದ ಮಹಸೀಯರು ಎಂದೆಂದಿಗೂ ಸ್ವತಂತ್ರರೇ ಅಲ್ಲವೆ! ಅವರನ್ನು ಕಲ್ಲಿನ ಕೋಟೆಗಳೂ ಕಬ್ಬಿಣದ ಪಂಜರಗಳೂ ಬಂಧಿಸಿಡಲಾರವು. ಅವರ ಆತ್ಮಶಕ್ತಿಯನ್ನು ಕತ್ತಿ ಭಲ್ಯೆಗಳೂ ಕೋವಿ ಫಿರಂಗಿಗಳೂ ಎದುರಿಸಿ ಅಡಗಿಸಲಾರವು. ಅಂತಹ ಸ್ವತಂತ್ರ ಜೀವಿಗಳು ಎಷ್ಟೆಷ್ಟು ಸಂಖ್ಯೆಯಿಂದ ಹೆಚ್ಚುತ್ತಾ ಹೋಗುವರೋ ದೇಶವೂ ಸರ್ವ ವಿಧದಲ್ಲೂ ಅಷ್ಟಷ್ಟು ಪ್ರಮಾಣದಿಂದ ಉನ್ನತ ಸ್ಥಿತಿಗೆ ಏರುತ್ತಾ ಬರುವುದು. ಹಾಗೆ ಜಿತೇಂದ್ರಿಯನಾದ -ಅರ್ಥಾತ್

ತನ್ನನ್ನು ಜಯಿಸಿಕೊಂಡ ಒಬ್ಬ ಧನ್ಯಜೀವಿಯು ಜಗತ್ತನ್ನೇ ಉದ್ಧರಿಸಲು ಶಕ್ತನಾಗುವನು. ಕೋಟ್ಯಾಂತರ ಮಾನವರನ್ನು ಬಂಧಮುಕ್ತ ಮಾಡ ಬಲ್ಲನು. ಲಕ್ಷಾಂತರ ಮಂದಿಯನ್ನು ತನ್ನಂತೆ ಸಿದ್ಧಗೊಳಿಸಬಲ್ಲನು. ಜನಾಂಗದ ಮನೋನೇತ್ರದೆದುರಿಗೆ ತಾನೂ ತೇಜಸ್ವಿ ನಕ್ಷತ್ರದಂತೆ ಪ್ರಕಾಶಿಸುತ್ತ ಮಾರ್ಗದರ್ಶಕನಾಗಿರಬಲ್ಲನು. ನಮ್ಮ ಪ್ರಕೃತ ಕಥಾನಾಯಕರಾದ ಸ್ವರ್ಗೀಯ ದೇಶಬಂಧು ಚಿತ್ತರಂಜನದಾಸರು, ಹಾಗೆ ಪ್ರಸಿದ್ಧರಾಗಿ ಜನಾಂಗದ ಹೃದಯಸ್ಥ ಮೂರ್ತಿಯಾಗಿ ದೇಶೀಯ ಚರಿತ್ರಾಕಾಶದಲ್ಲಿ ನಕ್ಷತ್ರವಾಗಿ ನಿಂತ ಅಂತಹ ಒಬ್ಬ ಮಹನೀಯರು. ಆದುದರಿಂದ ಇನ್ನು ಅವರ ಪವಿತ್ರ ಚರಿತ್ರೆಯನ್ನು ಓದೋಣ ! --

---

## — ಜನ್ಮಸ್ಥಾನ, ವಂಶ ಪರಿಚಯ —

ವಂಗ ಅಥವ ಬಂಗಾಳಾ ದೇಶದ ಪೂರ್ವ ಭಾಗದಲ್ಲಿ, ಪದ್ಮಾ ಮತ್ತು ಮೆಘ್ನಾ ಎಂಬ ನದಿಗಳಿಂದ ಸುತ್ತುಬ್ಬಟ್ಟಿರುವ ವಿಕ್ರಮಪುರವೆಂಬ ಮನೋಹರ ಪ್ರದೇಶವೊಂದುಂಟು. ಅದು ಪೂರ್ವಕಾಲದಿಂದಲೂ, ವ್ಯಾಪಾರ ಉದ್ಯೋಗ ಕುಶಲಕಲಾ ಕೈಗಾರಿಕೆಗಳಿಗಾಗಿ ಬಹು ಪ್ರಸಿದ್ಧವಾಗಿದ್ದುದು. ಈ ಮಂಡಲದ ಒಂದು ಪಕ್ಕಕ್ಕಿದ್ದ ಪದ್ಮಾನದಿಯಲ್ಲಿ, ವ್ಯಾಪಾರದ ಸರಕುಗಳನ್ನು ತುಂಬಿಕೊಂಡು, ಸಿಲೋನ್ ಸುಮಾತ್ರಾ ಅರೇಬಿಯಾ ಮುಂತಾದ ದೂರದೇಶಗಳಿಗೆ ಹಡಗುಗಳು ಸಾಗುತ್ತಿದ್ದ ಕಾಲವೂ ಒಂದಿತ್ತು. ಅಷ್ಟೇ ಇಲ್ಲ. ವಿಕ್ರಮಪುರ ಪ್ರಾಂತವು ಒಂದು ಕಾಲದಲ್ಲಿ ಸರಸ್ವತೀ ಉಪಾಸಕರಿಗೂ ಆಸ್ಥಾನವಾಗಿದ್ದಿತು. ಹುಯಾನತ್ಸಾಂಗನೆಂಬ ಸುಪ್ರಸಿದ್ಧ ಚೀನಾಯಾತ್ರಿಕನಿಗೆ ವಿದ್ಯಾಗುರುವಾಗಿದ್ದ ಶೀಲಭದ್ರನೆಂಬ ಬ್ರಾಹ್ಮಣಶ್ರೇಷ್ಠನು ಈ ಪ್ರಾಂತದಲ್ಲೇ ಜನ್ಮಿಸಿದುದು. ನಲಂದ ಮುಂತಾದ ವಿಶ್ವವಿದ್ಯಾನಿಲಯಗಳಲ್ಲಿದ್ದು ಪ್ರಸಿದ್ಧರಾದ ಪಂಡಿತಶ್ರೇಷ್ಠರನೇಕರೂ ಈ ಪ್ರಾಂತದವರೇ ! ಹತ್ತೊಂಬತ್ತನೆಯ ಶತಮಾನದ ಆದಿಭಾಗದಲ್ಲಿ, ಹಿಂದೂಮತದಲ್ಲಿ ಸುಧಾರಣಾಕಾರ್ಯವನ್ನು ಕೈಕೊಂಡು, ಬ್ರಹ್ಮಸಮಾಜವನ್ನು ಸ್ಥಾಪಿಸಿ ಭಾರತದೇಶೀಯ ವಿವಿಧ ಚಳವಳಿಗಳಿಗೆಲ್ಲಾ ಜನಕನೂ

ಮಹಾ ಮೇಧಾವಿಯೂ ಆದ ರಾಜಾ ರಾಮಮೋಹನರಾಯನು ಜನಿಸಿದುದೂ ಈ ಪ್ರಾಂತದಲ್ಲೇ! ಹೀಗೆ ಈ ಪ್ರಾಂತದ ವಾತಾವರಣವೇ ಸ್ವಾಭಾವಿಕವಾಗಿ ವೀರ್ಯೋತ್ತೇಜಕವಾದುದಾಗಿದೆ.

ವಿಕ್ರಮಪುರ ಪ್ರಾಂತದಲ್ಲಿ ತಳಿರ್‌ಬಾಗ್ ಎಂಬುದೊಂದು ಗ್ರಾಮ. ಆ ಗ್ರಾಮದಲ್ಲೇ ನಮ್ಮ ಕಥಾನಾಯಕರ ಪೂರ್ವಿಕರು ವಾಸಿಸಿದ್ದರು. ಅವರ ವಂಶವು ಪೂರ್ವಬಂಗಾಳಾದಲ್ಲಿ ಬಹು ಪ್ರಸಿದ್ಧವಾದುದು. ಚಿತ್ತರಂಜನರ ಮುತ್ತಜ್ಜನಾದ ಬಾಬುರತ್ನ ಕೃಷ್ಣದಾಸ್ ಎಂಬಾತನು ತನ್ನ ದಯಾ, ದಾನ ಧರ್ಮಾದಿ ಸದ್ಗುಣಗಳಿಗಾಗಿ ಆ ಗ್ರಾಮದ ಎಲ್ಲರ ಪ್ರೀತಿಗೂ ಪಾತ್ರನಾಗಿದ್ದನು. ಈತನಿಗೆ ಜಗದ್ಬಂಧು ದಾಸನೆಂಬ ಮಗನುಂಟು. ಆತನು ರಾಜಷಾಹಿ ಮಂಡಲದಲ್ಲಿ ಪ್ರಖ್ಯಾತ ವಕೀಲನಾಗಿ ವಿಶೇಷ ದ್ರವ್ಯವನ್ನು ಸಂಪಾದಿಸಿದನು. ಆದರೆ ದಾನ ಧರ್ಮಾದಿ ಔದಾರ್ಯ ಗುಣಗಳಲ್ಲಿ ಈತನೇನು ತಂದೆಗಿಂತಲೂ ಕಡಮೆಯೆನಿಸಿರಲಿಲ್ಲ. ನ್ಯಾಯವಾದಿ ವೃತ್ತಿಯಿಂದ ಸಂಪಾದಿಸುತ್ತಿದ್ದ ಅಷ್ಟು ದ್ರವ್ಯವನ್ನೂ ಬಡತನ ಸ್ಥಿತಿಯಲ್ಲಿ ಕಷ್ಟಪಡುತ್ತಿದ್ದ ನಂಟರಿಷ್ಟರಿಗಾಗಿಯೂ ನೆರೆಹೊರೆಯವರಿಗಾಗಿಯೂ ಖರ್ಚು ಮಾಡಿಬಿಡುವನು. ಬಡ ಪ್ರಯಾಣಿಕರಿಗಾಗಿ ಒಂದು ಧರ್ಮ ಛತ್ರವನ್ನೇ ಇಟ್ಟು ಸ್ವಂತ ಖರ್ಚಿನಿಂದ ನಡಿಸುತ್ತಿದ್ದ ಪುಣ್ಯಾತ್ಮನೀತನು. ಅದರಲ್ಲಿದ್ದ ಸೇವಕರಿಗೆ ಪರಸ್ಥಳೀಕರು ಎಂತಹ ಅವೇಳೆಯಲ್ಲಿ ಬಂದರೂ, ಸ್ಥಳವಸತಿಯನ್ನು ಒದಗಿಸುವುದಲ್ಲದೆ, ಅನ್ನಾದ್ಯಾಹಾರಗಳನ್ನೂ ಹವಣಿಸಿಕೊಟ್ಟು ಉಪಚರಿಸಬೇಕೆಂದು ಕಟ್ಟಾಜ್ಞೆ ಮಾಡಿದ್ದನು. ಮತ್ತು ತನ್ನ ಆ ಆಜ್ಞೆಯನ್ನು ಅವರು ಪಾಲಿಸುತ್ತಾರೋ ಇಲ್ಲವೋ ಎಂಬುದನ್ನು ತಾನೇ ಪ್ರಯಾಣಿಕನಂತೆ ನಟಿಸಿ ಅವೇಳೆಯಲ್ಲಿ ಅಲ್ಲಿಗೆ ಹೋಗಿ ಪರೀಕ್ಷಿಸುತ್ತಿದ್ದುದೂ ಉಂಟು. ಆತನ ದಯಾಗುಣಕ್ಕೆ ಐಶ್ವರ್ಯ ಬಡತನಗಳೆಂಬ ತಾರತಮ್ಯವಿರಲಿಲ್ಲ. ಭೂತದಯಾ ಪಶ್ಚಾತ್ತಾಪಕ್ಕೆ ಮೇರೆಯಿರಲಿಲ್ಲ. ಒಂದಾನೊಂದುವೇಳೆ ಪಾಲಕಿಯಲ್ಲಿ ಕುಳಿತು ದೂರದಲ್ಲಿದ್ದ ಒಂದು ಗ್ರಾಮಕ್ಕಾಗಿ ಪ್ರಯಾಣ ಮಾಡುತ್ತಿದ್ದನಂತೆ! ಮಾರ್ಗದಲ್ಲಿ ಒಬ್ಬಾನೊಬ್ಬ ವೃದ್ಧ ಬ್ರಾಹ್ಮಣನು ಅಶಕ್ತತೆಯಿಂದ ನಡೆಯಲಾರದೆ ಎದ್ದು ಬಿದ್ದು ಮೆಲ್ಲಮೆಲ್ಲನೆ ಸಾಗುತ್ತಾ, ಕಷ್ಟಪಡುತ್ತಿದ್ದುದನ್ನು ಕಂಡು ಕರುಳು ಮರುಗಿದ ಆ ಮಹನೀಯನು

ಒಡನೆ ಪಾಲಕಿಯಿಂದ ಇಳಿದು ಆ ಬಡ ಬ್ರಾಹ್ಮಣನನ್ನು ಒಳಗೆ ಕುಳಿತು ಕೊಳ್ಳಹೇಳಿ, ತಾನು ಕಾಲು ನಡೆಯಿಂದ ನಡೆಯುತ್ತಾ ಹೋದನು. ಅಲ್ಲದೆ ಆತನು ಕವಿಯೂ, ಸಾಹಿತ್ಯ ಪ್ರೇಮಿಯೂ ಆಗಿದ್ದು, ಅನೇಕಮಂದಿ ವಿದ್ವಾಂಸರಿಗೂ ಆಶ್ರಯದಾತೃವಾಗಿ ತಾನೂ ಸ್ವತಃ ಅನೇಕ ಕವಿತೆಗಳನ್ನು ರಚಿಸಿದ್ದನು. ಆ ಕವಿತೆಗಳನ್ನು ಆ ಪ್ರಾಂತದಲ್ಲೂ ಈಗಲೂ ಬಹು ಆದರ ದಿಂದ ಜನಗಳು ಹೇಳಿಕೊಳ್ಳುವುದುಂಟು !

ಜಗದ್ಬಂಧುದಾಸನಿಗೆ ಭುವನಮೋಹನದಾಸ್, ದುರ್ಗಾಮೋಹನ ದಾಸ್, ಕಾಳೀಮೋಹನದಾಸ್ ಎಂಬ ಮೂರು ಮಂದಿ ಮಕ್ಕಳು ಜನಿಸಿ ದರು. ಅವರಲ್ಲಿ ಹಿರಿಯನಾದ ಭುವನಮೋಹನದಾಸನು ಕಲ್ಕತ್ತಾ ಹೈ ಕೋರ್ಟಿನಲ್ಲಿ ಪ್ರಸಿದ್ಧ ನ್ಯಾಯವಾದಿ ಎನ್ನಿಸಿಕೊಂಡು ಬಹು ದ್ರವ್ಯ ಸಂಪಾ ದನೆ ಮಾಡಿದನು. ಈತನಿಗೆ ಲೇಖನಾಭಿರುಚಿಯೂ ಹೆಚ್ಚಾಗಿದ್ದು ಕೆಲ ಕಾಲ 'ಬ್ರಹ್ಮೋ ಪಬ್ಲಿಕ್ ಒಪಿನಿಯನ್' ಎಂಬ ಪತ್ರಿಕೆಗೂ, ತರುವಾಯ 'ಬೆಂಗಾಲ್ ಪಬ್ಲಿಕ್ ಒಪಿನಿಯನ್' ಎಂಬ ಪತ್ರಿಕೆಗೂ ಸಂಪಾದಕನಾಗಿದ್ದು ಬಹು ವಿಚಕ್ಷಣೆಯಿಂದ ನಡಿಸಿದ್ದನು. ಆತನ ಧೈರ್ಯಸ್ಥೈರ್ಯಗಳೂ ಸತ್ಯ ಪ್ರಿಯತೆಯೂ ಅನುಕರಣೀಯಗಳಾಗಿದ್ದುವು. ಹೃದಯದಲ್ಲಿ ದೇಶಾಭಿ ಮಾನವೂ ಧರ್ಮಾಭಿಮಾನವೂ ಉಚ್ಚ ಪ್ರಮಾಣದಿಂದ ನೆಲೆಸಿದ್ದು, ಆತನು ಮಾತೃದೇಶದ ಅಭಿವೃದ್ಧಿ ವಿಷಯವನ್ನು ಸದಾ ಬಯಸುತ್ತಿದ್ದನು. ಮತ ಧರ್ಮ ವಿಚಾರದಲ್ಲಿ ಆತನು ಬ್ರಹ್ಮಸಮಾಜಾವಲಂಬಿಯಾಗಿದ್ದರೂ, ಹಿಂದೂ ಮತದ ವಿಷಯದಲ್ಲಿ ಹೃದಯದಲ್ಲಿ ಯಾವ ಒಗೆಯ ಅಸೂಯೆಗೂ ಸ್ಥಳ ಕೊಡದೆ, ಧರ್ಮದ ಹೆಸರಿನಿಂದ ಆ ಮತದಲ್ಲಿ ಪ್ರವೇಶಿಸಿರುವ ಅನೇಕ ದುರಾಚಾರ ದುಷ್ಟ ಸಂಗತಿಗಳನ್ನು ಮಾತ್ರ ಕಿತ್ತೊಗೆಯಬೇಕೆಂದು ಬಹು ಕಠಿಣವಾಗಿ ವಾದಿಸುತ್ತಿದ್ದನು.

ಧರ್ಮದೃಷ್ಟಿಯಿಂದ ಆತನು ಬ್ರಹ್ಮಸಮಾಜಕ್ಕೆ ಸೇರಿದ್ದರೂ, ತನ್ನ ವಂಶಕ್ಕೇ ಸ್ವಾಭಾವಿಕವಾಗಿ ಬಂದಿದ್ದ ಹಿಂದೂತ್ವದ ಮಾರ್ದವವು ಆತನನ್ನು ಬಿಟ್ಟುಹೋಗಿರಲಿಲ್ಲ. ನಮ್ಮ ದೇಶದಲ್ಲಿ ಇಂಗ್ಲೀಷ್ ಭಾಷಾಭ್ಯಾಸವು ಇನ್ನೂ ಪ್ರಾರಂಭ ದೆಸೆಯಲ್ಲಿದ್ದ ಆ ಕಾಲದಲ್ಲಿನ ಕಲ್ಕತ್ತಾ ಹೈಕೋರ್ಟು

ನ್ಯಾಯವಾದಿಯೆಂದರೆ, ಎಷ್ಟು ಹಣವನ್ನು ಆರ್ಜಿಸಿರಬಹುದೆಂದು ಹೇಳ ಬೇಕಾದುದೇನು ? ಆದರೆ, ಆತನು ಆ ಎಲ್ಲವನ್ನೂ, ತನ್ನ ಬಡತನ ಸ್ಥಿತಿ ಯಲ್ಲಿದ್ದ ಬಂಧುಬಾಂಧವರಿಗೋಸ್ಕರವಾಗಿ ವ್ಯಯಮಾಡಿಬಿಡುತ್ತಿದ್ದನು. ಆತನನ್ನು ದುಂದುಗಾರನೆಂದಾಗಲೀ, ಕಾರಣವಿಲ್ಲದೆ ವ್ಯಯಮಾಡುವವ ನೆಂದಾಗಲೀ ಹೇಳುವಂತಿರಲಿಲ್ಲ. ಆದರೆ, ಉದಾರತೆಯಿಂದ ಖರ್ಚು ಮಾಡತೊಡಗಿದರೆ. ತನ್ನ ಪರಿಣಾಮವೇನೆಂದು ಸಹ ಯೋಚಿಸದೆ, ಪರೋ ಪಕಾರ ಮಾಡುವಷ್ಟು ಧಾರಾಳಿಯೆನ್ನಬಹುದು. ಈ ಕಾರಣದಿಂದ ಸಾಲವು ದಿನದಿನಕ್ಕೆ ಬೆಳೆಯತೊಡಗಿತು. ಆತನು ನ್ಯಾಯವಾದಿ ವೃತ್ತಿಯಿಂದ ನಿವೃತ್ತ ನಾಗುವ ವೇಳೆಗೆ ಸಾಲವು ಆಳತೆಗೆಮೀರಿ ಬೆಳೆದುಹೋಗಿ ದಿವಾಳಿ (Insolvant) ಎಂಬ ಹೆಸರಿನಿಂದ ನ್ಯಾಯಾಸ್ಥಾನದಿಂದ ರಕ್ಷಣೆಯನ್ನು ಪಡೆದಲ್ಲದೆ - ಸಾಲಗಾರರ ಕಾಟ ತಪ್ಪದೆಂಬ ಸ್ಥಿತಿಯುಂಟಾಯಿತು. ಭುವನ ಮೋಹನನು ಉಪಾಯ ವಿಹೀನನಾಗಿ ತನ್ನಿಂದ ಬಹು ಪರಿಯಿಂದ ಉಪಕಾರ ಹೊಂದಿದ್ದ ತನ್ನ ಸ್ನೇಹಿತರಿಗಾಗಿಯೂ ನಿಷ್ಟರಿಷ್ಟರಿಗಾಗಿಯೂ ಎದುರು ನೋಡಿದನು. ಏನೂ ಪ್ರಯೋಜನ ತೋರಲಿಲ್ಲ. ಅವರನ್ನು ಕಾಣುವುದೇ ಕೆಲಕೆಲವುವೇಳೆ ಕಷ್ಟವಾಯಿತು. ಆಕಸ್ಮಾತ್ ಕಣ್ಣಿಗೆ ಬಿದ್ದರೆ, ಶುಷ್ಕ ಪ್ರೇಮವನ್ನು ತೋರಿಸಿ, ದುಸ್ಥಿತಿಗಾಗಿ ಮರುಗಿ, ಬಾಯುಪಚಾರದ ಮೃದು ಭಾಷಣಗಳಿಂದ ಸಹಾನುಭೂತಿಯನ್ನು ತೋರಿ, ನಿಟ್ಟುಸಿರುಬಿಟ್ಟು ಕಣ್ಮರೆಯಾಗುವ ಸ್ನೇಹಿತರೇ ಅನೇಕರಲ್ಲದೆ, ತನ್ನ ಆ ಕಷ್ಟಕಾಲದಲ್ಲಿ ಎದೆ ಗೊಟ್ಟು ಹಿಂದಿಟ್ಟುಕೊಂಡು ರಕ್ಷಿಸುವವರು ಯಾರೂ ಇಲ್ಲವೆಂಬುದು ನಿರ್ಧರವಾಯಿತು. ತಮ್ಮನಾದ ದುರ್ಗಾಮೋಹನದಾಸನು ತನ್ನ ಸಮಸ್ತ ಆಸ್ತಿಯನ್ನೂ ವ್ಯಯಮಾಡಿ, ತಮ್ಮಣ್ಣನನ್ನು ದಿವಾಳಿಯೆನ್ನಿಸದಂತೆ ಕಾಪಾ ಡಬೇಕೆಂದು ಪ್ರಯತ್ನಿಸಿದನು. ಕೊನೆಗೂ ಭುವನಮೋಹನನು, 'ದಿವಾಳಿ' ಎಂಬ ದುರ್ನಾಮವನ್ನು ಹೊತ್ತಲ್ಲದೆ ಸಾಲಗಾರರಿಂದ ಬಿಡುಗಡೆ ತೋರ ಲಿಲ್ಲ. ಈ ಸ್ಥಿತಿಯು ಗೌರವಸ್ಥನಾಗಿ ಬದುಕಿದ ಆತನ ಮನಸ್ಸಿಗೆ ಅಧಿಕ ಸಂತಾಪವನ್ನು ಮಾಡಿತೆಂದು ಹೇಳಬೇಕೇ ! ಆ ಅಪಮಾನವು ಮರಣ ಸದೃಶವಾದುದೆಂದೇ ಆತನು ಭಾವಿಸಿದನು. ಈ ಕಾರಣದಿಂದ ಮುಂದೆ ಆತನ ದೇಹಸ್ಥಿತಿಯೂ ದಿನದಿನಕ್ಕೆ ಕುಂದುತ್ತಾ ನಡೆಯಿತು.

ಆ ಮನೆತನದಲ್ಲಿ ಭುವನಮೋಹನನು, ಹೀಗೆ ಉದಾರತೆಗೆ ಹೆಸರು ವಾಸಿಯಾಗಿದ್ದಂತೆಯೇ, ದುರ್ಗಾಮೋಹನದಾಸನು ನಿಸ್ವಾರ್ಥತೆಗೂ, ಕಾಳೀಮೋಹನದಾಸನು ಋಜುವರ್ತನೆ ನಿರ್ಭೀತಿ ಮುಂತಾದ ಗುಣಗಳಿಗೂ ಹೆಸರುವಾಸಿಯಾಗಿದ್ದರು. ಹಿರಿಯರ ಕಾಲದಿಂದಲೂ ಅಣ್ಣತಮ್ಮಂದಿರೆಲ್ಲರೂ ಏಕಗೃಹಕೃತ್ಯದಲ್ಲೇ ಇದ್ದುದರಿಂದ ಈ ಎಲ್ಲರ ಸ್ವಭಾವಗಳೂ ಮನೆಯ ಮಕ್ಕಳ ಮನಸ್ಸಿನಮೇಲೆ ಮೂಡಿದುದರಲ್ಲಿ ಆಶ್ಚರ್ಯವಿಲ್ಲವಷ್ಟೆ !

---

## — ಜನನ – ವಿದ್ಯಾಭ್ಯಾಸ —

ಭುವನಮೋಹನ ಬಾಬುವಿನ ಪತ್ನಿಯಾದರೂ ದಯಾಗುಣಭರಿತಳೂ ಸಚ್ಛೀಲಳೂ ಪತಿಪರಾಯಣಳೂ ಆದ ಸಾಧ್ವೀಮಣಿಯಾಗಿದ್ದಳು. ಬಡವರು, ಪಾಪಿಪರದೇಶಿಗಳು ಅಲ್ಲದೆ ಸಾಧುಸಂತರು ಮುಂತಾದವರಿಗೆ ದಾನ ಮಾಡುವುದರಲ್ಲಿ ಆಕೆಯು ಕೊಡುಗೈಯು ಎಂದೂ ಹಿಂದೆಗೆದುದಲ್ಲ. ಉಪಕಾರ ಮಾಡುವಿಕೆಯಲ್ಲಿ ಆಕೆಗೆ ಇವರು ಪರಕೀಯರು ಎಂಬ ಭಾವನೆಯಿರಲಿಲ್ಲ. ಪತಿಯು ಸಾವಿರಸಾವಿರವಾಗಿ ಸಂಪಾದಿಸುತ್ತಿದ್ದಾಗ್ಗೆ ಆಕೆಯು ಎಷ್ಟು ಸಹನೆಯಿಂದ ಸಾಂಸಾರಿಕ ವಿಚಾರಗಳಲ್ಲಿ ಸಂತೋಷಚಿತ್ತಳಾಗಿರುತ್ತಿದ್ದಳೋ, ಮುಂದೆ ದಾರಿದ್ರ್ಯವು ಬಂದಡರಿ ಪತಿಯು ದಿವಾಳಿಯಾಗಿ ಕಷ್ಟಪಡುತ್ತಿದ್ದಾಗಲೂ ಅದೇ ಸಮಾಧಾನ ಶಾಂತತೆಗಳಿಂದಲೇ ಆ ಗೃಹವನ್ನು ಬೆಳಗುತ್ತಿದ್ದಳು. ಪತಿಯು ಅಗಾಧ ಸಾಲದಲ್ಲ ಎಷ್ಟು ಭಾಗವಾದರೂ ತೀರಿದರೆ ಸಾಕೆಂದು ತನ್ನ ಒಡವೆಗಳನ್ನೆಲ್ಲ ಕೊಟ್ಟುಬಿಟ್ಟು ನಿಶ್ಚಿಂತಳಾಗಿದ್ದಳು. ಅನೇಕ ದಾಸದಾಸಿಯರಿದ್ದು ತನ್ನನ್ನು ಸೇವೆ ಮಾಡುತ್ತಿದ್ದಾಗ ಹೇಗಿದ್ದಳೋ, ಎಲ್ಲರಿಗೂ ತಾನೇ ಅಡಿಗೆ ಮಾಡಿ ಬಡಿಸಿ ಮುಸುರೆ ಕಸ – ಉಡುಗಿ ಸಾರಿಸಿಕೊಳ್ಳುವಿಕೆ ಮುಂತಾದ ಸ್ಥಿತಿ ಪ್ರಾಪ್ತವಾದಾಗಲೂ ಲೇಶವೂ ಬದಲಾಯಿಸದೆ, 'ಪರಿವರ್ತನ ಧರ್ಮವನ್ನುಳ್ಳ ಸಂಸಾರದಲ್ಲಿ ಹೀಗೆಲ್ಲ ಸಂಭವಿಸುವುದರಲ್ಲಿ ಆಶ್ಚರ್ಯವೇನು' ಎಂದುಕೊಂಡು ಹಾಗೆಯೇ ಸಮಾಧಾನಗೊಳ್ಳುವಳು. ಆಕೆಯ ಉಪಾರ ಹೃದಯತೆಯನ್ನು ತಿಳಿಸುವ ಒಂದು ಸಂಗತಿಯು ಉದಹರಿಸಲರ್ಹವಾಗಿದೆ. ಅವರ ಮನೆಯಲ್ಲ ಭುವನಮೋಹ

ನನ ದೂರದ ಸಂಬಂಧಿಯೊಬ್ಬನು ಬಹು ದಿನಗಳಿಂದಲೂ ವಾಸಿಸುತ್ತಿದ್ದನು. ಅವನು ಕುಡಿತದಲ್ಲಿ ನಿಸ್ಸೀಮನು. ದಿನವೂ ಮಿತಿಮೀರಿ ಕುಡಿದು ಸ್ಮೃತಿ ತಪ್ಪಿತೆಂದರೆ, ಬೀದಿಯವರನ್ನಲ್ಲ - ಮನೆಯ ಯಜಮಾನಿಯನ್ನೇ ಅವಾಚ್ಯ ಶಬ್ದಗಳನ್ನುಪಯೋಗಿಸಿ ದೂಷಿಸತೊಡಗುವನು. ಇದನ್ನೆಲ್ಲ ಕೇಳಿಕೊಂಡಿದ್ದರೂ ಆಕೆಯು ಮನಸ್ಸಿನಲ್ಲಿ ಯಾವ ಬಗೆಯಲ್ಲೂ ವಿಕಾರಹೊಂದದೆ, ಆತನ ದುರ್ಬುದ್ಧಿಗಾಗಿ ಮಾತ್ರ ಮರುಗುತ್ತಿದ್ದಳಲ್ಲದೆ, ಒಂದುದಿನವಾದರೂ ಆ ಸಂಗತಿ ಹೀಗೆಂದು ತನ್ನ ಗಂಡನೊಂದಿಗೆ ಹೇಳಿರಲಿಲ್ಲ. ಮುಂದೊಂದು ದಿನ, ಅವನು ಬೈಯುತ್ತಿದ್ದುದನ್ನು ಭುವನಮೋಹನನೇ ಕೇಳಿ ಅತಿಶಯ ಕೋಪಾವಿಷ್ಟನಾಗಿ, ಅವನನ್ನು ಮನೆಯಿಂದ ಹೊರಕ್ಕೆ ದಾಟಿಸಬೇಕೆಂದು ಪ್ರಯತ್ನಿಸಿದನು. ಆಗಲಾ ಸಾಧ್ವಿಯು, —"ಅಯ್ಯೋ ಪಾಪ, ಬೇಡಬೇಡ. ಈ ಮನೆಯಿಂದ ಹೊರಕ್ಕೆ ಹೋದರೆ ಅವರ ಗತಿಯೇನು? ಅನ್ನವಿಲ್ಲದೆ ಸತ್ತು ಬೀದಿಯ ಅನಾಥ ಶವವಾಗುವರಲ್ಲವೆ? ಅವರು ಬೈದ ಮಾತ್ರಕ್ಕೆ ನನಗಾಗುವ ಕುಂದೇನು?" ಎಂದು ನುಡಿದು ತನ್ನ ಗಂಡನನ್ನೇ ಸಮಾಧಾನಪಡಿಸಿದಳು. ಆಕೆಯ ಪ್ರೇಮಾಮೃತವು ದ್ರವಿಸುತ್ತಿದ್ದುದು ತಾನು ಹೆತ್ತ ಮಕ್ಕಳ ವಿಷಯದಲ್ಲಿ ಮಾತ್ರವೇ ಅಲ್ಲ. ಜನರೊಬ್ಬರು ಕಷ್ಟದಲ್ಲಿದ್ದಾರೆಂದು ಕೇಳಿದೊಡನೆಯೇ ಆಕೆಯ ಕಣ್ಣುಗಳಲ್ಲಿ ನೀರು ಸುರಿಯತೊಡಗುವುದು. ತನ್ನ ಪತಿಯ ಮಿತ್ರರಲ್ಲೊಬ್ಬಾತನ ಪತ್ನಿಯು ಹೆತ್ತು ಮೃತಳಾಗಲು, ತಾನು ಆ ಚಿಕ್ಕ ಮಗುವಿನ ಪೋಷಣೆಯ ಭಾರವನ್ನು ವಹಿಸಿ ಅಗಾಧ ಕಷ್ಟವನ್ನು ಸಹಿಸಿದಳು. ತನ್ನ ಸೇವಕಿಯರಲ್ಲೊಬ್ಬಳಿಗೆ ರೋಗ ಬಂದಿರಲು, ಸ್ವತಃ ಅನ್ನಪಾನ ಔಷಧೋಪಚಾರಗಳನ್ನು ವಹಿಸಿ ಅವಳನ್ನು ಕಾಪಾಡಿದಳು.

ಇಂತಹ ಪರಮ ಸಾಧ್ವೀಮಣಿಯ ಗರ್ಭಸುಧಾಂಬುಧಿಯಲ್ಲಿ ನಮ್ಮ ಕಥಾನಾಯಕನು ೧೮೭೦ ನೆಯ ಸಂವತ್ಸರದ ನವಂಬರ್ ೫ ನೆಯ ಶುಭ ದಿನದಲ್ಲಿ ಕಲ್ಕತ್ತಾ ನಗರದಲ್ಲಿ ಜನಿಸಿದನು. ಮಗುವಿಗೆ ಮಾತಾಪಿತೃಗಳು ಚಿತ್ತರಂಜನದಾಸ್ ಎಂದು ನಾಮಕರಣ ಮಾಡಿದರು. ಚಿತ್ತರಂಜನನು ನಿಶ್ಚಯವಾಗಿಯೂ ನೋಡಿದವರಿಗೆ ಚಿತ್ತರಂಜನೆಯನ್ನುಂಟುಮಾಡುತ್ತಾ ದಿನದಿನಕ್ಕೆ ದೃಢಗಾತ್ರನಾಗಿ ಬೆಳೆಯಲಾಗಿದನು. ಬಾಲ್ಯದ ಆಟಪಾಟಗಳು. ಮಾತಾಪಿತೃಗಳಿಗೆ ಮಾತ್ರವಲ್ಲ - ನೋಡಿದ ಎಲ್ಲರಿಗೂ ಮಹದಾನಂದ

ವನ್ನುಂಟುಮಾಡುವುವು. ಮುಂದೆ ನಾಲ್ಕಾರು ವರ್ಷಗಳು ಕಳೆಯಲು ಭುವನಮೋಹನನು, ಭವಾನಿಪುರವೆಂಬ ಭಾಗದಲ್ಲಿ ವಾಸಮಾಡಲು ಬಂದು ದರಿಂದ ನಮ್ಮ ಚಿಕ್ಕ ಚಿತ್ತರಂಜನನೂ, ಅಲ್ಲೇ ಇದ್ದ 'ಲಂಡನ್ ಮಿಷನರಿ ಸೊಸೈಟಿ ಸ್ಕೂಲ್'ಗೆ ಸೇರಿ ತನ್ನ ಪ್ರಾರಂಭ ವಿದ್ಯೆಯನ್ನು ಮುಗಿಸಿದ್ದಲ್ಲದೆ, ೧೮೮೬ ನೆಯ ವರ್ಷದಲ್ಲೇ ಪ್ರವೇಶ ಪರೀಕ್ಷೆಯಲ್ಲೂ ಉತ್ತೀರ್ಣನಾದನು. ಮುಂದಿನ ಆತನ ವಿದ್ಯಾಭ್ಯಾಸವು ಕಲ್ಕತ್ತೆಯ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ನಡೆಯಿತು. ಅಲ್ಲಿದ್ದ ನಾಲ್ಕು ವರ್ಷಗಳ ಅವಧಿಯಲ್ಲೇ ಎಂದರೆ ೧೮೯೦ ನೆಯ ಸಂವತ್ಸರದಲ್ಲಿ ಬಿ. ಎ. ಪರೀಕ್ಷೆಯಲ್ಲೂ ಉತ್ತೀರ್ಣನಾದನು. ಮಗನ ಈ ವಿದ್ಯಾಭಿವೃದ್ಧಿಯು ತಾಯಿಗೆ ಪರಮಾನಂದವನ್ನುಂಟುಮಾಡಿತ್ತೆಂದು ಹೇಳಬೇಕಾದುದೇನು !

---

## —ಇಂಗ್ಲೆಂಡಿನಲ್ಲಿ—

ಚಿತ್ತರಂಜನನು, ಮುಂದೆ ಇಂಡಿಯನ್ ಸಿವಿಲ್ ಸರ್ವಿಸ್ ಪರೀಕ್ಷೆಗೆ ವ್ಯಾಸಂಗ ಮಾಡುವುದಕ್ಕಾಗಿ, ವಿಲಾಯತಿಗೆ ಪ್ರಯಾಣಮಾಡಿದನು. ಪ್ರಾರಂಭದಿಂದಲೂ, ಆತನಿಗೆ ಗಣಿತ ವಿದ್ಯೆಯೆಂದರೆ ಏಕೋ ಸೇರುತ್ತಿರಲಿಲ್ಲ. ಆದರೆ, ಸಾಹಿತ್ಯ ವಿಷಯದಲ್ಲಿ ಮಾತ್ರ ಕಲ್ಕತ್ತೆಯ ಕಾಲೇಜಿನಲ್ಲೇ ಆತನನ್ನು ಮೀರಿಸಿದವರು ಇರಲಿಲ್ಲ. ಆಂಗ್ಲೇಯ ಸಾಹಿತ್ಯ ಗ್ರಂಥಗಳಲ್ಲೂ - ಉಪನ್ಯಾಸಾದಿಗಳನ್ನು ಕೊಡುವಲ್ಲಿ ಆತನು ಪ್ರಕಟಿಸುತ್ತಿದ್ದ ವಾಗ್ವಿಜೃಂಭಣೆಯಲ್ಲೂ ಅದ್ವಿತೀಯನಾಗಿದ್ದನು. ಚಿಕ್ಕಂದಿನಿಂದಲೂ ಉಪನ್ಯಾಸ ಕೊಡುವುದು ಆತನಿಗೆ ಒಂದು ಆಟದಂತೆಯೇ ಆಗಿಹೋಗಿದ್ದಿತು. ತನ್ನ ಜೊತೆಯ ಹತ್ತುಹನ್ನೆರಡು ಮಂದಿ ಹುಡುಗರೊಂದಿಗೆ ಆಡಿಕೊಳ್ಳುತ್ತಿದ್ದಾಗ ಎಲ್ಲರನ್ನೂ ಕೂಡಿಸಿ, ತಾನು ಉಪನ್ಯಾಸ ಹೇಳತೊಡಗುವನು. ಬಹು ಕಾಲ ಪ್ರಸಂಗ ಕಲೆಯನ್ನು ಅಭ್ಯಸಿಸಿದ ವಕ್ತೃವಿನಂತೆಯೇ ಕರಚರಣಾದಿಗಳ ನಟನೆ, ಸ್ವರಭಂಗಿ ಮುಂತಾದುವುಗಳನ್ನು ಅನುಕರಿಸಿ ಮನೆಯವರಿಗೆಲ್ಲಾ ಆನಂದಾಶ್ಚರ್ಯಗಳನ್ನುಂಟುಮಾಡುವನು. ಮನೆಯವರು ಮಾತ್ರವಲ್ಲ. ಕಾಲೇಜಿನಲ್ಲಿಯ ಪ್ರೊಫೆಸರರೂ ಮತ್ತು ಸಹಪಾಠಿಗಳೂ, ಆತನು ಒಂದಾನೊಂದು

ದಿನ ತನ್ನ ವಾಗ್ವಿಜೃಂಭಣೆಯಿಂದ ದೇಶವನ್ನೇ ಬೆರಗುಮಾಡುವನೆಂದು ನುಡಿಯುತ್ತಿದ್ದರು.

ಈತನು ಇಂಗ್ಲೆಂಡಿನಲ್ಲಿ ಸಿವಿಲ್ ಸರ್ವಿಸ್ ಪರೀಕ್ಷೆಗೆ ಅಭ್ಯಾಸಮಾಡುತ್ತಿದ್ದ ಕಾಲದಲ್ಲೇ, ಸ್ವರ್ಗೀಯ ಭಾರತದೇಶ ಪಿತಾಮಹ ದಾದಾಭಾಯಿ ನೌರೋಜಿ ಮಹಾಶಯನು, ಹಿಂದೂ ದೇಶೀಯರ ದಾರಿದ್ರ್ಯಸ್ಥಿತಿ, ಇತರ ಕಷ್ಟತಾಪತ್ರಯಗಳು ಮುಂತಾದ ವಿಚಾರಗಳನ್ನು ಅಲ್ಲಿಯ ಪಾರ್ಲಮೆಂಟ್ ಸಭೆಮನೆಯಲ್ಲೇ ಸಭಾಸದನಾಗಿ ಕುಳಿತು ಸಾಕ್ಷಾತ್ತಾಗಿ ಮಂತ್ರಿಮಂಡಲ ದೆದುರಿಗೇ - ವಿವರಿಸಬೇಕೆಂದೂ, ಅದಕ್ಕಾಗಿ ಅಲ್ಲಿಯವರಿಂದಲೇ ಚುನಾಯಿತನಾಗಬೇಕೆಂದೂ ಪ್ರಯತ್ನಿಸುತ್ತಿದ್ದನು. ಆವೇಳೆಗೆ ಚಿತ್ತರಂಜನದಾಸನ ಪರೀಕ್ಷೆಯು ಮುಗಿದಿದ್ದಿತಾದರೂ, ಇನ್ನೂ ಪರೀಕ್ಷಾಫಲವು ಇಂಥದೆಂದು ಪ್ರಕಟವಾಗಿರಲಿಲ್ಲ. ಈ ಮಧ್ಯೆ ಮೇಲ್ಕಂಡಂತೆ ದಾದಾಭಾಯಿ ನೌರೋಜಿಯ ಚುನಾವಣೆಯ ಗಲಭೆಯು ಪ್ರಾರಂಭವಾಗಲು, ನಮ್ಮ ತರುಣನು ಅಲ್ಲಿದ್ದ ಇತರ ಕೆಲವರು ಭಾರತೀಯ ಯುವಕರೊಂದಿಗೆ ಸೇರಿ, ದಾದಾಭಾಯಿಗೆ ಸಹಾಯಕನಾಗಿ ಕೆಲವು ರಾಜಕೀಯ ಉಪನ್ಯಾಸಗಳನ್ನು ಕೊಟ್ಟನು. ಆ ಉಪನ್ಯಾಸಗಳು ಬಹು ಅರ್ಥಗರ್ಭಿತವಾದುವೆಂದೂ ಸಮಂಜಸವಾದುವೆಂದೂ, ಹಿಂದೂದೇಶದ ಮತ್ತು ವಿಲಾಯತಿಯ ಪತ್ರಿಕೆಗಳಲ್ಲಿ ಪ್ರಶಂಸಿಸಲ್ಪಟ್ಟುವು.—

ಚಿತ್ತರಂಜನನು ಇಂಗ್ಲೆಂಡಿನಲ್ಲಿದ್ದಾಗ್ಗೆ, ಆದ್ಯಂತ ಪಾಶ್ಚಾತ್ಯ ಸಾಹಿತ್ಯವನ್ನೆಲ್ಲ ಓದಿ, ಆ ದೇಶದಲ್ಲೇ ಜನ್ಮವೆತ್ತಿದ ಆಧುನಿಕ ನಾಗರಿಕತೆಯನ್ನೇ ಸಂಪೂರ್ಣ ಅವಲಂಬಿಸಿ ಬಿಟ್ಟಿದ್ದನು. ಆತನ ಆಹಾರ ವಿಹಾರ ವಸ್ತ್ರ ಭೂಷಣಾದಿ ಎಲ್ಲದರಲ್ಲೂ ಪಾಶ್ಚಾತ್ಯ ಸಂಸ್ಕೃತಿಯು ಸಂಪೂರ್ಣವಾಗಿ ಪ್ರವೇಶಿಸಿಬಿಟ್ಟಿದ್ದಿತು. ಆದರೇನು! ಆತನ ಹೃದಯವು ಮಾತ್ರ ಮಾತೃಭೂಮಿಯ ಪ್ರೇಮವನ್ನು ಮರೆತಿರಲಿಲ್ಲ. ಶತಾಂಶ ಪಾಶ್ಚಾತ್ಯ ದೇಶೀಯನೋ - ಎಂಬಂತೆ ತೋರುತ್ತಿದ್ದ ಆತನ ಹೃದಯ ಕುಹರದಲ್ಲಡಗಿದ್ದ ಈ ದೇಶಾಭಿಮಾನವು ಪ್ರಕಟವಾಗಲು ಒಂದು ಕಾರಣವೂ ಒದಗಿತು. ೧೮೯೦ನೆಯ ಸಂವತ್ಸರದಲ್ಲಿ, ಎಂದರೆ ಆತನು ಇನ್ನೂ ಇಂಗ್ಲೆಂಡಿನಲ್ಲಿ ವಾಸಿಸುತ್ತಿದ್ದ ಕಾಲದಲ್ಲೇ ಜೇಮ್ಸ್ ಮ್ಯಾಕ್ಲೀನ್ ಎಂಬೊಬ್ಬ ಪಾರ್ಲಿಮೆಂಟು ಮೆಂಬರು

ಒಂದಾನೊಂದು ಉಪನ್ಯಾಸದಲ್ಲಿ, ಹಿಂದೂದೇಶದ ವಿಚಾರವನ್ನೆತ್ತಿ ಮಾತ ನಾಡುವಾಗ, ಹಿಂದೂ ಮಹಮ್ಮದೀಯರ ವಿಷಯವನ್ನು ಬಹು ಹೇಯ ಭಾವದಿಂದ ಹೇಳಿದನು. ಆ ಭಾವನೆಯು 'ಹಿಂದೂದೇಶ ನಿವಾಸಿಗಳಲ್ಲಿ ಮಹಮ್ಮದೀಯರು ಗುಲಾಮಸ್ಥಿತಿಯಲ್ಲಿದ್ದಾರೆ; ಆದರೆ ಹಿಂದೂಗಳಾದರೋ ಆ ಗುಲಾಮರ ಗುಲಾಮರಾಗಿದ್ದಾರೆ' ಎಂಬರ್ಥವನ್ನು ಕೊಡುವಂತಿತ್ತು. ತಮ್ಮದೇಶದ ಜನತೆಯ ಮೇಲಿನ ಈ ದೋಷಾರೋಪಣೆಯು ಕೆಚ್ಚೆದೆಯ, ಬಿಸಿಯ ರಕ್ತದ ಇಪ್ಪತ್ತೊಂದು ವಯಸ್ಸಿನ ಚಿತ್ತರಂಜನನ ಮನಸ್ಸಿಗೆ ಬರೆಕೊಟ್ಟಂತೆ ನೋವನ್ನುಂಟುಮಾಡಲು, ಆತನು ಒಡನೆ ಇಂಗ್ಲೆಂಡಿ ನಲ್ಲಿದ್ದ ಭಾರತದೇಶೀಯ ವಿದ್ಯಾರ್ಥಿಗಳಿಗೆಲ್ಲ ಆಹ್ವಾನಗಳನ್ನು ಕಳುಹಿಸಿ, ಒಂದು ಸಭೆಯನ್ನು ನಡೆಸಿ, ಅದರಲ್ಲಿ ಮೇಲ್ಕಂಡ ಐರೋಪ್ಯನ ಉಪನ್ಯಾಸ ವನ್ನು ಪದಶಃ ವಾಕ್ಯಶಃ ಖಂಡಿಸಿದ್ದಲ್ಲದೆ, ಭಾರತದೇಶದ ಪ್ರಾಚೀನ - ಆಧು ನಿಕ ವೈಭವವನ್ನು ಕುರಿತು ಒಂದು ಅದ್ಭುತ ಉಪನ್ಯಾಸವನ್ನು ಮಾಡಿದನು. ಈ ಉಪನ್ಯಾಸದ ಸಂಗತಿಯೂ ಮುಖ್ಯಾಂಶಗಳೂ, ಲಂಡನ್ನಗರದ ಪ್ರಸಿದ್ಧ ವಾರ್ತಾಪತ್ರಿಕೆಗಳಲ್ಲೆಲ್ಲ ಪ್ರಕಟವಾದುವು. ಚಿತ್ತರಂಜನನ ವಾಗ್ವಿ ಜೃಂಭಣೆ, ವಿಷಯನಿರೂಪಣೆ ಮುಂತಾದುವುಗಳನ್ನು ಶ್ಲಾಘಿಸಿ, ಆ ಪತ್ರ ಕರ್ತರು ಆತನ ಹೆಸರಿಗೆ ತಮ್ಮ ಪತ್ರಿಕೆಗಳಲ್ಲಿ ಒಂದು ಪ್ರಾಮುಖ್ಯ ಸ್ಥಾನ ವನ್ನು ಕೊಟ್ಟರು. ಇದನ್ನು ಕಂಡ ಪರಪಕ್ಷದವರು ಆಗ ಇಂಗ್ಲೆಂಡಿನ ಮುಖ್ಯ ಮಂತ್ರಿಯಾಗಿದ್ದ ಗ್ಲಾಡ್‌ಸ್ಟನ್ನರ ಅಧ್ಯಕ್ಷತೆಯಲ್ಲಿ ಮತ್ತೊಂದು ಉಪನ್ಯಾಸವನ್ನಿಡಿಸಿ, ಅದಕ್ಕೆ ನಮ್ಮ ಚಿತ್ತರಂಜನನನ್ನು ಆಹ್ವಾನಿಸಿ, 'ನಿಮ್ಮ ಮಾತೃದೇಶ ವಿಚಾರವಾಗಿ ಹೇಳಬೇಕಾದ ಸಂಗತಿಗಳನ್ನು ಕುರಿತು ಉಪ ನ್ಯಸಿಸಬೇಕು' ಎಂದು ಕೋರಿದರು. ಆಗ ಆ ತರುಣ ದೇಶಬಾಂಧವನು, ದೇವತರಂಗಿಣಿಯ ಪ್ರವಾಹದಂತೆ ಸಾರೋದ್ಧಾರವಾಗಿ ಹೊರಡುತ್ತಿದ್ದ ವಾಗ್ವೈಖರಿಯು, ಎಂತಹ ಶೂನ್ಯ ಹೃದಯದಲ್ಲೂ ಮಾತೃದೇಶಾಭಿಮಾನ ವನ್ನು ಉಂಟುಮಾಡುವಂತಿರಲು, ಸಹಸ್ರಾರು ಸಂಖ್ಯೆಯಿಂದ ನೆರೆದಿದ್ದ ಆ ಪಾಶ್ಚಾತ್ಯರ ಸಭೆಯ ಎದುರಿಗೆ ಉಪನ್ಯಾಸ ಮಾಡಿದನು. ಅದರಲ್ಲಿ ಆಂಗ್ಲೇಯರ ಭಾರತದೇಶ ಸಂಬಂಧವನ್ನು ಕುರಿತು ಹೇಳುತ್ತಾ ಹೀಗೆಂದು ನುಡಿದನು.

"ಮಹನೀಯರೇ, ಪಾರ್ಲಿಮೆಂಟ್ ಸಭೆ ಮನೆಯಲ್ಲಿ, ಅನೇಕ ವೇಳೆ ಸುಪ್ರಸಿದ್ಧ ಆಂಗ್ಲನಾಯಕರಲ್ಲಿ ಹಲವರು,—'ಇಂಗ್ಲೆಂಡು ದೇಶವು ಹಿಂದೂಸ್ಥಾನವನ್ನು ಖಡ್ಗಶಕ್ತಿಯಿಂದ ಜಯಿಸಿತು, ಮತ್ತು ಆ ಶಕ್ತಿಯಿಂದಲೇ ಅದನ್ನು ಸ್ವಾಧೀನದಲ್ಲಿಟ್ಟುಕೊಳ್ಳಬೇಕಾಗಿದೆ' ಎಂದು ಹೇಳಿರುವುದನ್ನು ಕೇಳಿ ಬಹು ವ್ಯಸನಪಡುತ್ತೇನೆ. ಸಭ್ಯಗೃಹಸ್ಥರೇ! ಅದು ಹಾಗಲ್ಲ. ಇಂಗ್ಲೆಂಡು ಈ ವೈಭವಸಂಪನ್ನವಾದ ವಿಶಾಲ ದೇಶವನ್ನು ತನ್ನ ಕತ್ತಿ ಭಲ್ಲೆಗಳ ಮೊನೆಯನ್ನು ಮುಂದುಮಾಡಿ ಸಂಪಾದಿಸಲಿಲ್ಲ. ಈ ಜಯಸಂಪಾದನೆಯು ಅವರ ಸೈನ್ಯದ ಸಾಹಸದಿಂದ ಗಳಿಸಲ್ಪಟ್ಟುದಲ್ಲ. ಇದು ಒಂದು ಬಗೆಯ ನೈತಿಕಜಯವು. ಈ ನೈತಿಕಶಕ್ತಿಯ ಜಯದ ವಿಷಯವಾಗಿ ಇಂಗ್ಲೆಂಡು ದೇಶವು ಹೆಚ್ಚು ರೀತಿಯಿಂದ ಅಭಿಮಾನ ಪಡಬಹುದು.—ಹೆಮ್ಮೆಪಡಬೇಕು. ಆದರೆ ಇದನ್ನು ಅರಿಯದೆ, ಈ ಜಯವನ್ನು ಖಡ್ಗಶಕ್ತಿಗೇ ಆರೋಪಿಸಿ, ಆ ಶಕ್ತಿಯೇ ಅದನ್ನು ಕಾಪಾಡಬೇಕೆಂದು ವಾದಿಸುವುದು, ಅತ್ಯಂತ ಅಧಮತನದ್ದಾಗಿದೆ, ಮಾತ್ರವಲ್ಲ, ಆಂಗ್ಲೇಯರ ಕೀರ್ತಿಗೇ ಕಲಂಕವನ್ನುಂಟುಮಾಡುವುದಾಗಿದೆ."—

"ಸಾಲದುದಕ್ಕೆ, ಈ ಮೇಲಿನ ಸಿದ್ಧಾಂತವನ್ನನುಸರಿಸಿ ಆಂಗ್ಲ ಇಂಡಿಯನರ ಪ್ರಜಾಪೀಡನಾತತ್ವವೂ ಮೇಲೆಮೇಲೆ ಆಚರಣೆಯಲ್ಲಿ ತರಲ್ಪಡುತ್ತಿದೆ. ಪ್ರಜೆಗಳನ್ನು ಮೇಲೆಮೇಲೆ ಬಲವಂತಪಡಿಸುವಿಕೆ ಕೋಪೋದ್ರೇಕಗೊಳಿಸುವಿಕ, ದಬ್ಬಾಳಿಕೆಯಿಂದ ಪೀಡಿಸುವಿಕೆ ಮುಂತಾದುವುಗಳೂ ಪ್ರಾರಂಭವಾಗಿವೆ. ಸಾಲದುದಕ್ಕೆ ಇದೂ ನಿರ್ದೋಷವಾದ ಒಂದು ಬಗೆಯ ಪ್ರಜಾಪಾಲನಾ ತತ್ವವೆಂದು ಅದರ ಒಬ್ಬ ಅನುಯಾಯಿಗಳೇ ನುಡಿದಿರುವುದನ್ನು ಕೇಳಿ ಮತ್ತೂ ಆಶ್ಚರ್ಯಪಡಬೇಕಾಗಿದೆ."

ಎಂದು ತಮ್ಮ ಅಸ್ಖಲಿತ ವಾಣಿಯಿಂದಲೂ, ಅತುಲ ಧೈರ್ಯದಿಂದಲೂ ನುಡಿದು ಸಭೆಯವರನ್ನೆಲ್ಲ ಬೆರಗುಮಾಡಿಬಿಟ್ಟನು. ಇದರ ಪರಿಣಾಮವಾಗಿ. ಮೇಲ್ಕಂಡ ಜೇಮ್ಸ್ ಮ್ಯಾಕ್ಲೀನ್ ಸಾಹೇಬನು ತನ್ನ ಹೇಳಿಕೆಯನ್ನು ವಾಪಸು ತೆಗೆದುಕೊಳ್ಳುವುದು ಮಾತ್ರವಲ್ಲದೆ ಕ್ಷಮಾಪಣೆಯನ್ನೂ ಕೇಳಿಕೊಳ್ಳಬೇಕಾಯಿತು. ಮತ್ತು ಪಾರ್ಲಿಮೆಂಟಿನಲ್ಲಿ ತನಗಿದ್ದ ಸ್ಥಾನವನ್ನೂ ಬಿಡಬೇಕಾಯಿತು.

ಚಿತ್ತರಂಜನನ ಈ ಜಯಭೇರೀನಾದವು ಹಿಂದೂದೇಶದ ಅಧಿಕಾರ ವರ್ಗದ ಕಣ್ಣುಗಳನ್ನು ತೆರಯಿಸಿರಲಿಲ್ಲ. ಅವರು ಈ ಬಗೆಯ ನಿರ್ಭೀತ ಸ್ವಭಾವದ-ನಿರ್ದಾಕ್ಷಿಣ್ಯ ಪ್ರಕೃತಿಯ ಮನುಷ್ಯನು ಸಿವಿಲ್‌ಸರ್ವಿಸ್‌ಉದ್ಯೋಗಕ್ಕೆ ಯೋಗ್ಯನಲ್ಲನೆಂದು ತೀರ್ಮಾನಿಸಿದರು. ತರುವಾಯ ಹೇಳಬೇಕಾದು ದೇನು! ಆತನು ಆ ಪರೀಕ್ಷೆಯಲ್ಲಿ ಉತ್ತಮರೀತಿಯಲ್ಲಿ ತೇರ್ಗಡೆಯಾಗಿದ್ದರೂ, ಆತನಹೆಸರು ಆ ಪಟ್ಟಿಯಿಂದ ತೆಗೆದು ಹಾಕಲ್ಪಟ್ಟಿತು. ಈ ವಿಚಾರವು ತಿಳಿದೊಡನೆಯೇ, ಚಿತ್ತರಂಜನನ ಮನೆಯವರಿಗೆ ಸಿಡಿಲು ಬಡಿದಂತಾಯಿತು. ಆಗಿನ ಅವರ ಗೃಹಕೃತ್ಯದ ಸ್ಥಿತಿಯು ಬಹು ಪರಿತಾಪಕರವಾಗಿತ್ತು. ಭುವನಮೋಹನನು ಬಹುಮುಖದ ಸಾಲಗಳ ಶೂಲಘಾತಕ್ಕೆ ಒಳಪಟ್ಟು ಬಹು ಸಂಕಟಪಡುತ್ತಿದ್ದನು. ನಿತ್ಯದ ಜೀವನ ಸಾಗುವುದೇ ಬಹು ಕಷ್ಟವೆನಿಸಿತ್ತು. ಅಂತಹಸ್ಥಿತಿಯಲ್ಲಿ ಮಗನು ಸಿವಿಲ್ ಸರ್ವಿಸ್ ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಬಂದು ದೊಡ್ಡದೊಂದು ಉದ್ಯೋಗವನ್ನು ಕೈಕೊಂಡು ಸಾಂಸಾರಿಕ ಕಷ್ಟತಾಪತ್ರಯಗಳಲ್ಲಿ ನೆರವಾಗಬೇಕೆಂದು ಎಲ್ಲರೂ ಅಪೇಕ್ಷಿಸಿದ್ದುದರಲ್ಲಿ ಆಶ್ಚರ್ಯವೇನು! ಆದರೆ ಅತ್ತ ಚಿತ್ತರಂಜನನು ಹೀಗೆ ಆ ಮಾರ್ಗವು ತಪ್ಪಿದೊಡನೆಯೇ ಬ್ಯಾರಿಸ್ಟರ್ ಪರೀಕ್ಷೆಗೆ ಅಭ್ಯಸಿಸತೊಡಗಿ ಮುಂದೆ ಒಂದೆರಡು ವರ್ಷಗಳಲ್ಲೇ ಅದರಲ್ಲೂ ಜಯಶಾಲಿಯಾಗಿ ಹಿಂದಿರುಗಿದನು.

'ಆದದ್ದೆಲ್ಲ ಒಳಿತೇ ಆಯಿತು' ಎಂಬ ಮಹನೀಯರ ವಾಕ್ಯವು, ನಮ್ಮ ಕಥಾನಾಯಕನಿಗೆ ಪ್ರಾಪ್ತವಾದ ಅಪಜಯದ ವಿಷಯದಲ್ಲಿ, ಭಾರತದೇಶ ದೃಷ್ಟಿಯಿಂದ, ಉತ್ತಮವೇ ಆಯಿತು. ಏಕೆಂದರೆ, ಈ 'ಸ್ವರ್ಗೀಯ ಸರ್ಕಾರಿ ಸೇವೆ'ಗೆ ಒಂದುಸಾರಿ ಮನುಷ್ಯನು ಸಿಕ್ಕಿಬಿದ್ದನೆಂದರೆ, ಮುಂದೆ ಅವನ ದೃಷ್ಟಿಯೆಲ್ಲ ಅಧಿಕಾರದ ಏಣಿಯ ಮೆಟ್ಟಿಲುಗಳನ್ನು ಏರಬೇಕೆಂಬುದರ ಮೇಲಿರುತ್ತದಲ್ಲದೆ, ಸ್ವಜನ ಸ್ವದೇಶೀಯರೊಂದಿಗೆ ಬೆರೆಯಲು ಆತನಿಗೆ ಅವಕಾಶವೇ ದೊರೆಯದೆ ಹೋಗುವುದು. ಮುಂದೆ ಈ ಮಹನೀಯನಿಂದ ದೇಶಹಿತದ ಅನೇಕ ಕಾರ್ಯಕಲಾಪಗಳು ನಡೆಯಬೇಕೆಂದು ಇದ್ದುದರಿಂದಲೇ ಇರಬಹುದು - ಕರ್ಮಾಧಿದೇವತೆಗಳು ಈ ಸಂದರ್ಭದಲ್ಲೇ ಆತನ ಇಚ್ಛಾ ಚಕ್ರವನ್ನು ಬದಲಿಸಿ, ಆತನ ಲೌಕಿಕ ಜೀವಿತ ಮಾರ್ಗವನ್ನೇ ವ್ಯತ್ಯಸ್ತಗೊಳಿಸಿದರು.

---

## — ಮಾತೃದೇಶಕ್ಕೆ ಆಗಮನ - ವಕೀಲಿವೃತ್ತಿ —

ಮಾತೃದೇಶಕ್ಕೆ ಹಿಂದಿರುಗಿದ ಕೆಲವು ದಿನಗಳೊಳಗಾಗಿಯೇ ಅವರು ಸಾಂಸಾರಿಕ ಭಾರವನ್ನೆಲ್ಲ ಹೊರಬೇಕಾಯಿತು. ಅವರ ಸ್ವಾಭಾವಿಕ ಚಿತ್ತವೃತ್ತಿಯು ಉಪಾಧ್ಯಾಯ ಉದ್ಯೋಗದ ಕಡೆಗೆ ಎಳೆಯುತ್ತಿದ್ದಿತಾದರೂ, ಪಿತ್ರಾರ್ಜಿತ ಋಣಪರ್ವತವನ್ನು ಆ ಉದ್ಯೋಗದ ಸಹಾಯದಿಂದ ಹೊತ್ತು ನಿರ್ವಹಿಸಲು ಸಾಧ್ಯವಾಗದೆಂದು ಅವರಿಗೆ ಮನವರಿಕೆಯಾಯಿತು. ವಕೀಲಿವೃತ್ತಿಯಿಂದಲಾದರೆ ಇಂದಲ್ಲದಿದ್ದರೆ ನಾಳೆಯಾದರೂ ಋಣಮುಕ್ತರಾಗುವ ಆಶೋತ್ತರವುಂಟೆಂಬುದನ್ನು ಕಂಡುಹಿಡಿದು, ಅವರು ೧೮೯೩ನೆಯ ಸಂವತ್ಸರದಲ್ಲಿ ವಕೀಲಿ ಉದ್ಯೋಗವನ್ನೇ ಪ್ರಾರಂಭಿಸಿದರು. ಹಾಗೆ ಉದ್ಯೋಗ ಪ್ರಾರಂಭ ಮಾಡಿದೊಡನೆಯೇ ಅವರು ತಮ್ಮ ತಂದೆಯ ಅಪಾರಸಾಲಕ್ಕೆ ತಲೆಗೊಡಬೇಕಾಯಿತು. ಇತ್ತ ಇನ್ನೂ ಹೊಸ ಉದ್ಯೋಗವಾದುದರಿಂದ ಕೆಲಸದಲ್ಲಿ ಸರಿಯಾದ ಬಳಕೆಯಿಲ್ಲ, ಅನ್ನಬಟ್ಟೆಯ ವೆಚ್ಚಗಳು ಸಿಗುವಷ್ಟಾದರೂ ಸಂಪಾದನೆಯಿಲ್ಲ-ಸಾಲದುದಕ್ಕೆ ಅತ್ತ ಸಾಲಗಾರರ ಕಾಟವೂ ಬಲವಾದುದಲ್ಲದೆ ಬಡ್ಡಿಯೂ ದಿನದಿನಕ್ಕೆ ಏಪದಂತೆ ಏರತೊಡಗಿತು. ಈ ಕಷ್ಟಸಂಕಟಗಳ ಮಧ್ಯದಲ್ಲಿ ಒಂದೇ ಮನಸ್ಸಿನಿಂದ ಉದ್ಯೋಗವನ್ನು ಸಾಗಿಸುವುದು ಅಸಾಧ್ಯವೆಂದು ತೋರಸಾಗಿತು. ಅಲ್ಲದೆ ತಮ್ಮ ತಂದೆಯಂತೆಯೇ ತಾವೂ ಕೆಲವೇಳೆ 'ದಿವಾಳಿ' ಎಂಬ ಹೆಸರಿನಿಂದ ಸರ್ಕಾರದ ಮರೆಯಲ್ಲಡಗಿ ಸಾಲಗಾರರ ಕಾಟದಿಂದ ತಪ್ಪಿಸಿಕೊಳ್ಳಬೇಕಾದುದು ಆವಶ್ಯಕವೆಂದು ತೋರಿತು. ಆಗ ಹಾಗೆ ಮಾಡದಿದ್ದರೆ ಮುಂದೆ ಉಪಾಯವೇ ಇರಲಿಲ್ಲ. ಆದುದರಿಂದ ಇಷ್ಟವಿಲ್ಲದಿದ್ದರೂ ವಿಧಿಯಿಲ್ಲದೆ ಆ ಮಾರ್ಗವನ್ನು ಕೈಕೊಂಡು 'ದಿವಾಳಿ'ಗೆ ಅರ್ಜಿ ಹಾಕಿದರು. ಆದರೆ ಆ ವಿಚಾರ ಮಾತ್ರ ಅವರ ಮನಸ್ಸನ್ನು ಸಹಸ್ರಶಃ ಕತ್ತರಿಸತೊಡಗಿತು. ಆ ಮೂಲಕ ಯಾರಿಗೂ ಮೋಸಗೊಳಿಸಬೇಕೆಂಬುದು ಅವರ ಇಷ್ಟವಾಗಿರಲಿಲ್ಲವಾದರೂ, ತಮ್ಮ ಆ ಕೃತಿಯ ಸ್ಮರಣೆಯು ಬಂತೆಂದರೆ ಸಹಸ್ರಚೇಳುಗಳು ಒಂದೇಸಾರಿ ಕುಟುಕಿದಷ್ಟು ಬಾಧೆಯಾಗುವುದು. ಆದರೂ, ತಂದೆಯ ಕಷ್ಟಸುಖಗಳಲ್ಲಿ ಸಮಭಾಗಿಯಾಗುವುದು ಅಪಮಾನಕರವಲ್ಲವೆಂದು ಭಾವಿಸಿದ ಆ ತರುಣಬ್ಯಾರಿಸ್ಟರು, ತಮ್ಮ ಉದ್ಯೋಗದ ಅಭಿವೃದ್ಧಿಗೂ, ತಮ್ಮ ಸಂಪಾದನೆಗೂ ಆ ದುರ್ನಾಮವು ಎಷ್ಟು ಪ್ರತಿಬಂಧಕ

ವನ್ನುಂಟುಮಾಡುವುದೆಂದು ತಿಳಿದಿದ್ದರೂ, ಆದರಿಂದ ಹಿಂದೆಗೆಯದೆ ಧೈರ್ಯದಿಂದಲೇ ಇದ್ದರು.

'ಇನ್‌ಸಾಲ್‌ವೆಂಟ್' ಅಥವ ದಿವಾಳಿ ಎಂಬ ಈ ದುರ್ನಾಮವು ಅವರ ಅಭಿವೃದ್ಧಿಗೆ ನಿಜವಾಗಿಯೂ ಬಹು ಪ್ರತಿಬಂಧಕವನ್ನುಂಟುಮಾಡಿತು. ಉದ್ಯೋಗವಿಷಯದಲ್ಲಿ ಮಾತ್ರವಲ್ಲ. ಸಾಮಾಜಿಕ ವಿಚಾರದಲ್ಲೂ ಅವರು ಯಾವುದೊಂದು ಸಭೆಯಲ್ಲಾಗಲೀ ಅಥವ ಕೂಟದಲ್ಲಾಗಲೀ ಸೇರಿ ತಮ್ಮ ಬಾಯನ್ನೆತ್ತಲು ಮಾರ್ಗವಿಲ್ಲದಂತಾಯಿತು. ಜನಗಳೊಂದಿಗೆ ಬೆರೆದು ಉಪನ್ಯಾಸಾದಿಗಳನ್ನು ಕೊಡುವುದೆಂಬುದನ್ನು ಪ್ರಾಣಕ್ಕಿಂತಲೂ ಹೆಚ್ಚೆಂದು ಬಗೆದಿದ್ದ ಚಿತ್ತರಂಜನರ ಮನಸ್ಸಿಗೆ ಇದು ಎಷ್ಟು ವ್ಯಥೆಯನ್ನುಂಟುಮಾಡಿದ್ದಿತೆಂದು ಹೇಳಬೇಕಾದುದೇನು ! ಇದೊಂದು ಪ್ರತಿಬಂಧಕವಿಲ್ಲದಿದ್ದರೆ, ವಿದ್ಯೆಯಿಂದಲೂ, ದೇಶಸೇವಾದೀಕ್ಷೆಯಿಂದಲೂ ಜನಾಂಗನಾಯಕತ್ವಕ್ಕೆ ಸರ್ವವಿಧದಿಂದಲೂ ಯೋಗ್ಯರೆನಿಸಿದ್ದ ಈ ಪ್ರತಿಭಾವಂತರು ನಮ್ಮದೇಶದ ಸಾಮಾಜಕ ರಾಜಕೀಯ ಕಾರ್ಯಗಳಿಗೆ, ಈಗಿನಗಿಂತಲೂ ಎಷ್ಟೋ ವರ್ಷಗಳ ಹಿಂದೆಯೇ ಪ್ರವೇಶಿಸಿ ಅನೇಕಾನೇಕ ಅಭಿವೃದ್ಧಿ ಕಾರ್ಯಗಳನ್ನು ಮಾಡಿರುತ್ತಿದ್ದರೆಂಬುದಕ್ಕೆ ಸಂದೇಹವಿಲ್ಲ. ಮತ್ತು ಇದೇ ದಿವಾಳಿತನದ ಕಾರಣದಿಂದಲೇ, ಅವರು, ನ್ಯಾಯಶಾಸ್ತ್ರವಿಚಾರದಲ್ಲಿ ಅಗಾಧ ಪಾಂಡಿತ್ಯವನ್ನು ಗಳಿಸಿದ್ದವರಾದರೂ, ಕಲ್ಕತ್ತೆಯ ಹೈಕೋರ್ಟಿನ ವಕೀಲಿಯನ್ನು ಸಧ್ಯಕ್ಕೆ ಬಿಟ್ಟು ಸುತ್ತುಮುತ್ತಿನ ಊರುಗಳ ಜಿಲ್ಲರೆ ಕೋರ್ಟುಗಳಲ್ಲಿ ಕೆಲಸಮಾಡುವುದೇ ಲಾಭಕರವೆಂದೆಣಿಸಿದರು. ಎಷ್ಟೋ ದಿನಗಳವರೆಗೆ ಪ್ರತಿತಿಂಗಳ ಮನೆಯ ಖರ್ಚು ವಿಳುವುದೇ ಕಷ್ಟವಾಗಿತ್ತು : ಮಾತ್ರವಲ್ಲ-ಟ್ರಾಂಗಾಡಿಯ ಬಾಡಿಗೆಗಾಗಿ ಒಂದೆರಡು ಆಣೆಗಳಿಗೂ ತತ್ವಾರವಾಗಿ ಅವರು ಕೆಲಕೆಲವುವೇಳೆ ಕೋರ್ಟಿಗೆ ನಡೆದುಕೊಂಡೇ ಹೋಗಬೇಕಾಗುತ್ತಿದ್ದಿತಂತೆ! ಆದರೇನು! ಧೀರರೂ ಪ್ರಜ್ಞಾವಂತರೂ ಮಾನಧನರೂ ನಿರಂತರ ಪರಿಶ್ರಮಿಗಳೂ ಆದ ಅವರು ಅಂತಹ ಕಷ್ಟ ತಾಪತ್ರಯಗಳಿಗೆಲ್ಲಾ ಬೆದರದೆ, ಎದೆಗೆಡದೆ ಕಾಲನಿರೀಕ್ಷಣೆಯಲ್ಲಿದ್ದರು. ಎಂದಾದರೊಂದುದಿನ ತಮ್ಮ ಪ್ರತಿಭೆಗೆ ತಕ್ಕ ಸ್ಥಾನವು ದೊರೆಯದಿರದೆಂಬ ನಂಬಿಕೆಯು ಅವರಿಗೆ ಇಲ್ಲದಿರಲಿಲ್ಲ. ಮಾತ್ರವಲ್ಲ - ಅಂತಹ ಕಷ್ಟಬಂದಿತೆಂದು ಎಲ್ಲಾದರೊಂದು ನೌಕರಿಗೆ ಸೇರಿ ತಲೆಗಾಯ್ದುಕೊ

ಳ್ಳಬಹುದೆಂದು ಅವರು ಕನಸ್ಸಿನಲ್ಲೂ ಯೋಚಿಸಲಿಲ್ಲ. ಅಂತಹ ಅಧಮ ಭಾವನೆಯೇ ಅವರ ಮನಸ್ಸನ್ನು ಹೊಗಲಿಲ್ಲ! 'ಹುಲಿ ಹಸಿದರೆ ಹುಲ್ಲು ಮೇಯುವುದೇನು?'—

---

## — ಬಾಬು ಅರವಿಂದ ಘೋಷರ ಮೊಕದ್ದಮೆ —

ಬಂಗಾಳಾದೇಶದ ಚರಿತ್ರೆಯಲ್ಲಿ ೧೯೦೭-೦೮ ನೆಯ ಸಂವತ್ಸರಗಳು ಎಂದಿಗೂ ಮರೆಯದಂತೆ ಪ್ರಸಿದ್ಧವಾಗಿವೆ. ಆ ಸಂವತ್ಸರಗಳಲ್ಲೇ ಬಹು ದಿನಗಳಿಂದ ಜಡತೆಯನ್ನು ಹೊಂದಿ ಮಲಗಿದ್ದ ಆ ದೇಶೀಯರಲ್ಲಿ ಅಭೂತ ಪೂರ್ವ ಜಾಗೃತಿಯೊಂದು ತಲೆದೋರಿತು. ವ್ಯಕ್ತಿ ಜೀವಿತದಲ್ಲಿ ಹೇಗೋ ರಾಷ್ಟ್ರೀಯ ಜೀವಿತದಲ್ಲೂ ಹಾಗೆಯೇ ಕೆಲಕೆಲವುವೇಳೆ ಬಹುದುಷ್ಪರಿಣಾಮಕಾರಿಯೆಂದು ತೋರುವ ಕಾರ್ಯಗಳಿಂದಲೇ, ಅಗಾಧ ಸತ್ಪರಿಣಾಮಗಳು ಪ್ರಾಪ್ತವಾಗುವುದುಂಟು! ಆಗ್ಗೆ ವೈಸರಾಯಿಯಾಗಿದ್ದ ಲಾರ್ಡ್ ಕರ್ಜನ್ ಪ್ರಭುವು ಅದೊಂದು ದುರ್ಮುಹೂರ್ತದಲ್ಲಿ ಬಂಗಾಳಾದೇಶವನ್ನು ಪೂರ್ವ-ಪಶ್ಚಿಮ ಪ್ರಾಂತಗಳೆಂದು ವಿಭಾಗ ಮಾಡಬೇಕೆಂಬ ರಾಜಾಜ್ಞೆಯನ್ನು ಹೊರಡಿಸಿದನು. ಸರಿ, ಅದುವೊದಲು ದೇಶೀಯರ ಮೇಲ್ಕಂಡ ಜಡತೆ-ನಡತೆಗಳೆಲ್ಲಕ್ಕೂ ಬರೆಕೊಟ್ಟಂತಾಗಿ ಅವರಲ್ಲಿ ಜಾಗೃತಿಯು ಕಾಣಬಂದಿತು. ಸಮಸ್ತರೂ ತಮ್ಮಲ್ಲಿದ್ದ ಭೇದಭಾವನೆಗಳನ್ನು ನೀಗಿ ಒಂದಾದರು. ಏಕವಾಕ್ಯತೆಯಿಂದ ಬಂಗಾಳಾದೇಶವೇ ಸರ್ಕಾರದವರ ಆ ಕೃತಿಯನ್ನು ನಿಷೇಧಿಸಿತು. ಐರೋಪ್ಯರ ವಿಷಯದಲ್ಲಿ ವಿರೋಧಭಾವನೆಯು ಸರ್ವತ್ರ ಕಾಳ್ಕಿಚ್ಚಿನಂತೆ ಹಬ್ಬಿ ಹರಡತೊಡಗಿತು. ಮಾತ್ರವಲ್ಲ, ಐರೋಪ್ಯನಾಗರೀಕತೆಯೂ ಅವರ ದೇಶದಿಂದ ಆಮದಾಗಿ ಬಂದ ಸಕಲವಿಧ ವಸ್ತುಗಳೂ ಅಸಹ್ಯವೆಂದು ತೋರಹತ್ತಿದುವು. ಈ ದ್ವೇಷಭಾವನೆಯು ದಿನದಿನಕ್ಕೆ ಹೆಚ್ಚತೊಡಗಿತು. ದೇಶಾಭಿಮಾನ ಭಾಷಾಭಿಮಾನ ಧರ್ಮಾಭಿಮಾನಗಳು ಮೊಳೆದೋರಿದವು. ಒಂದಿಗೇ ಪರಕೀಯರ ದಾಸ್ಯದಿಂದ ವಿಮುಕ್ತರಾಗಿ ಸ್ವಾತಂತ್ರ್ಯ ಸೌಭಾಗ್ಯವನ್ನು ಗಳಿಸಬೇಕೆಂಬ ಆಕಾಂಕ್ಷೆಯೂ ಉದಯಿಸಿತು. ಎಂತೂ ಇಂದಿನ ನಿತ್ಯವ್ಯವಹಾರದ - ಪ್ರತಿಮನೆಯ ಮಾತಾಗಿರುವ ಸ್ವರಾಜ್ಯ, ದೇಶೀಯ

ವಿದ್ಯಾಭ್ಯಾಸ, ಪರದೇಶೀ ವಸ್ತು - ವಸ್ತ್ರ ಬಹಿಷ್ಕರಣ ಮುಂತಾದುವು ಗಳೆಲ್ಲಕ್ಕೂ ಬೀಜಾವ್ಯಾಪನೆಯು ಅಂದು ಆರೂಪದಲ್ಲಿ ಆಯಿತು.

ಈ ಸ್ವದೇಶೀ ಚಳವಳಿಗೆ ಮುಂದಾಳಾಗಿ ನಿಂತು ಲೇಖನ ಭಾಷಣಗಳ ಮೂಲಕ ದೇಶೀಯರಲ್ಲಿ ನವಜೀವನವನ್ನು ತುಂಬುತ್ತಿದ್ದವರು, ಶ್ರೀ ಅರವಿಂದ ಘೋಷ್ ಮಹಾಶಯರು. ಈ ಮುಖಂಡರ ಮೇಲೂ ಅವರ ಅನುಯಾಯಿಗಳಾಗಿದ್ದ ಇತರ ಅನೇಕಮಂದಿ ತರುಣರಮೇಲೂ ಸರ್ಕಾರದವರ ವಕ್ರದೃಷ್ಟಿಯು ಪ್ರಾರಂಭದಿಂದಲೂ ಇದ್ದೇ ಇತ್ತು. ಹೀಗಿರುವಲ್ಲಿ ೧೯೦೮ ನೆಯ ಮೇ ೩ ನೆ ದಿನ ಮಧ್ಯರಾತ್ರಿಯ ವೇಳೆಯಲ್ಲಿ - ಸರ್ವತ್ರ ನಿಸ್ತಬ್ಧತೆಯು ಕಂಡುಬರುತ್ತಿದ್ದಾಗ್ಗೆ, ಬಂಗಾಳಾ ಸರ್ಕಾರದವರು ಬಾಬು ಅರವಿಂದ ಘೋಷರನ್ನೂ, ಅವರ ಅನುಯಾಯಿಗಳಲ್ಲಿ ಕೆಲವರನ್ನೂ ಬಂಧಿಸಿ, ಅವರು ರಾಜಭಕ್ತಿಯುತರಾದ ಪ್ರಜೆಗಳಿಗೆ ದುರ್ಬೋಧನೆ ಮಾಡಿ ಸರ್ಕಾರಕ್ಕೆ ದ್ರೋಹವನ್ನೆಸಗಿದ ಕ್ರಾಂತಿಕಾರಕರೆಂಬ ಆಪಾದನೆಗಳನ್ನು ಹೊರಿಸಿ ನ್ಯಾಯಾಸ್ಥಾನಕ್ಕೆ ಎಳೆದರು. ಈ ಸಂದರ್ಭದಲ್ಲಿ-ಎಂತೋ,ಕರ್ಮಾಧಿದೇವತೆಗಳು, ನಮ್ಮ ಕಥಾನಾಯಕರನ್ನು ಮುಂದಕ್ಕೆ ತಳ್ಳಿ ಶ್ರೀಯುತ ಅರವಿಂದರ ಮತ್ತು ಅವರ ಅನುಯಾಯಿಗಳ ಪರವಾಗಿ ವಾದಿಸಲು ಅನುಗೊಳಿಸಿದರು. ಈ ಮೊಕದ್ದಮೆಯು ಒಂದು ವರ್ಷಕ್ಕೆ ಮೇಲ್ಪಟ್ಟು ಕಲ್ಕತ್ತಾ ಹೈಕೋರ್ಟಿನಲ್ಲಿ ನಡೆಯಿತು. ಆ ಕಾಲದಲ್ಲೆಲ್ಲ ಚಿತ್ತರಂಜನದಾಸರು ಬಹು ಸ್ವಾರ್ಥತ್ಯಾಗ ಬುದ್ಧಿಯಿಂದ ಕೆಲಸಮಾಡಿದರು. ಇದರಿಂದ ಅವರಿಗೆ ಕಾಸುವೀಸಗಳ ಪ್ರತ್ಯಕ್ಷ ಪ್ರಯೋಜನವಾಗದಿದ್ದರೂ, ಮತ್ತೊಂದು ಬಹು ದೊಡ್ಡ ಲಾಭವಾಯಿತು. ಇದರ ಮೂಲಕ ಅವರು, ಕಲ್ಕತ್ತೆಯ ನ್ಯಾಯವಾದಿಗಳ ಸಮೂಹದ ಅಗ್ರಭಾಗಕ್ಕೇ ಬಂದು ನಿಲ್ಲುವಂತಾಯಿತು. ಈ ಕಾಲದಲ್ಲಿ ನಾಲ್ಕಾರು ತಿಂಗಳ ಕಾಲವಂತೂ ಅವರಿಗೆ ಮನೆಯವೆಚ್ಚವೇ ಸಲ್ಲುತ್ತಿರಲಿಲ್ಲ. ಸಾಲದುದಕ್ಕೆ ಅಗಾಧಸಾಲವೂ ಹೊತ್ತಿತು. ಕೊನೆಗೆ ಒಂದು ವರ್ಷಕಾಲ ನಡೆದ ಆ ಮೊಕದ್ದಮೆಯು ಫಲಿತಾಂಶವಾಗಿ ಅರವಿಂದರಿಗೆ ತಪ್ಪಿತಸ್ಥರಲ್ಲವೆಂದು ಬಿಡುಗಡೆಯಾಯಿತು. ಸರಿ, ಒಡನೆ ಕೇಳುವುದೇನು! ಚಿತ್ತರಂಜನರ ಕಲ್ಪತರುವು ಪುಷ್ಪಿತವಾಯಿತು! ಚಿತ್ತರಂಜನರು ಜನತೆಯ ಚಿತ್ತ ರಂಜನರಾದರು. ಅವರ ಕೀರ್ತಿಯು ಪ್ರತಿಯೊಬ್ಬರ ಬಾಯಲ್ಲಿಯೂ

ಹಾಡಲ್ಪಟ್ಟಿತು. ಅವರ ನಿಸ್ವಾರ್ಥತೆಯೂ ಪ್ರಜ್ಞಾವೈಭವವೂ ಬಹು ಬಗೆಯಿಂದ ಕೊಂಡಾಡಲ್ಪಟ್ಟುವು. ಒಂದಿಗೇ ಕೋರ್ಟಿನ ಮುಂದಿದ್ದ ಡೆಕ್ಕಾ ರಾಜದ್ರೋಹದ ಮೊಕದ್ದಮೆಯನ್ನೂ, ಪರದೇಶೀ ವಸ್ತು ಬಹಿಷ್ಕರಣ ವಿಚಾರದಲ್ಲಿ ಹುಟ್ಟಿದ್ದ ಮೊಕದ್ದಮೆಯನ್ನೂ ಪ್ರತಿಫಲಾಪೇಕ್ಷೆಯಿಲ್ಲದೆ ನಡೆಸಿ ಅವರು ಜಯಶಾಲಿಗಳಾದರು. ಆಮೇಲಂತೂ ಚಿತ್ತರಂಜನರು ರಾಷ್ಟ್ರೀಯ ವೀರರೆಂಬ ಮಾತು ಜನಜನಿತವಾಯಿತು. ಸರಿ, ಅಷ್ಟೆ! ಅವರ ಈ ನಿಷ್ಕಾಮ ಕರ್ಮಕ್ಕೆ ಭಗವಾನನಾದರೂ ಯೋಗ್ಯ ಪ್ರತಿಫಲವನ್ನು ಕೊಡದೆ ಋಣಿಯಾಗುವನೇನು ? ಇತ್ತ ಈ ಮೊಕದ್ದಮೆಗಳ ಫಲಿತಾಂಶವು ಪ್ರಕಟವಾದೊಡನೆಯೇ, ಕೃತಕೃತ್ಯರಾದ ದಾಸರು ಹಿಂದಿರುಗಿ ಬಂದು ಎಂದಿನಂತೆ ಕಲ್ಕತ್ತಾ ಹೈಕೋರ್ಟಿನ ತಮ್ಮ ನಿತ್ಯಕೃತ್ಯಗಳನ್ನು ಅವಲಂಬಿಸಿ ಕಾರ್ಯತತ್ಪರರಾದರು. ಮತ್ತು ಅಂದಿನಿಂದಲೇ ಅವರಿಗೆ ಕೀರ್ತಿಲಕ್ಷ್ಮಿ ಭಾಗ್ಯಲಕ್ಷ್ಮಿಯರಿಬ್ಬರೂ ಒಲಿದು ಮಾಲೆಯನ್ನು ಹಾಕಿದರು.

---

## — ದಿವಾಳಿತನದಿಂದ ಬಿಡುಗಡೆ —

ಚಿತ್ತರಂಜನದಾಸರು ತಮ್ಮ ತಂದೆಯವರು ಮಾಡಿದ್ದ ಅಪಾರ ಸಾಲವನ್ನು ತೀರಿಸಲಾರದೆ ಅವರೊಂದಿಗೆ ಸೇರಿ ದಿವಾಳಿ (Insolvant) ಎಂಬ ಹೆಸರಿನಿಂದ, ಸಾಲಗಾರರ ಕಾಟವನ್ನು ತಪ್ಪಿಸಿಕೊಂಡಿದ್ದುದರಲ್ಲಿ, ಯಾರಿಗೂ ಮೋಸ ಮಾಡಬೇಕೆಂಬ ಯೋಚನೆಯು ಮನಸಾವಾಚಾಕರ್ಮಣಾ ಇರಲಿಲ್ಲವೆಂಬುದು ತಿಳಿದಿದೆಯಲ್ಲವೆ? ವಕೀಲಿವೃತ್ತಿಯಲ್ಲಿ ಒಂದು ಸ್ಥಾನವು ದೊರೆತು ಭಗವದನುಗ್ರಹದಿಂದ ಸಂಪಾದನೆಯು ಕುದುರಲಾಗಿ ಚಿತ್ತರಂಜನರು ಹಿಂದಿನ ಸಾಲದ ಪೈಕಿ ಕೊನೆಯ ಕಾಸಿನವರೆಗಿನ ಬಾಕಿಯನ್ನೂ ತೀರಿಸಲು ಪ್ರಾರಂಭಿಸಿದರು. ಹಾಗೆಯೇ ಹಲವು ಸಹಸ್ರ ರೂಪಾಯಿಗಳವರೆಗಿದ್ದ ಆ ಸಾಲವನ್ನೆಲ್ಲ ತೀರಿಸಿ, ತರುವಾಯ ತಮ್ಮ ಮತ್ತು ತಮ್ಮ ತಂದೆಯ ಹೆಸರಿನಲ್ಲಿದ್ದ 'ದಿವಾಳಿ' ಎಂಬ ದುರ್ನಾಮವನ್ನು ಪರಿಹರಿಸಬೇಕೆಂದು ನ್ಯಾಯಾಸ್ಥಾನಕ್ಕೆ ವಿಜ್ಞಾಪಿಸಿಕೊಂಡರು. ಆಗ ನ್ಯಾಯಾಧಿಪತಿಯಾಗಿದ್ದ ಮಿ॥ ನ್ಯಾಯಮೂರ್ತಿ ಫ್ಲೆಚರ್ ಎಂಬುವರು ನಮ್ಮ ಕಥಾನಾಯಕರ ಪ್ರಾಮಾಣಿಕತೆಗಾಗಿ ಪರ

ಆಶ್ಚರ್ಯಪಟ್ಟು,—'ಸಾಲಕೊಡಲು ಸಾಧ್ಯವಿಲ್ಲದೆ ನ್ಯಾಯಾಸ್ಥಾನದ ಮರೆ ಹೊಕ್ಕು ದಿವಾಳಿಯಾಗಿದ್ದಾತನು, ಪುನಃ ತನ್ನ ಹಳೆಯ ಸಾಲಗಳನ್ನೆಲ್ಲಾ ಒಪ್ಪಿಕೊಂಡು ತೀರಿಸಿ, ದಿವಾಳಿತನದ ಪರಿಹಾರಕ್ಕಾಗಿ ಅರ್ಜಿ ಹಾಕಿಕೊಂಡುದು ಬ್ರಿಟಿಷ್ ಕೋರ್ಟಿನ ಚರಿತ್ರೆಯಲ್ಲಿ ಇದೇ ಮೊದಲು' ಎಂದು ನುಡಿದು ಶ್ರೀ ದಾಸರ ಋಜುವರ್ತನವನ್ನು ಮೆಚ್ಚಿಕೊಂಡು, ಅವರನ್ನು ಅನೇಕ ಬಗೆಯಿಂದ ಅಭಿನಂದಿಸಿದರು. ಆಹಾ, ತಮ್ಮ ತಂದೆಯನ್ನು ಋಣಮುಕ್ತನೆಂದೆನಿಸುವಲ್ಲಿ ನಮ್ಮ ಕಥಾನಾಯಕರು ಮಾಡಿದ ಈ ಕಾರ್ಯವು ಅದ್ವಿತೀಯವಾದುದಲ್ಲವೆ? ಇಂತಹ ಪುತ್ರರತ್ನವನ್ನು ಹೆತ್ತ ಮಾತೆಯು ಎಂತಹ ಪುಣ್ಯಶಾಲಿನಿಯು! ವ್ಯವಹಾರ ಪ್ರಸಂಗದಲ್ಲಿ ಯಾರೂ ಕಂಡು ಕೇಳಿ ಅರಿಯದಿದ್ದ ಈ ನ್ಯಾಯವರ್ತನೆಯು ಚಿತ್ತರಂಜನರನ್ನು 'ಕಲಿಯುಗ ಹರಿಶ್ಚಂದ್ರ'ನೆಂಬಂತಹ ಉಚ್ಚ ಪದವಿಗೇರಿಸಿತು.

---

## — " ನ್ಯಾಯವಾದಿ ಉದ್ಯೋಗ ತತ್ವ " —

ಬಾಬು ಅರವಿಂದ ಘೋಷರು ಬಿಡುಗಡೆಯಾದಂದಿನಿಂದ ಕಲ್ಕತ್ತಾ ಹೈಕೋರ್ಟಿನೆದುರಿಗೆ ಬಂದ ಅತಿ ಮುಖ್ಯ ಮೊಕದ್ದಮೆಗಳಲ್ಲೆಲ್ಲ ನಮ್ಮ ಕಥಾನಾಯಕರ ಸಂಬಂಧವು ತಪ್ಪಿದುದೇ ಇಲ್ಲ. ಅವರ ದಿನವೊಂದರ ಉತ್ಪನ್ನವು ಒಂದು ಸಾವಿರ ರೂಪಾಯಿಗಳಿಗೆ ಮೀರಿತು. ಸುಪ್ರಸಿದ್ಧ ನ್ಯಾಯವಾದಿ ಎಂಬ ಅವರ ಕೀರ್ತಿಯು ಬಂಗಾಳಾ ದೇಶದಲ್ಲೆಲ್ಲ ಹಬ್ಬಿದುದು ಮಾತ್ರವಲ್ಲ - ಹೊರಕ್ಕೂ ಹರಡಿತು. ಅವರು ಅತಿ ಮುಖ್ಯವೆಂದು ತೋರಿದ ಕೆಲಕೆಲವು ಮೊಕದ್ದಮೆಗಳಲ್ಲಿ ವಾದಿಸಲಿಕ್ಕಾಗಿ ಮಧ್ಯ ಪ್ರಾಂತಗಳಲ್ಲಿನ ನಾಗಪುರಕ್ಕೂ, ಬರ್ಮಾದೇಶದಲ್ಲಿನ ರಂಗೂನಿಗೂ ಸಹ ಹೋಗಿದ್ದರು. ಅವರು ಯಾವುದಾದರೊಂದು ಮೊಕದ್ದಮೆಯನ್ನು ತೆಗೆದುಕೊಂಡರೆಂದರೆ, ಅನೇಕ ಗಂಟೆಗಳವರೆಗೆ ಅದರ ವಿಚಾರವನ್ನೆಲ್ಲ ವಿವಿಧ ದೃಷ್ಟಿಗಳಿಂದ ಯೋಚಿಸಿ, ಅದರ ತೀರ್ಮಾನವನ್ನೂ ನಿರ್ಧರಿಸಿಕೊಂಡಲ್ಲದೆ, ಮುಂದರಿಸುತ್ತಿರಲಿಲ್ಲ. ಅವರು ಹಾಗೆ ಆ ಸಂಬಂಧ ವಿಚಾರದಲ್ಲಿ ತೊಡಗಿದ್ದಾಗ್ಗೆ ಅಂತರ್ಮುಖಿಯಾದ ಯೋಗಿಯಂತೆ, ಎಷ್ಟೋ ವೇಳೆ ಬಾಹ್ಯವಿಚಾರದ ಸ್ಮರ

ಣೆಯೇ ಇಲ್ಲದೆ ಇದ್ದುದುಂಟು. ಕೆಲಸದ ಗಲಾಟೆಯಿಂದ ತಮ್ಮಿಂದ ಮುಂದೆ ನಡಿಸಲು ಸಾಧ್ಯವಿಲ್ಲವೆಂದು ತೋರಿದ ಮೊಕದ್ದಮೆಗಳನ್ನು ಕಕ್ಷಿಗಾರರಿಗೆ ವಾಪಸು ಮಾಡುವುದರೊಂದಿಗೆ ಅವರಗೆ ಅವರಿಂದ ತಾವು ಪಡೆದಿದ್ದ ಹಣ ವನ್ನೂ ಹಿಂದಿರುಗಿ ಕೊಟ್ಟುಬಿಡುತ್ತಿದ್ದರು. ಈ ಬಗೆಯ ಸತ್ಯಸಂಧತೆ ಯುಂತೂ, ಅವರ ಕಕ್ಷಿಗಾರರ ದೃಷ್ಟಿಯಲ್ಲಿ ಅವರನ್ನು ನರಾವತಾರಿ ಧರ್ಮ ರಾಯನೇ ಈತನು ಎಂದು ಭಾವಿಸುವಂತೆ ಮಾಡಿತು. ತಮಗೆ ಬಹು ದ್ರವ್ಯ ಲಾಭವಾಗಬಹುದಾದ ಅನೇಕ ಕಾರ್ಯಕಲಾಪಗಳಿದ್ದರೂ, ಬಡಪಂಚ್ಯಾರಾ ದರೂ ಬಂದು ಹೇಳಿಕೊಂಡರೆ, ಯಾವ ಪ್ರತಿಫಲವನ್ನೂ ಅಪೇಕ್ಷಿಸದೆಯೇ ಅವರ ಮೊಕದ್ದಮೆಗಳನ್ನು ನಡಿಸಿ ಜಯಸಂಪಾದನೆಮಾಡಿ ಕೊಡುತ್ತಿದ್ದ ಉದಾರತೆಗೂ ಅವರಲ್ಲಿ ಕೊರತೆಯಿರಲಿಲ್ಲ. ಒಂದಾನೊಂದುವೇಳೆ ಸೈನ್ಯಕ್ಕೆ ಯುದ್ಧ ಸಾಮಗ್ರಿಗಳನ್ನು ಒದಗಿಸುವ ವರ್ತಕರೊಂದಿಗೆ ಸರ್ಕಾರದವರಿಗೆ ಒಂದು ವ್ಯವಹಾರವು ಒದಗಿತು. ಆಗ ಸರ್ಕಾರದವರು, ನಮ್ಮ ಕಥಾನಾ ಯಕರು ತೀವ್ರ ರಾಷ್ಟ್ರೀಯಪಕ್ಷಕ್ಕೆ ಸೇರಿದ ದೇಶಾಭಿಮಾನಿಯೆಂಬ ಸಂಗತಿಯನ್ನು ತಿಳಿದಿದ್ದರೂ, ಅವರ ಋಜುವರ್ತನೆಯಲ್ಲಿ ನಂಬಿಕೆಯನ್ನಿಟ್ಟು ತಮ್ಮ ಪಕ್ಷದಲ್ಲಿದ್ದು ಆ ಮೊಕದ್ದಮೆಯನ್ನು ನಡಿಸಬೇಕೆಂದು ಕೇಳಿಕೊಂ ಡರು. ಶ್ರೀಯುತ ದಾಸರು—"ಸರ್ಕಾರಿಯ ಪಕ್ಷದಲ್ಲಿದ್ದು ವಾದಿಸುವೆ ನಾದರೂ, ನನ್ನ ಮನಸ್ಸಾಕ್ಷಿಗೆ ವಿರೋಧವಾಗಿಯಾಗಲೀ ಅಥವ ನನ್ನ ಮಾತೃದೇಶಕ್ಕೆ ದ್ರೋಹಸಾಧಕವಾಗಿಯಾಗಲೀ ನಡೆವಂತೆ ಬಲವಂತ ಪಡಿ ಸುವಿರಾದರೆ ಆ ಕೆಲಸವು ನನ್ನಿಂದ ಆಗಲಾರದು" ಎಂದು ನಿರ್ದಾಕ್ಷಿಣ್ಯವಾಗಿ ಹೇಳಿದರು. ಸರ್ಕಾರದ ಕಡೆಯವರು, ಅವರ ನಿಬಂಧನೆಗಳೆಲ್ಲಕ್ಕೂ ಒಪ್ಪಿ, ಮೊಕದ್ದಮೆಯ ಕಟ್ಟನ್ನು ಒಪ್ಪಿಸಿ ಹೊರಟುಹೋದ ಸ್ವಲ್ಪ ಹೊತ್ತಿನೊಳ ಗಾಗಿಯೇ, ಎದುರು ಪಕ್ಷದ ವರ್ತಕರು ಬಂದು—"ನಮ್ಮ ಪಕ್ಷದಲ್ಲಿದ್ದು ವಾದ ನಡಿಸುವುದಾದರೆ ತಮ್ಮ ಸಂಭಾವನೆ"ಯೆಂದು ನುಡಿದು ಹಲವು ಲಕ್ಷ ರೂಪಾಯಿಗಳ 'ಚೆಕ್' ಒಂದನ್ನು ಬರೆದು ಎದುರಿಗಿಟ್ಟರು. ಆದರೂ, ಪ್ರಾಮಾ ಣಿಕರಾದ ನಮ್ಮ ಕಥಾನಾಯಕರು,—"ಸದ್ಗೃಹಸ್ಥರೇ, ನಾನು ಈವರೆಗೇ ಸರ್ಕಾರದವರ ವಕಾಲತ್ತನ್ನು ಒಪ್ಪಿಕೊಂಡು ಮಾತು ಕೊಟ್ಟಿದ್ದೇನಾದ್ದ ರಿಂದ, ನಾನು ನ್ಯಾಯರೀತಿಯಂತೆ ಅವರ ಕೆಲಸಕ್ಕಾಗಿ ಬದ್ಧನಾಗಿದ್ದೇನೆ.

ನಿಮಗೆ ಸಹಾಯ ಮಾಡಲು ಸಾಧ್ಯವಿಲ್ಲ''ಎಂದು ನುಡಿದರು. ಕೈಗೆಬಂದಿದ್ದ ಅನೇಕ ಲಕ್ಷದ್ರವ್ಯಕ್ಕಾಗಿ ತಮ್ಮ ಪ್ರಾಮಾಣಿಕತೆಯನ್ನು ಮಾರಿಕೊಳ್ಳಲು ಒಪ್ಪದಿದ್ದ, ಶ್ರೀಯುತ ಚಿತ್ತರಂಜನರ ನ್ಯಾಯಪರತ್ವವನ್ನು ಕಂಡು, ತಮ್ಮ ಉದ್ದೇಶವು ನೆರವೇರಲಿಲ್ಲವಾದರೂ ಆ ವರ್ತಕರು, ಅವರ ನಿಸ್ವಾರ್ಥ ಬುದ್ಧಿಗಾಗಿ ಪರಮಾಶ್ಚರ್ಯಪಟ್ಟುಕೊಂಡು ಹೊರಟುಹೋದರು.

ವಕೀಲಿವೃತ್ತಿಯಿಂದ ಅವರು ಅಗಣಿತ ದ್ರವ್ಯವನ್ನು ಗಳಿಸಿದರು. ಆ ಉದ್ಯೋಗವನ್ನು ಬಿಡುವುದಕ್ಕೆ ಕೊನೆಯ ಮೂರು ವರ್ಷಕಾಲ ವಂತೂ ತಿಂಗಳೊಂದಕ್ಕೆ ಅವರ ಉತ್ಪನ್ನವು ಐವತ್ತು ಸಹಸ್ರ ರೂಪಾಯಿಗಳಿದ್ದುವೆಂದು ಗೊತ್ತಾಗಿದೆ. ಹಿಂದೂಸ್ಥಾನದಲ್ಲಿ ಅವರಷ್ಟು ಉತ್ಪನ್ನವಿದ್ದ ನ್ಯಾಯವಾದಿಗಳೇ ಇರಲಿಲ್ಲವೆಂದು ಹೇಳಿಕೆಯುಂಟು. ಅವರು ಕೇವಲ ಧನಾಕಾಂಕ್ಷೆಯಿಂದಲೇ ಸಂಪಾದನೆಯಲ್ಲಿ ತೊಡಗಿದ್ದರೆ ಅವರ ಸಂಪಾದನೆಯು ತಿಂಗಳೊಂದಕ್ಕೆ ಒಂದು ಲಕ್ಷ ರೂಪಾಯಿಗಳನ್ನು ಮೀರುವುದೂ ಆಶ್ಚರ್ಯವಾಗಿರಲಿಲ್ಲ. ಆದರೆ, ಧನವೇ ದೇವರೆಂದು ಸ್ವಾರ್ಥತೆಯಲ್ಲಿ ಮಗ್ನರಾಗಿರದೆ ಅವರು ಇತರ ಅನೇಕ ರಾಜಕೀಯ ವಿಚಾರಗಳಲ್ಲೂ-ದೇಶೀಯ ವಿಚಾರಗಳಲ್ಲೂ ಪ್ರವೇಶಿಸುತ್ತಿದ್ದರು. ಮಾತ್ರವಲ್ಲ! ಬಡಬಗ್ಗರಿಗಾಗಿಯೂ ನಿಸ್ವಾರ್ಥತೆಯಿಂದ ವಾದಿಸುತ್ತಿದ್ದರು. ಹೀಗೆ ಇಪ್ಪತ್ತೈದು ವರ್ಷಕಾಲ ಅದ್ವಿತೀಯರಾಗಿ ನ್ಯಾಯವಾದಿ ಉದ್ಯೋಗವನ್ನು ನಡೆಯಿಸಿ, ಅತಿಶಯ ಲಾಭಕರವೆನಿಸಿದ್ದ ಆ ಕೆಲಸವನ್ನು, ದೇಶಸೇವಾಕಾರ್ಯಕ್ಕೆ ಭುಜ ಕೊಡಬೇಕಾದ ಆವಶ್ಯಕತೆಯು ಬಂದೊಡನೆ, ನಿಷ್ಕಲಂಕ ಹೃದಯದಿಂದ ತ್ಯಾಗಮಾಡಿಬಿಟ್ಟರು. ನಿರ್ಧನನು ತ್ಯಾಗಮಾಡುವನೇನನ್ನು - ಇಂತಹ ಮಹನೀಯರು ಮಾಡುವ ತ್ಯಾಗವೇ ತ್ಯಾಗವಲ್ಲವೆ ? —

---

## — ಚಿತ್ತರಂಜನರ ಸಾಹಿತ್ಯಸೇವೆ —

ಚಿತ್ತರಂಜನದಾಸರ ಪ್ರತಿಭೆಯು ರಾಜಕಾರ್ಯಗಳಲ್ಲಿಯಾಗಲೀ ನ್ಯಾಯವಾದಿ ವೃತ್ತಿಯಲ್ಲಾಗಲೀ ಪ್ರಕಾಶಿತವಾಗುವುದಕ್ಕೆ ಮೊದಲೇ ಬೇರೊಂದು ಬಗೆಯಲ್ಲಿ ಜನಮನವನ್ನು ಆಕರ್ಷಿಸಿದ್ದಿತು. ತಮ್ಮ ಮಾತೃ

ಭಾಷೆಯಲ್ಲಿ ಅವರು ನವನವೀನ ಪದ್ಧತಿಗಳನ್ನು ಕಲ್ಪಿಸಿಕೊಂಡು ಹಲವು ಚಿಕ್ಕ ಕವಿತೆಗಳನ್ನು ಪ್ರಕಟಿಸಿದರು ಮಾಲಂಚ, ಸಾಗರ ಸಂಗೀತ, ಮಾಲಾ, ಕಿಶೋರ ಕಿಶೋರಿ, ಮತ್ತು ಅಂತರ್ಯಾಮಿ, ಎಂಬಿವೇ ಆ ಕವಿತೆಗಳು. ಇವುಗಳಲ್ಲಿ ಅವರು ಪ್ರದರ್ಶಿಸಿರುವ ಕವಿಹೃದಯ, ಸರಳತೆ, ಸೃಷ್ಟಿಸೌಂದರ್ಯ, ಪ್ರೌಢಿಮೆ ಮುಂತಾದುವು ಹೃದಯಂಗಮವಾಗಿ ಸಾಹಿತ್ಯ ಪ್ರೇಮಿಗಳಿಗೆ ಚಿತ್ತಾಕರ್ಷಕವಾಗಿವೆ. ದಾಸರು ಈ ಕವಿತೆಗಳಲ್ಲಿ ಭಗವಂತನ ಪಾದಾರವಿಂದಗಳಲ್ಲಿ ತಮಗಿರುವ ಅವಿರಳ ಭಕ್ತಿಭಾವನೆಯನ್ನೂ, ಸಾಕ್ಷಾತ್ಕಾರಕ್ಕಾಗಿ ತಮ್ಮ ಹೃದಯದಲ್ಲಿ ತೋರಿಬಂದ ಸಹಿಸಲಸದಳವಾದ ವೇದನೆಯನ್ನೂ ಬಹು ಮಾರ್ಮಿಕ ರೀತಿಯಲ್ಲಿ ವ್ಯಕ್ತಗೊಳಿಸುತ್ತಾರೆ. ಅವರ ಹೃದಯ ಸಾಗರದಲ್ಲಿ ಉದ್ಭವಿಸಿ ಒಂದಾದ ಮೇಲೊಂದಾಗಿ ಬರುವ ತರಂಗಗಳೋ ಎಂಬಂತೆ ನವೀನ ಭಾವಗಳನ್ನು ವ್ಯಕ್ತಪಡಿಸುತ್ತಿರುವ ಅವರ 'ಸಾಗರ ಸಂಗೀತ'ವೆಂಬ ಕವಿತೆಯು ಸಾಗರನ ಸಂಗೀತವೇ ಎಂಬ ಅನ್ವರ್ಥ ನಾಮವನ್ನೂ ವಿಶೇಷ ಮೆಚ್ಚುಗೆಯನ್ನೂ ಪಡೆದಿದೆ. ಈ ಕವಿತೆಗಳಲ್ಲಿ ಕೆಲವು ಮಹರ್ಷಿ ಅರವಿಂದ ಘೋಷರಿಂದ ಇಂಗ್ಲಿಷ್ ಭಾಷೆಗೆ ಪರಿವರ್ತಿತವಾಗಿವೆ.—

ವೈಷ್ಣವ ಸಂಸ್ಕೃತಿಯನ್ನು ಹಬ್ಬಿಸಲಿಕ್ಕಾಗಿಯೂ, ಆಧುನಿಕ ಬಂಗಾಳಿ ಸಾಹಿತ್ಯಕ್ಕೆ ಒಂದು ರಸಪುಷ್ಟಿಯನ್ನುಂಟುಮಾಡಲಿಕ್ಕಾಗಿಯೂ ಚಿತ್ತರಂಜನರು 'ನಾರಾಯಣ' ಎಂಬ ಹೆಸರಿನ ಒಂದು ಮಾಸಪತ್ರಿಕೆಯನ್ನು ಹೊರಡಿಸಿದರು. ಆ ಪತ್ರಿಕೆಯಲ್ಲಿ ವಂಗ ಸಾಹಿತ್ಯ ಭಕ್ತರಲ್ಲಿ ಸುಪ್ರಸಿದ್ಧರೆನಿಸಿದ ಅನೇಕರಿಂದ ಲೇಖನಗಳು ಪ್ರಕಟವಾಗುತ್ತಿವೆ. ಅವರಿಂದ ವಂಗ ಸಾಹಿತ್ಯಕ್ಕೆ ನಡೆದ ಅಗಾಧ ಸೇವೆಯನ್ನೂ, ಅವರಲ್ಲಿ ಕಂಡುಬಂದ ಮಾತೃಭಾಷಾಭಿಮಾನವನ್ನೂ ಮನ್ನಿಸಲಿಕ್ಕಾಗಿ, ವಂಗಸಾಹಿತ್ಯಸಮ್ಮೇಳನದವರು ೧೯೧೪ ರಲ್ಲಿ ಬಾಂಕೀಪೂರಿನಲ್ಲಿ ಸಭೆ ಸೇರಿದ್ದಾಗ ಇವರನ್ನೇ ಅಧ್ಯಕ್ಷರನ್ನಾಗಿ ಚುನಾಯಿಸಿಕೊಂಡು ಗೌರವಿಸಿದರು. ಇವರು ತಮ್ಮ 'ನಾರಾಯಣ' ಮಾಸಪತ್ರದಲ್ಲಿ ಅನೇಕವೇಳೆ, ಮುಖ್ಯವಾಗಿ ವಂಗ ಕವಿತೆಯ ಮೇಲೂ, ಅದಕ್ಕೂ ಬಂಗಾಳದ ವೈಷ್ಣವ ಪಂಥದ ಸಾಹಿತ್ಯಕ್ಕೂ ಇರುವ ಸಂಬಂಧವನ್ನು ವಿಮರ್ಶಿಸಿಯೂ ಅನೇಕ ಲೇಖನಗಳನ್ನು ಬರೆದಿರುವರು. ಚಿತ್ತರಂಜನರ ಚಿತ್ತವೃತ್ತಿಯು ಹೆಚ್ಚಾಗಿ ಈ ವೈಷ್ಣವ ಪಂಥದವರ ವಂಗ ಸಾಹಿತ್ಯ ಪಠನೆ

ಯನ್ನು ಅವಲಂಬಿಸಿದ್ದಿತು. ಭಾಷಾ ಪ್ರೇಮ ಮಾತ್ರವಲ್ಲ, ಅವರ ದೇಶ ಪ್ರೇಮವೂ ಅವರ ಸಕಲ ವಿಧ ಕಾರ್ಯಕಲಾಪಗಳೂ ಈ ಭಾವನೆಯನ್ನೇ ಅನುಸರಿಸಿದ್ದುವು. ಚಿತ್ತರಂಜನರ ಮಾನಸಿಕ ಪರಿವರ್ತನೆ ಎಂಥದೆಂದು ತಿಳಿಯಲಪೇಕ್ಷಿಸುವವರು ಅವರ ಕವಿತೆಗಳನ್ನು ನೋಡಬೇಕು! ಅವರ ಕವಿತೆಗಳನ್ನು ನೋಡಲಪೇಕ್ಷಿಸುವವರು ಬಂಗಾಳದ ವೈಷ್ಣವ ಸಂಸ್ಕೃತಿಯ ಪರಿಚಯ ಹೊಂದಬೇಕು!

---

## — ಚಿತ್ತರಂಜನರ ಗೃಹಜೀವನ —

ಯಾವುದೊಂದು ಮನೆಯ ಸುಸ್ಥಿತಿಯಾಗಲೀ ದುಸ್ಥಿತಿಯಾಗಲೀ ಆ ಮನೆಯ ಯಜಮಾನಿಯ ಅರ್ಥಾತ್ ಗೃಹಿಣಿಯ ಸುಗುಣ ಅಥವ ದುರ್ಗುಣಗಳನ್ನು ಅವಲಂಬಿಸಿರುವುದು. ಮನೆಯ ಮಕ್ಕಳುಮರಿಗಳ ಪೋಷಣೆ, ಅವರ ಗುಣನಡತೆಗಳ ಬೆಳೆವಣಿಗೆ, ಪತಿಯ ಸಂಪಾದನೆಯ ವಿತರಣೆ, ಪದಾರ್ಥಗಳ ರಕ್ಷಣೆ ಮುಂತಾದುವುಗಳೆಲ್ಲವೂ ಆಕೆಯ ಗುಣ ನಡತೆಗಳನ್ನೇ ಅನುಸರಿಸುವುವು. ಆಕೆಯು ಮತಿವಂತೆಯೂ ಗಾಂಭೀರ್ಯ ಶಾಲಿನಿಯೂ, ಶಾಂತ ಪ್ರಕೃತಿಯವಳೂ ಮಿತವ್ಯಯಿಯೂ ಪತಿಪರಾಯ ಣಳೂ ಆಗಿದ್ದರೆ, ಆ ಸಂಸಾರವು ಸುಖವಾಗಿ ಸಾಗಿ ಅದರ ಯಾವುದೊಂದು ವಿಚಾರವೂ ಬೀದಿಗೆ ಬರದಂತೆ ಇರುವುದು. ಹಾಗಲ್ಲದಿದ್ದಲ್ಲಿ, ಆ ಸಂಸಾರಕ್ಕೆ ಮಾನವು ದಕ್ಕಲಾರದು!

ಅವರ ಮಾತೃಶ್ರೀಯಾದ ನಿಸ್ತಾರಿಣೀದೇವಿಯ ಅಮೌಲ್ಯಗುಣಗಳನ್ನು ಈವೊದಲೇ ಹೇಳಿದ್ದೇವಲ್ಲವೆ! ಚಿತ್ತರಂಜನರ ಗುಣವಾದರೂ ಸಕಲವಿಷಯ ಗಳಲ್ಲೂ ಅವರ ತಾಯನ್ನೇ ಹೋಲುತ್ತಿದ್ದಿತು. ಆಕೆಗೆ ತನ್ನ ಹಿರಿಯಮಗ ನಾದ ನಮ್ಮ ಕಥಾನಾಯಕರಲ್ಲಿ ಅಮಿತ ಪ್ರೇಮವಿದ್ದಿತು. ಆಕೆಯ ಮರ ಣ ಸಮಯದಲ್ಲಿ, ದುರ್ದೈವದಿಂದ ಅವರನ್ನು ಕಾಣಲು ಅವಕಾಶವಾಗಲಿಲ್ಲ. ಅಂದೇ ಅವರು ಮುಂಬಯಿಯಿಂದ ರೈಲಿನಲ್ಲಿ ಹೊರಟಿದ್ದರು. ಅವರ ಮರಣವೇಳೆಗೆ ಸಮನಾಗಿ, ಅವರಿಗೊಂದು ಸ್ವಪ್ನವಾಗಿ ಅದರಲ್ಲಿ ಅವರ ಪ್ರಿಯ ಮಾತೃವಿನ ದರ್ಶನವಾಯಿತಂತೆ! ಆ ಸಾಧ್ವಿಯು ಮರಣಕಾಲದಲ್ಲಿ

ತನ್ನ ಪ್ರೇಮಪುತ್ರನಿಂದ ವಿರಚಿತವಾಗಿದ್ದ 'ಸಾಗರಸಂಗೀತ' ಗ್ರಂಥವನ್ನು ಎದೆಯ ಮೇಲಿಟ್ಟುಕೊಂಡು, ಪತಿಯನ್ನು ಕರಿತು, ನನಗೆ ಪುನಃ ಸ್ತ್ರೀಯಾಗಿ ಜನಿಸುವ ಲಕ್ಷ್ಯವಿದ್ದರೆ, ನನ್ನ ಚಿತ್ತರಂಜನನಂತಹ ಮಗನನ್ನೇ ಹೆರಲು ಅಪೇಕ್ಷಿಸುತ್ತೇನೆ' ಎಂದು ನುಡಿದು ಪ್ರಾಣಬಿಟ್ಟಳಂತೆ! ಈ ಮಾತೃಪ್ರೇಮಕ್ಕೆ ಬೆಲೆಯುಂಟೆ ?

ತಾಯಿಯು ಮೃತಳಾದ ಆರುತಿಂಗಳಿಗೆ ಅವರ ತಂದೆಯಾದ ಭುವನಮೋಹನ ದಾಸನೂ ಮೃತನಾದನು. ಚಿತ್ತರಂಜನರು ತಮ್ಮ ಮಾತಾಪಿತೃಗಳ ಊರ್ಧ್ವ ದೈಹಿಕ ಕ್ರಿಯೆಗಳನ್ನು ಬಹು ವಿಜೃಂಭಣೆಯಿಂದ ನೆರವೇರಿಸಿದರು ಅನೇಕವಿಧ ಭಕ್ಷ್ಯ ಭೋಜ್ಯಗಳಿಂದ ಬ್ರಾಹ್ಮಣ-ಭಕ್ತವರ್ಗವನ್ನು ತೃಪ್ತಿಗೊಳಿಸಿದ್ದು ಮಾತ್ರವಲ್ಲ-ಪಾಪ ಅಂತಹ ಮೃಷ್ಟಾನ್ನವನ್ನು ಎಂದೂ ಕಂಡರಿಯದ ಬೀದಿಯಲ್ಲಿನ ಬಡವರು, ಪಾಪಿ ಪರದೇಶಿಗಳಿಗೂ ತಾವು ಸ್ವತಃ ಎದುರಿಗೆ ನಿಂತು, ಸಕಲರೂ ಸಂತುಷ್ಟರಾಗುವಂತೆ ಬಡಿಸಿಸಿ ತೃಪ್ತಿಪಡಿಸಿದರು. ತಮ್ಮ ತಂದೆಗೆ ಯಾವಯಾವ ವಸ್ತುಗಳಮೇಲೆ ಪ್ರೀತಿಯಿತ್ತೋ ಆಯಾ ವಸ್ತುಗಳನ್ನೇ ಅನೇಕವಾಗಿ ತರಿಸಿ ಬಡಜನಗಳಲ್ಲಿ ಹಂಚಿಕೊಟ್ಟರು. ಸಕಲರಿಂದಲೂ ಪಶುಗಳಿಗಿಂತಲೂ ಕಡೆಯೆಂದು ನಿರಾಕರಿಸಲ್ಪಟ್ಟಿದ್ದ ಕ್ಷುದ್ರ ದರಿದ್ರರನ್ನು ಹಾಗೆ ಉಪಚರಿಸಿದ್ದು ಅವರ ಹೃದಯ ಮಾರ್ದವವನ್ನು ವ್ಯಕ್ತಗೊಳಿಸುವುದಲ್ಲವೇ!

ಅವರಿಗೆ ಇಬ್ಬರು ತಮ್ಮಂದಿರೂ ಇಬ್ಬರು ತಂಗಿಯರೂ ಇದ್ದರು. ತಂದೆಯು ಸತ್ತ ತರುವಾಯ ಆಗ್ಗೆ ಇನ್ನೂ ಕೇವಲ ಚಿಕ್ಕ ವಯಸ್ಸಿನವರಾಗಿದ್ದ ಅವರೆಲ್ಲರ ಪೋಷಣೆಯೂ ಇವರ ಮೇಲೆಯೇ ಬಿದ್ದಿತು. ಮುಂದೆ ತಮ್ಮಂದಿರಿಬ್ಬರೂ ವಿದ್ಯಾವಂತರಾಗಿ ಅವರಲ್ಲಿ ವಸಂತ ರಂಜನರೆಂಬುವರು ಕಲ್ಕತ್ತಾ ಹೈಕೋರ್ಟಿನಲ್ಲೇ ಬ್ಯಾರಿಸ್ಟರಾಗಿ ಕೆಲಸಮಾಡುತ್ತಿದ್ದು ಕೆಲವುದಿನಗಳಲ್ಲೇ ಮೃತ್ಯುವಶರಾದರು. ಪ್ರಫುಲ್ಲರಂಜನರೆಂಬ ಇನ್ನೊಬ್ಬ ತಮ್ಮಂದಿರು ಪಾಟ್ನಾ ಹೈಕೋರ್ಟಿನಲ್ಲಿ ಈಗ ನ್ಯಾಯಾಧಿಪತಿಯಾಗಿದ್ದಾರೆ. ಶ್ರೀಮತಿ ಅಮಲಾದೇವಿ, ಮತ್ತು ಶ್ರೀಮತಿ ಊರ್ಮಿಳಾದೇವಿ ಎಂಬ ತಂಗಿಯರಿಬ್ಬರೂ ವಿದ್ಯಾವತಿಯರಾಗಿಯೂ _ದೇಶಾಭಿಮಾನವುಳ್ಳವರಾಗಿಯೂ ಇದ್ದಾರೆ. ಅಮಲಾದೇವಿಯು ಸಂಗೀತವಿದ್ಯೆಯಲ್ಲಿ ಪಾರಂಗತಳಾಗಿದ್ದಾಳೆ. ಅಲ್ಲದೆ ಆ ಸಾಧ್ವಿಯು ಕುರುಡ ಕುಂಟರೇ ಮುಂತಾದ ಅಂಗಹೀನರಿಗಾಗಿ ಒಂದು ಆಶ್ರ

ಮವನ್ನು ಸ್ಥಾಪಿಸಿ ಅನೇಕರಿಗೆ ಪ್ರಾಣಾಧಾರಕಳಾಗಿದ್ದಾಳೆ. ಊರ್ಮಿಳಾದೇವಿಯು ದುರ್ದೈವದಿಂದ ಕೆಲವು ದಿನಗಳಿಗೆಮುಂಚೆ ವಿಧವೆಯಾದರೂ, ತನ್ನ ಶೇಷಜೀವಿತವನ್ನು ಬಂಗಾಳೀ ಕನ್ನಿಕೆಯರ ವಿದ್ಯಾಭ್ಯಾಸಕ್ಕಾಗಿ ವಿನಿಯೋಗಿಸಲು ಸಂಕಲ್ಪಿಸಿ, ಒಂದು ರಾಷ್ಟ್ರೀಯ ಶಾಲೆಯನ್ನು ಸ್ಥಾಪಿಸಿ ನಡಿಸುತ್ತಿದ್ದಾಳೆ

ಚಿತ್ತರಂಜನರು ೧೮೯೭ ನೆಯ ಸಂವತ್ಸರದಲ್ಲಿ ಸೌಂದರ್ಯ ಸೌಕುಮಾರ್ಯ ಸದ್ಗುಣಾದಿಗಳಿಂದ ಅನುರೂಪಳಾದ ವಾಸಂತಿದೇವಿ ಎಂಬ ಕನ್ಯಾಶಿರೋಮಣಿಯನ್ನು ವರಿಸಿ ಲಗ್ನವಾದರು. ಆಕೆಯು ಸಕಲ ಭಾಗಗಳಲ್ಲೂ ನಮ್ಮ ಕಥಾನಾಯಕರಿಗೆ ಯೋಗ್ಯ ಭಾರ್ಯೆಯಾಗಿ, ಅವರ ಕಷ್ಟ ಸುಖಗಳೆರಡರಲ್ಲೂ ನೆಳಲಿನಂತೆ ಅವರನ್ನು ಅನುವರ್ತಿಸಿಕೊಂಡು ಮನೆಯನ್ನು ಪತಿಪುತ್ರರಿಗೂ ಬಂಧು ಬಾಂಧವರಿಗೂ ಸ್ವರ್ಗವಾಸವೋ ಎನ್ನುವಂತೆ ಇಟ್ಟುಕೊಂಡು ಬೆಳಗುತ್ತಿದ್ದಾಳೆ. ಆಕೆಯು ವಿದ್ಯೆಯಲ್ಲಿ ಪದವೀಧರಳಾಗಿಲ್ಲವಾದರೂ, ಸಂಪೂರ್ಣ ವಿದ್ಯಾವತಿಯೂ, ಸುಗುಣಾಭರಣಳೂ, ಬಂಗಾಳದ ಸ್ತ್ರೀಜನಕ್ಕೆ ಆದರ್ಶಗೃಹಿಣಿಯೂ ಆಗಿದ್ದಾಳೆ.

ಚಿತ್ತರಂಜನರಿಗೆ ಸಾಧ್ವೀಮಣಿ ವಾಸಂತೀದೇವಿಯಲ್ಲಿ ಚಿರರಂಜನದಾಸನೆಂಬ ಒಬ್ಬನೇ ಪುತ್ರನೂ ಇಬ್ಬರು ಪುತ್ರಿಯರೂ ಜನಿಸಿದರು. ಉದಾರಮತವಾದಿಗಳಾದ ಅವರು ಜಾತಿಭೇದಗಳನ್ನು ಅಷ್ಟುಮಟ್ಟಿಗೆ ಗಣಿಸತಕ್ಕವರಾಗಿರಲಿಲ್ಲ. ದೇಶದ ವಿವಿಧ ಪಂಗಡ ಪ್ರಭೇದಗಳಲ್ಲಿ ಐಕಮತ್ಯವು ಹಬ್ಬಿ ಹರಡಲು ಪರಸ್ಪರರಲ್ಲಿ ಸಂಬಂಧ ಬಾಂಧವ್ಯಗಳು ನಡೆಯತಕ್ಕುದು ಆವಶ್ಯಕವೆಂಬುದು ಅವರ ಮತವಾಗಿತ್ತು. ಮತ್ತು ಅಂತೆಯೇ ದಾಸರು ತಮ್ಮ ಹೆಣ್ಣುಮಕ್ಕಳನ್ನು ಕಾಯಸ್ಥ ಕುಲದ ವರಗಳಿಗೆ ಕೊಟ್ಟೂ, ತಮ್ಮ ಮಗನಿಗೆ ವೈದ್ಯಕುಲದ ಕನ್ಯೆಯನ್ನು ತಂದೂ ಲಗ್ನಮಾಡಿದರು.

ಚಿತ್ತರಂಜನರು ಹಿಂದೆ ಒಂದೆಡೆಯಲ್ಲಿ ಹೇಳಿದಂತೆ ಅಮಿತ ಧನವನ್ನು ಗಳಿಸಿದರೂ, ತಮ್ಮ ಸಂಪಾದನೆಯಲ್ಲಿ ಮನೆಗೆ ಆಸ್ತಿಯಾಗಿರಲೆಂದು ಏನನ್ನೂ ಮಿಗಿಸಿಡದೆ ಗಳಿಸಿದುದೆಲ್ಲವನ್ನೂ ದಾನಧರ್ಮ ಪರೋಪಕಾರಗಳಿಗಾಗಿ ಮುಕ್ತ ಹಸ್ತದಿಂದ ದಾನಮಾಡಿಬಿಟ್ಟರು. ಸಾಲದುದಕ್ಕೆ ಜೀವಿತದ ಕೊನೆಯ ಭಾಗದಲ್ಲಿ ಮಾತೃದೇಶದ ಬಡಬಾಂಧವರ ಸಹಾಯಕ್ಕೆಂದು

ಭಿಕ್ಷಾಪಾತ್ರೆಯನ್ನು ಹಿಡಿಯಲಿಕ್ಕಾದರೂ ಹಿಂದೆಗೆಯಲಿಲ್ಲ. ಸಹಸ್ರಾರು ಮಂದಿ ಬಡವಿದ್ಯಾರ್ಥಿಗಳಿಗಾಗಿ ಅವರು ಮಾಡಿದ ವಿವಿಧ ಸಹಾಯಗಳಿಗಂತೂ ಮಿತಿಯಿಲ್ಲವೆಂದು ಹೇಳುತ್ತಾರೆ. ಇದೆಲ್ಲಕ್ಕಿಂತಲೂ ಅವರು ವಂಗಸಾಹಿತ್ಯಾಭಿವೃದ್ಧಿಗೆ ಮಾಡಿದ ಸಹಾಯವೇ ಚಿರಸ್ಮರಣೀಯವಾದುದು. ಅನೇಕ ಮಂದಿ ಗ್ರಂಥಕರ್ತರು ಬರೆದ ಗ್ರಂಥಗಳ ಪ್ರಕಟಣೆಗಾಗಿಯೂ, ಪುರಾತನ ಗ್ರಂಥಗಳ ಹಸ್ತಪ್ರತಿಗಳ ರಕ್ಷಣೆಗಾಗಿಯೂ, ವಂಗಸಾಹಿತ್ಯ ಪರಿಷತ್ತಿಗಾಗಿಯೂ, ವಿಶೇಷ ಧನ ಸಾಹಾಯ್ಯ ಮಾಡುತ್ತಿದ್ದರು. ನಮ್ಮ ಕರ್ನಾಟಕರಲ್ಲಿ ದನವಂತರಿಲ್ಲವೆ? ವಿದ್ಯೆಯ ಗೌರವ ಪ್ರಯೋಜನಗಳನ್ನು ತಿಳಿದ ಮಹನೀಯರಿಲ್ಲವೆ? ಅಂತಹ ಲಕ್ಷ್ಮೀಪುತ್ರರು ತಮ್ಮ ವಿನೋದ ವಿಜೃಂಭಣೆಗಳಿಗಾಗಿ ವ್ಯಯಗೊಳಿಸುವ ಮೊತ್ತದಲ್ಲೊಂದು ಶತಾಂಶವನ್ನು ಕರ್ನಾಟಕ ಸಾಹಿತ್ಯ ಸೇವೆಗೆಂದು ಉಪಯೋಗಿಸಲು ಸಿದ್ಧರಾದರೆ - (ಆದರೆ,) ಆಹಾ ನಮ್ಮ ಮಾತೃ ಭಾಷೆಯೂ, ಹಿಂದೀ ಬಂಗಾಳೀ ಮುಂತಾದ ಭಾಷೆಗಳನ್ನು ಸರಿಗಟ್ಟಲು ಅಭ್ಯಂತರವಿರುವುದೆ?

---

## — ಚಿತ್ತರಂಜನರ ದೇಶಭಕ್ತಿ —

ನಮ್ಮ ಕಥಾನಾಯಕರಿಗೆ ಮಾತೃದೇಶ ವಿಷಯದಲ್ಲಿದ್ದ ಭಕ್ತಿಯ ಪರಿಮಿತಿಯನ್ನು ಮಾತುಗಳ ಅಳತೆಯಿಂದ ತಿಳಿಸುವುದು ಸಾಧ್ಯವಿಲ್ಲ. ಅವರೇ ತಮ್ಮ ಒಂದಾನೊಂದು ಉಪನ್ಯಾಸದಲ್ಲಿ—"ನನಗೆ ದೇಶಭಕ್ತಿಗೂ ಈಶಭಕ್ತಿಗೂ ವ್ಯತ್ಯಾಸ ತೋರುವುದಿಲ್ಲ. ಚತುರ್ಥ ಪುರುಷಾರ್ಥವಾದ ಮೋಕ್ಷ ಸಾಧನೆಗಾಗಿ ಈಶನನ್ನು ಭಜಿಸಿ ಭಕ್ತಿ ಮಾಡಬೇಕಾದುದು ಆವಶ್ಯಕವಿರುವುದಾದರೆ, ಪ್ರಥಮ ದ್ವಿತೀಯ ತೃತೀಯ ಪುರುಷಾರ್ಥಗಳಾದ ಧರ್ಮ ಅರ್ಥ ಕಾಮಗಳ ಸಾಧನೆಗಾಗಿ ದೇಶಭಕ್ತಿಯೂ ಆವಶ್ಯಕವೆಂದು ತಿಳಿಯುತ್ತೇನೆ" ಎಂದು ನುಡಿದಿರುವರು. ಅವರ ದೇಶಭಕ್ತಿಯು ಕೇವಲ ಸಭಾಂಗಣದಲ್ಲಿ ನಿಂತು ಉಪನ್ಯಾಸ ಕೊಡುವುದರಿಂದಲೇ ಎಂದೂ ಪರಿಣಾಮವಾದುದಿಲ್ಲ. ತಾವು ದೇಶಾಭಿವೃದ್ಧಿ ವಿಚಾರದಲ್ಲಿ ಯಾವ ಯಾವ ಕಾರ್ಯಗಳನ್ನು ಮಾಡಬೇಕೆಂದು ಹೇಳುತ್ತಿದ್ದರೋ, ಆ ಕಾರ್ಯಗಳನ್ನೆಲ್ಲ ತಾವೇ ಸ್ವತಃ ಪ್ರಾರಂ

ಭಿಸಿ ಆದ್ಯಂತವಾಗಿ ಕೈಮುಟ್ಟಿ ಮಾಡುತ್ತಿದ್ದರು. ಆಯಾ ಕಾರ್ಯಗಳ ಅಭಿವೃದ್ಧಿಗಾಗಿಯೂ ಸ್ಥಿರಜೀವಿತಕ್ಕಾಗಿಯೂ ಸಹಸ್ರಸಹಸ್ರವಾಗಿ ದ್ರವ್ಯ ಸಹಾಯವನ್ನೂ ಮಾಡುತ್ತಿದ್ದರು. ನಮ್ಮ ದೇಶದ ಜೀವಾಳವು ಗ್ರಾಮಾಂತರಗಳನ್ನು ಆಶ್ರಯಿಸಿದೆಯೆಂಬ ವಿಷಯದಲ್ಲಿ ಅವರಿಗೆ ಲೇಶವೂ ಸಂಶಯವಿರಲಿಲ್ಲ. ದೇಶಾಭಿವೃದ್ಧಿಗಾಗಿ ಯಾವ ಕಾರ್ಯವನ್ನಾದರೂ ಗ್ರಾಮಗಳಲ್ಲಿ ಪ್ರಾರಂಭಿಸತಕ್ಕದ್ದೇ ಸಮಂಜಸವೆಂದು ಅವರು ನಂಬಿದ್ದರು. ತಮ್ಮ ಹಿರಿಯರ ವಾಸಸ್ಥಾನವಾದ ವಿಕ್ರಮಪುರ ಪ್ರಾಂತವನ್ನು ತಮ್ಮ ಅಭಿಪ್ರಾಯಾನುಸಾರವಾಗಿ ಸುಧಾರಿಸಬೇಕೆಂದು ವಿಶೇಷ ದ್ರವ್ಯವ್ಯಯಮಾಡಿ ಅಲ್ಲಿಯ ಗ್ರಾಮಗಳಲ್ಲಿ ನೀರಿನ ವಸತಿ, ಆರೋಗ್ಯಕರವಾದ ರಸ್ತೆಗಳು, ಗಾಳಿ ಬೆಳಕುಗಳು ಬರುವಂತೆ ಮನೆಗಳು, ವ್ಯವಸಾಯದ ಉಪಕರಣಗಳು, ಉತ್ತಮವಾದ ಬಿತ್ತಗಳು, ವ್ಯವಸಾಯ ವಿಷಯದಲ್ಲಿ ಯೋಗ್ಯ ತಿಳಿವಳಿಕೆ ಮುಂತಾದುವುಗಳನ್ನೆಲ್ಲ ಒದಗಿಸಿದರು. ಬಡಜನರ ಕಷ್ಟಸಂಕಟಗಳೆಂದರೆ ಯಾವಾಗಲೂ ಎದೆಕರಗಿ ಮರುಗುತ್ತಿದ್ದ ಅವರು, ೧೯೧೯ ರಲ್ಲಿ ಪೂರ್ವ ಬಂಗಾಳಾದಲ್ಲಿ ಕ್ಷಾಮ ಬಂದಾಗಲೂ, ಮತ್ತು ಪದ್ಮಾ ನದಿಯ ಪ್ರವಾಹದಿಂದ ಹಾವಳಿಯುಂಟಾದಾಗಲೂ ಸ್ವತಃ ಹತ್ತಿಪ್ಪತ್ತು ಸಹಸ್ರ ದ್ರವ್ಯವನ್ನು ಕೊಟ್ಟುದಲ್ಲದೆ, ಮಹಾಜನಗಳಿಂದಲೂ ವಿಶೇಷ ದ್ರವ್ಯವನ್ನು ಚಂದಾ ಎತ್ತಿ, ರಾತ್ರಿ ಹಗಲುಗಳೆನ್ನದೆ ನಿದ್ರೆ ಆಹಾರಗಳನ್ನೂ, ಪ್ರಾಣಾಪಾಯಗಳನ್ನೂ ಲಕ್ಷಿಸದೆ ಪ್ರತಿಗ್ರಾಮಕ್ಕೂ ನಡೆದು, ಜನಗಳ ಕಷ್ಟನಷ್ಟಗಳನ್ನು ಕಣ್ಣಾರೆ ಕಂಡು ಸಾಧ್ಯವಿದ್ದ ಸಹಾಯಗಳನ್ನೆಲ್ಲ ಮಾಡಿದರು. ಪ್ರಜೆಗಳ ಕಷ್ಟವು ಒಂದು ಹೊತ್ತಿನ ತಿಂಡಿ ಹಾಕಿದರೆ ಮಾತ್ರವೇ ನಿವಾರಣೆಯಾಗುತ್ತದೆಂದು ಅವರು ಭಾವಿಸಿರಲಿಲ್ಲ. ಅವರಿಗೆ ಕೈಗೆ ಕೆಲಸವನ್ನೂ ಬಂಡವಾಳವನ್ನೂ ಕೊಟ್ಟು ಸ್ವತಃ ಸಂಪಾದಿಸಿಕೊಳ್ಳಲು ಶಕ್ತಿಯನ್ನುಂಟುಮಾಡಬೇಕೆಂಬುದು ಅವರ ನಿಶ್ಚಯವಾಗಿತ್ತು.—

ಒಂದಾನೊಂದು ಉಪನ್ಯಾಸದಲ್ಲಿ ಅವರು—"ಮಹನೀಯರೇ ಇಂಗ್ಲೀಷ್ ವಿದ್ಯಾಭ್ಯಾಸ ಮಾಡಿದವರೆಂಬ ಗರ್ವದಿಂದ ಮೆರೆಯುವ ನಾವು ಎಷ್ಟು ಮುಂದಿರುದ್ದೇವೆ! ಮೂವತ್ತೂರು ಕೋಟಿ ಪ್ರಜಾ ಸಂಖ್ಯೆಯುಳ್ಳ ಈ ದೇಶದಲ್ಲಿ ನಮ್ಮ ಸ್ಥಾನವೆಷ್ಟಿದೆ! ಕಷ್ಟಸುಖಗಳೆನ್ನದೆ, ಮಳೆ ಬಿಸಿಲು

ಗಳೆನ್ನದೆ ದುಡಿದು ನಮಗೆ ಅನ್ನಾಹಾರಗಳನ್ನು ಒದಗಿಸುವ ಈ ದರಿದ್ರನಾರಾಯಣರ ವಿಷಯದಲ್ಲಿ ನಾವೇನು ಪರಿಶ್ರಮ ಮಾಡುತ್ತಿದ್ದೇವೆ! ಸಾಲದುದಕ್ಕೆ ಅವರನ್ನು ಹೀನಭಾವದಿಂದ ನಾವು ನೋಡುತ್ತಿದ್ದೇವಲ್ಲವೆ! ನಮ್ಮಲ್ಲನೇಕರಿಗೆ ಆ ದರಿದ್ರರು ಮನುಷ್ಯರೆಂಬ ವಿಚಾರಸಹ ಗಮನಕ್ಕೆ ಬರುವಂತಿದೆಯೇ? ಇದು ಸರಿಯೇ ಎಂದು ಯೋಚಿಸಿರಿ: ನಮ್ಮ ದೇಶೀಯ ಈ ದರಿದ್ರನಾರಾಯಣರ ಸೇವೆಗೆ ತೊಡಗುವಲ್ಲಿ, ಅವರು ಹಿಂದೂಗಳೇ ಮಹಮ್ಮದೀಯರೇ ಕ್ರೈಸ್ತರೇ ಎಂದು ವಿಚಾರಿಸಬೇಡಿ. ಅವರೂ ಭಾರತಮಾತೆಯು ಹೆತ್ತ ಬಡ ಮಕ್ಕಳು ಎಂಬ ಭಾವನೆಯು ನಿಮ್ಮೆದುರಿಗಿರಲಿ! ಅವರ ಮುಖ್ಯವಾಸಸ್ಥಾನವಾಗಿರುವ ಭರತಖಂಡದ ಮೂಲಸ್ಥಾನಗಳಾದ ಗ್ರಾಮಗಳಲ್ಲಿ ವಿದ್ಯೆ ಆರೋಗ್ಯ ನಾಗರಿಕತೆ ವಾಣಿಜ್ಯಾದಿಗಳೂ ತನ್ಮೂಲಕ ಸೌಭಾಗ್ಯವೂ ಪ್ರವೇಶಿಸುವಂತೆ ಪ್ರಯತ್ನಿಸಬೇಕಾದುದು, ಆ ಬಡಜನಗಳ ಕಷ್ಟಗಳ ಫಲವಾಗಿ ತಿಳಿವನ್ನು ಹೊಂದಿರುವ ನಮ್ಮ ಆದ್ಯಕರ್ತವ್ಯವಾಗಿದೆ" ಎಂದು ನುಡಿದಿರುವರು.

'ಸ್ವರಾಜ್ಯ-ಸ್ವರಾಜ್ಯ'ವೆಂದು ಕೂಗುವ ಕೆಲವಂದಿ ರಾಷ್ಟ್ರಭಕ್ತರಂತಲ್ಲದೆ, ಶ್ರೀ ದಾಸರು, ಸ್ವರಾಜ್ಯದ ಭವ್ಯಮಂದಿರವನ್ನು ಕಟ್ಟುವುದಕ್ಕೆ ತಳಹದಿಯಂತಿರುವ ಗ್ರಾಮಗಳನ್ನು ಅವು ಈಗ ಇರುವ ದುರವಸ್ಥೆಯಿಂದ ಹೇಗೆ ಊರ್ಜಿತಗೊಳಿಸಿ ಸುಧಾರಿಸಬಹುದೆಂದು ಒಂದು ಮಸೂದೆಯನ್ನು ತಯಾರಿಸಿದ್ದರು. ಅದರಲ್ಲಿ ಗ್ರಾಮದ ವ್ಯಾಜ್ಯ ವ್ಯವಹಾರಗಳ ವಿಚಾರಕ್ಕಾಗಿ ಪಂಚಾಯಿತಿ, ವಿದ್ಯಾಭ್ಯಾಸ, ಆರೋಗ್ಯರಕ್ಷಣೆ ಮುಂತಾದುವುಗಳ ಅಭಿವೃದ್ಧಿಗಾಗಿ ಸಂಸ್ಥೆಗಳು, ಕೈ ಕೆಲಸದ ಅಭಿವೃದ್ಧಿಗಾಗಿ ಬೇಕಾದ ಏರ್ಪಾಡು ಇವುಗಳನ್ನು ರಚಿಸುವ ವಿಧಾನವನ್ನು ವಿವರಿಸಿರುವುದಲ್ಲದೆ, ಗ್ರಾಮದಿಂದ ತಾಲ್ಲೂಕು, ಅಲ್ಲಿಂದ ಡಿಸ್ಟ್ರಿಕ್ಟ್ ಅಥವಾ ಜಿಲ್ಲಾ, ಅಲ್ಲಿಂದ ದೇಶ ಮುಂತಾದುವುಗಳವರೆಗೆ ಇರಬೇಕಾದ ರಾಜಕೀಯ ಸೂತ್ರಗಳ ರಚನೆಯನ್ನೂ ಸೂಚಿಸಿದ್ದಾರೆ. ಅದ್ವಿತೀಯ ದೇಶಭಕ್ತರೂ ಪ್ರಾಜ್ಞರೂ ಆದ ಅವರ ಆ ಸೂಚನೆಗಳಂತೆ ನಮ್ಮ ಗ್ರಾಮಗಳ ಸುಧಾರಣೆಯು ನಡೆಯುವುದಾದರೆ, ಪೂರ್ವದ ಧಾರ್ಮಿಕ ಯುಗವು ಪುನಃ ಭಾರತದೇಶದಲ್ಲಿ ಅವತರಿಸಿದಂತಾಗುವುದು !



## — ಚಿತ್ತರಂಜನದಾಸರ ರಾಜಕೀಯ ನೀತಿ —

ಭರತಖಂಡದಂತೆ ಪರಕೀಯ ಜನಾಂಗದ ಹಿಡಿತಕ್ಕೆ ಒಳಪಟ್ಟು ಸ್ವಾತಂತ್ರ್ಯವಿಲ್ಲದೆ ಹೆಣಗಾಡುತ್ತಿರುವ ದೇಶಗಳಲ್ಲಿನ ಜನರು, ಸಾಮ್ರಾಜ್ಯ ಸರಕಾರದ ರಾಜಕಾರಣದಲ್ಲಿ ಪ್ರವೇಶಿಸುವುದಾದರೆ ಅವರಲ್ಲಿ ನಿರ್ಭೀತಿ ಎಂಬೊಂದು ಗುಣವು ಅಕ್ಷಯವಾಗಿರಬೇಕು.— ಮಾತ್ರವಲ್ಲ, ರಾಜ್ಯಪಾಲನೆಗಾಗಿ ಪ್ರಭುತ್ವದವರು ಏರ್ಪಡಿಸಿರುವ ನ್ಯಾಯನಿಬಂಧನೆಗಳ ವಿಷಯದಲ್ಲಿ ಅನ್ಯೂನ ಪ್ರಜ್ಞೆಯೂ, ಅದನ್ನು ವ್ಯವಹಾರದಲ್ಲಿ ಉಪಯೋಗಿಸುವಲ್ಲಿ ಅಖಂಡ ಪರಿಶ್ರಮವೂ ಇರಬೇಕು. ಅವರು ಕಷ್ಟನಷ್ಟಗಳನ್ನು ಎಷ್ಟು ಪ್ರಮಾಣದಿಂದ ಅನುಭವಿಸಲಿಕ್ಕಾದರೂ ಸಿದ್ಧರಿರಬೇಕು. ಶೀತೋಷ್ಣ ಸುಖದುಃಖಗಳಲ್ಲಿ ಸಮಭಾವವುಳ್ಳವರಾಗಿರಬೇಕು. ಸಮಯಬಂದರೆ ತಮ್ಮ ತತ್ವಸ್ಥಾಪನೆಗಾಗಿ ಪ್ರಾಣಬಿಡಲಿಕ್ಕೂ ಸಿದ್ಧರಾಗಿರಬೇಕು. ಈ ಎಲ್ಲಾ ಗುಣಗಳೂ ನಮ್ಮ ಕಥಾನಾಯಕರಲ್ಲಿ ಅಗಣಿತಪ್ರಮಾಣದಿಂದ ನೆಲೆಸಿದ್ದುವು. ತಮ್ಮ ಮನಸ್ಸಿಗೂ ನ್ಯಾಯಕ್ಕೂ ಸತ್ಯವೆಂದು ತೋರಿದುದನ್ನು ನುಡಿದುಬಿಡಲು ಅವರು ಎಂದೂ ಹೆದರುತ್ತಿರಲಿಲ್ಲ—ಸಂಕೋಚಪಡುತ್ತಲೂ ಇರಲಿಲ್ಲ.—

ಕೆಲವು ರಾಜಕೀಯ ಭಾಷಣಗಳಲ್ಲಿ ಅವರು ನುಡಿದಿರುವ ಮಾತುಗಳು ಅವರ ನಿರ್ಭೀತಿಯನ್ನೂ ನಿರ್ದಾಕ್ಷಿಣ್ಯ ಪ್ರಕೃತಿಯನ್ನೂ ಪ್ರದರ್ಶಿಸುತ್ತಿವೆ.

" ಆಂಗ್ಲೋ ಇಂಡಿಯನರು, ಭರತಖಂಡವನ್ನು ತಮ್ಮ ಮಾತೃಭೂಮಿಯನ್ನಾಗಿ ಭಾವಿಸಿ ವಾಸಮಾಡಿಕೊಂಡಿರಲು ನಮ್ಮ ಆಕ್ಷೇಪವಿಲ್ಲ. ಆದರೆ ಅವರು ಕೇವಲ ಧನಾಕಾಂಕ್ಷಿಗಳಾಗಿಮಾತ್ರ ಇಲ್ಲಿಗೆಬಂದು, ನಮಗೆ ಸ್ವರಾಜ್ಯ ದೊರೆತರೆ ತಮ್ಮ ಸ್ವಾರ್ಥಸಾಧನೆಗೆ ವಿಘ್ನವುಂಟಾಗುವುದೆಂದು ನಮ್ಮ ಮಾರ್ಗಕ್ಕೆ ಅಡ್ಡಬರುವರಾದರೆ, ಅವರು ಹಿಂದೂಸ್ಥಾನಕ್ಕೆ ಸ್ನೇಹಿತರೂಅಲ್ಲ—ಅವರಿಗಿಲ್ಲಿ ಸ್ಥಾನವೂಇಲ್ಲ " ಎಂದು ಒಂದು ಉಪನ್ಯಾಸದಲ್ಲಿ ನುಡಿದಿರುವರು. ಮತ್ತೊಂದೆಡೆಯಲ್ಲಿ " ಭರತಖಂಡವನ್ನು ತಾವು ಜಯಿಸಿದ್ದೇವೆಂದು ಬ್ರಿಟಿಷರು ಜಂಭ ಹೊಡೆಯುವುದುಂಟು. ಆದರೆ, ನಿಶ್ಚಯವಾಗಿ ಹೇಳುತ್ತೇನೆ ಕೇಳಲಿ! ಹಿಂದೂಸ್ಥಾನವು ಎಂದೂ ಯಾರಿಂದಲೂ

ಜಯಿಸಲ್ಪಡಲಿಲ್ಲ ; ಜಯಿಸಲ್ಪಡುವುದೂ ಇಲ್ಲ. ಮತ್ತೇನೆಂದರೆ ಬ್ರಿಟಿಷರು ಅದನ್ನು ಉತ್ತಮರೀತಿಯಿಂದ ಪಾಲಿಸಿ, ಸುಖಶಾಂತಿಗಳನ್ನು ನೆಲೆಗೊಳಿಸುವ ಭರವಸೆಯಮೇಲೆ ಸ್ನೇಹ ಪ್ರೇಮಗಳ ಮೂಲಕ ಪಡೆದುದಲ್ಲದೆ, ಅದನ್ನು ಎಂದೂ ಯಾರೂ ಜಯಿಸಲಿಲ್ಲ. ನಮ್ಮ ಮಾತೃಭೂಮಿಯು ತನ್ನ ಸಂಸ್ಕೃತಿಯನ್ನೂ, ಪುರಾತನ ನಾಗರಿಕತೆಯ ಆದರ್ಶಗಳನ್ನೂ ಸರ್ವ ಪ್ರಪಂಚದಲ್ಲೂ ವ್ಯಾಪಿಸುವಂತೆ ಮಾಡುವುದು-" ಎಂದಿರುವರು.

೧೯೧೯ ನೆಯ ಸಂವತ್ಸರದ ರಾಜಕೀಯ ಸುಧಾರಣೆಯನ್ನು ಕೊಡುವುದಕ್ಕೆ ಮೊದಲು, ಇಂಡಿಯಾ ಸ್ಟೇಟ್ ಸೆಕ್ರೆಟರಿಯವರಾದ ಮಿ|| ಮಾಂಟೆಗೂ ಸಾಹೇಬರು ಕಲ್ಕತ್ತಾಕ್ಕೆ ಬಂದಿದ್ದಾಗ್ಗೆ ನಮ್ಮ ಕಥಾನಾಯಕರನ್ನು ನೋಡಲಪೇಕ್ಷಿಸಿದರು. ಶ್ರೀ . ದಾಸರು ಅವರ ಆಹ್ವಾನವನ್ನು ಮನ್ನಿಸಿ ಅವರಲ್ಲಿಗೆ ಹೋಗಿ ಯೋಗ್ಯರೀತಿಯಿಂದ ಗೌರವಿಸಲ್ಪಟ್ಟು ಕುಳಿತರು. ಒಡನೆಯೇ ಸಂಭಾಷಣೆಗೆ ಆರಂಭವಾಗಿ - ' ಭರತಖಂಡದವರು ರಾಜಕೀಯ ಸ್ವಾತಂತ್ಯಕ್ಕೆ ಅರ್ಹರೇ ' ಎಂಬವಿಚಾರವು ಚರ್ಚೆಗೆ ಬಂತು. ಬಂಗಾಳದ ಗವರ್ನರು— ' ಭಾರತೀಯರು ವಿದ್ಯೆಯಲ್ಲೂ ನಾಗರೀಕತೆಯಲ್ಲೂ ಬಹುಹಿಂದೆ ಬಿದ್ದಿರುವುದರಿಂದ ಸ್ವಪರಿಪಾಲನೆಗೆ ಅನರ್ಹರು ' ಎಂದು ನುಡಿದರು. ಈ ಮಾತನ್ನು ಕೇಳಿದೊಡನೆಯೇ, ಶ್ರೀ ದಾಸರು, ತಾರತಮ್ಯವಿಲ್ಲದೆ ತಮ್ಮ ದೇಶೀಯರಮೇಲೆ ಬಂದ ಆ ದೋಷಾರೋಷಣೆಯನ್ನು ಸಹಿಸಲಾರದೆ,— ' ಭಾರತೀಯರಿಗೆ ವಿದ್ಯಾಭ್ಯಾಸ ಮಾಡಿಸುವ ಉತ್ತರವಾದಿತ್ವವನ್ನು ಈಗ್ಗೆ ೧೫೦ ವರ್ಷಗಳಿಂದ ವಹಿಸಿದ್ದವರು ನೀವು. ಹೀಗಿದ್ದೂ ಈಗ ಅವರು ಅವಿದ್ಯಾವಂತರು, ಸ್ವಾತಂತ್ರ್ಯಕ್ಕೆ ಅನರ್ಹರು ಎಂದು ಹೇಳುವುದಾದರೆ ಆ ತಪ್ಪು ನಿಮ್ಮದೇ ಅಲ್ಲದೆ ನಮ್ಮದಲ್ಲ " ಎಂದು ನಿರ್ದಾಕ್ಷಿಣ್ಯವಾಗಿ ನುಡಿದುಬಿಟ್ಟರು. ಆ ಮಾತನ್ನು ಕೇಳಿದೊಡನೆಯೇ ಗವರ್ನರಿನ ಮುಖವು ಕೋಪಶಿಖೆಯಿಂದ ಉರಿಯತೊಡಗಿ ಕೆಂಪಾಯಿತು. ಆತನು ಒಡನೆ ಆಸ್ಥಳವನ್ನು ಬಿಟ್ಟು ಹೊರಟುಹೋದನು. ಆದರೆ ಮಾಂಟೆಗೂ ಸಾಹೇಬರು, ಶ್ರೀ ದಾಸರ ನಿರ್ಭಯ ಸ್ವಭಾವವನ್ನು ಮೆಚ್ಚಿಕೊಂಡು ಅನೇಕ ಗಂಟೆಗಳವರೆಗೆ ದೇಶದ ವಿವಿಧ ವಿಚಾರಗಳನ್ನು ಕುರಿತು ಅವರೊಂದಿಗೆ ಪ್ರಸ್ತಾಪಿಸಿದರು.

ಭಾರತ ದೇಶಕ್ಕೆ ಸ್ವರಾಜ್ಯ ಬೇಕೆಂದರೆ, ಹಿಂದೂಗಳೊಬ್ಬರೇ ಆಗಲಿ ಅಥವ ಮುಹಮ್ಮದೀಯರೊಬ್ಬರೇ ಆಗಲಿ, ಸರ್ವ ಸ್ವಾತಂತ್ರ್ಯವನ್ನೂ ಹೊಂದಿ ಈಗಿನ ಅಧಿಕಾರಿಗಳಂತೆಯೇ ಕೈಕೆಳಗಿನವರನ್ನೂ ಪ್ರಜಾವರ್ಗ ವನ್ನೂ ಪೀಡಿಸುವ ಬೇರೊಂದು ಅಧಿಕಾರವರ್ಗವಾಗಿ ಮಾರ್ಪಡಬೇಕು ಎಂಬುದು ಅವರ ಅಭಿಪ್ರಾಯವಾಗಿರಲಿಲ್ಲ. 'ಇಂಗ್ಲೆಂಡುದೇಶದಲ್ಲಿ ಆಂಗ್ಲೇ ಯನೂ, ಫ್ರಾನ್ಸ್‌ದೇಶದಲ್ಲಿ ಫ್ರೆಂಚರವನೂ, ಅಮೆರಿಕಾದಲ್ಲಿ ಅಮೆರಿಕನನೂ ಜಪಾನ್‌ದೇಶದಲ್ಲ ಜಪಾನೀಯನೂ ಹೇಗೆ ಸ್ವತಂತ್ರರಾಗಿದ್ದಾರೆಯೋ ಅಂ ತಹ ಸ್ವಾತಂತ್ರ್ಯವು ಭಾರತದೇಶದಲ್ಲಿ ನಮಗೆ ಬೇಕು. ದೇಶದ ಪಾಲನೆಯು ಪ್ರಜಾಪ್ರಾತಿನಿಧ್ಯಕ್ಕೆ ಒಳಪಟ್ಟು, ಪ್ರಜೆಗಳ ಇಷ್ಟಾನುಸಾರ ನಡೆಯಬೇಕು.' ಎಂಬುದು ಅವರ ಆಶಯವಾಗಿತ್ತು. ಈ ಆಶಯವನ್ನು ಜನಾಂಗದ ಮನ ಸ್ಸಿನಮೇಲೆ ಮೂಡಿಸುವುದರಲ್ಲಿ ಆ ದೇಶಬಾಂಧವರು ಮರಣಾವಧಿ ಅವಿಶ್ರಾಂತ ಶ್ರಮಪಟ್ಟರು.

---

## — ಅ ಸ ಹ ಕಾ ರ ಚ ಳ ವ ಳಿ —

೧೯೧೪ ನೆಯ ಆಗಸ್ಟು ೪ ನೆಯದಿನ ಪ್ರಾರಂಭವಾದ ದುರಂತ ಐರೋಪಾ ಸಂಗ್ರಾಮವು ೧೯೧೭ ನೆಯ ಸಂವತ್ಸರಾಂತ್ಯಕ್ಕೆ ಕೊನೆಗಂಡು, ಬ್ರಿಟಿಷ್ ಸಾಮ್ರಾಜ್ಯದವರು ವಿಜಯಧ್ವಜವನ್ನು ಏರಿಸಿ ಜಯಭೇರಿ ಯನ್ನು ಹೊಡೆಯಲು ಶಕ್ತರಾದರು. ಸಾಮ್ರಾಜ್ಯ ಶಾಂತತೆಯನ್ನು ಅಪೇ ಕ್ಷಿಸುತ್ತಿದ್ದ ಅಧೀನ ಜನಾಂಗಗಳವರು, ಜಯಶಾಲಿಗಳಾದ ಪ್ರಭುತ್ವವರ್ಗ ದವರು-ಮುಂದೆ, ಸಮಾಧಾನದಿಂದ ತಮ್ಮ ಕುಂದು ತೊಂದರೆಗಳನ್ನು ನಿವಾರಿಸುವ ವಿಷಯದಲ್ಲಿ ಶ್ರದ್ಧೆವಹಿಸುವರೆಂದು ಆಶಿಸಿದ್ದರು. ಆದರೆ ಯುದ್ಧಜಯದಿಂದ ಉಂಟಾದ ಪರಿಣಾಮವು, ಸಾಮ್ರಾಜ್ಯ ಸರಕಾರಕ್ಕೆ ತನ್ನ ಸಾಮರ್ಥ್ಯವಿಷಯದಲ್ಲಿ ಹೆಮ್ಮೆಯನ್ನು ಹೆಚ್ಚಿಸುವುದಾಯಿತಲ್ಲದೆ, ಅಧೀನ ಜನಾಂಗಗಳ ಕಷ್ಟನಿಷ್ಟುರಗಳನ್ನು ಲಾಲಿಸಿ ಸರಿಪಡಿಸುವುದರಲ್ಲಲ್ಲ! ಅಧಿಕಾ ರದ ಮುಷ್ಟಿಯನ್ನು ಇನ್ನೂ ಬಿಗಿಮಾಡಿ, ಹೆಚ್ಚು ನಿರ್ಬಂಧಗಳನ್ನು ಕಲ್ಪಿ ಸುವುದರಲ್ಲಿ ಪರ್ಯವಸಾನವಾಯಿತಲ್ಲದೆ ಶಾಂತಿ ಸಮಾಧಾನಗಳನ್ನು ಹೆಚ್ಚಿ

ಸುವುದರಲ್ಲಲ್ಲ: ಲಾರ್ಡ್‌ಚೆಲ್ಮ್ಸ್‌ಫರ್ಡ್‌ಸಾಹೇಬನು ೧೯೧೭ ನೆಯ ಡಿಶಂಬರಿನಲ್ಲೇ ಮಿ|| ಜಸ್ಟಿಸ್‌ರೌಲೆಟ್ ಎಂಬಾತನ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನಿಯಮಿಸಿ, ಹಿಂದೂಸ್ಥಾನದಲ್ಲಿರುವ ರಾಜದ್ರೋಹ ಸಂಗಡಗಳ ಸಂಬಂಧ ವಿಚಾರನಡಿಸಿ ವರದಿಯನ್ನು ಕಳುಹಿಸಬೇಕೆಂದು ವಿಧಿಸಿದನು. ಆ ಸಮಿತಿಯು ದೇಶದ ಎಲ್ಲಾ ಪ್ರಾಂತಗಳಲ್ಲೂ ಸಂಚರಿಸಿ ಬೇಕಾದ ವಿಚಾರಗಳನ್ನು ಸಂಗ್ರಹಿಸಿಕೊಂಡು ೧೯೧೮ ನೆಯ ಮಾರ್ಚಿಯವೇಳೆಗೆ ಒಂದು ವರದಿಯನ್ನು ಕಳುಹಿಸಿತು. ಅದರ ಆಧಾರದ ಮೇಲೊಂದು ನ್ಯಾಯಚಟ್ಟವನ್ನು ತಯಾರಿಸಿ ಅದನ್ನು ವರಿಷ್ಟಕಾಯಿದೆ ಕೌನ್ಸಿಲಿನಲ್ಲಿ ಬಹು ಆತುರದಿಂದ ಮಂಜೂರು ಮಾಡಿಸಿ ದೇಶದಲ್ಲಿ ಆಚರಣೆಗೆತರಲು ಸಿದ್ಧಗೊಳಿಸಲಾಯಿತು. ಅದರಮೂಲಕ ರಾಜದ್ರೋಹಕರವಾದ ಆಪಾದನೆಗೆ ಒಳಗಾಗಿ ಬಂಧಿಸಲ್ಪಟ್ಟ ಯಾವನೊಬ್ಬನನ್ನೂ ಡಿಫೆನ್ಸ್ ಆಫ್ ಇಂಡಿಯಾ ಆಕ್ಟ್ ಎಂಬ ನ್ಯಾಯಚಟ್ಟಕ್ಕೆ ಅನುಸಾರವಾದ ಅಧಿಕಾರಬಲದಿಂದ ಒಡನೆ ವಿಚಾರಣೆಗೆ ಗುರಿಪಡಿಸಿ ಶಿಕ್ಷಿಸಬಹುದಾಗಿತ್ತು. ಇದರಿಂದ ಈ ವಿಶಾಲದೇಶದಲ್ಲಿ ಯಾರೊಬ್ಬರ ಪ್ರಾಣಮಾನಗಳೂ ಸುರಕ್ಷಿತವಾಗಿಲ್ಲದೆ, ಆಡುವ ಒಂದೊಂದು ಮಾತೂ ಇಡುವ ಒಂದೊಂದು ಹೆಜ್ಜೆಯೂ ಭಯಪ್ರದವಾಗತೊಡಗಿತು. ದೇಶವೇ ಅಲ್ಲೋಲಕಲ್ಲೋಲವಾದಂತಾಯಿತು.

ಒಡನೆ ಮಹಾತ್ಮ ಗಾಂಧಿಯವರು ಈ ದುಷ್ಟ ನ್ಯಾಯಚಟ್ಟವನ್ನು ವಿರೋಧಿಸಲು ದೇಶವನ್ನೇ ಸಿದ್ಧಗೊಳಿಸಲಾರಂಭಿಸಿದರು. ಸತ್ಯಾಗ್ರಹ ಸಮರದ ಭೇರೀನಾದವು ಆಸೇತು ಹಿಮಾಚಲವಾಗಿ ಕೇಳಿಸಿತು. "ದೇಶೀಯ ಪ್ರಜೆಗಳ ಜನ್ಮಸಿದ್ಧ ವ್ಯಕ್ತಿಸ್ವಾತಂತ್ರ್ಯದ ಸಾಮಾನ್ಯ ಸಿದ್ಧಾಂತಗಳನ್ನೂ ನಾಶಗೊಳಿಸುತ್ತಿರುವ ಈ ನ್ಯಾಯಚಟ್ಟವನ್ನು ಪ್ರಜೆಗಳಮೇಲೆ ಹೊರಿಸುವುದು ಶುದ್ಧ ಅನ್ಯಾಯವಾಗಿದೆ. ಆದುದರಿಂದ ಈ ಚಟ್ಟವನ್ನು ಒಡನೆ ಹಿಂದಕ್ಕೆ ತೆಗೆದುಕೊಳ್ಳಬೇಕೆಂದು ಒತ್ತಾಯಪಡಿಸುತ್ತೇವೆ. ಮತ್ತು ಹಾಗೆ ಹಿಂದಕ್ಕೆ ತೆಗೆದುಕೊಳ್ಳುವವರೆಗೆ ಅದರ ಅಧಿಕಾರವನ್ನು ವಿರೋಧಿಸುತ್ತೇವೆ. ಹಾಗೆ ವಿರೋಧಿಸುವಲ್ಲಿ ಶಾಂತರೀತಿಯಿಂದ ಸತ್ಯಮಾರ್ಗವನ್ನೇ ಅವಲಂಬಿಸುತ್ತೇವಲ್ಲದೆ, ಯಾರೊಬ್ಬರ ಪ್ರಾಣಧನ ಮಾನಗಳಿಗೂ ಯಾವ ಹಾನಿಯೂ ಉಂಟಾಗದಂತೆ ಆಚರಿಸುತ್ತೇವೆ." ಎಂಬೀ ಸತ್ಯಾಗ್ರಹ ತತ್ವವು ಮಹಾ

ತ್ಮಗಾಂಧಿಯವರಿಂದ ಪ್ರಸಿದ್ಧ ಪಡಿಸಲ್ಪಟ್ಟಿತು. ದೇಶದ ಎಲ್ಲಾಭಾಗದಲ್ಲೂ ಅಸಂಖ್ಯ ಸಭೆಗಳು ನಡೆದು ಈ ತತ್ವವು ವಿವಿಧಮುಖದಿಂದ ಜನಸಾಮಾನ್ಯಕ್ಕೆ ಬೋಧಿಸಲ್ಪಟ್ಟಿತು. ಬಂಗಾಳಾಪ್ರಾಂತ್ಯದಲ್ಲಿ ಪ್ರಾರಂಭವಾದ ಈ ಚಳವಳಿಗೆ ಶ್ರೀ ಚಿತ್ತರಂಜನದಾಸರು ಮುಖಂಡರಾಗಿ ನಿಂತರು. ೬-೩-೧೯೨೮ ನೆಯದಿನ ಕಲ್ಕತ್ತಾನಗರದಲ್ಲಿ ನಡೆದ ಒಂದು ಬೃಹತ್ಸಭೆಯಲ್ಲಿ ಅವರು, —"ಈ ದಿನವು ಮಹಾತ್ಮ ಗಾಂಧಿಯವರಿಗಾಗಿ ಪೂಜ್ಯವೆನಿಸಿರುವುದು. ನಮ್ಮ ಹೃದಯವೇದನೆಗಳನ್ನು ವ್ಯಕ್ತಪಡಿಸಿಕೊಳ್ಳಬೇಕಾಗಿರುವ ದಿನವಿದು. ವಿಭವ ಪ್ರಾಪ್ತಿಯಲ್ಲಿ ನಮ್ಮನ್ನೇ ನಾವು ಮರೆತುಬಿಡುತ್ತೇವೆ. ಆದರೆ ಪರಾಭವವು ಪ್ರಾಪ್ತವಾದ ದಿನಗಳಲ್ಲೇ ನಾವು ಭಗವಾನನಕಡೆ ತಿರುಗಿ ಆ ದಯಾಮಯನ ಸಂದೇಶಗಳನ್ನು ಕೇಳುವವರಾಗುವುದು. ಈದಿನ ನಾವು ನಮ್ಮ ಭಾರತ ಜನತೆಯ ಆತ್ಮಾನ್ವೇಷಣೆಯಲ್ಲಿದ್ದೇವೆ! ಆತ್ಮಾನ್ವೇಷಣಾಕಾರ್ಯವು ಹೇಡಿಗಳಿಂದ ಸಾಧ್ಯವಾಗತಕ್ಕದಲ್ಲ. ಅದಕ್ಕೆ ಶಕ್ತಿ ಬೇಕು. ಆ ಶಕ್ತಿಯಾವುದು? ಅದು ಪಾಶಾವೀಶಕ್ತಿಯಲ್ಲ. ಅದು ಪ್ರೇಮದ ದೈವೀಶಕ್ತಿಯು! ಈ ಪ್ರೇಮದ ದೈವೀಶಕ್ತಿಯ ಪ್ರಾಪ್ತಿಯು, ಸ್ವಾರ್ಥತೆ, ಅಸೂಯೆ ಹಿಂಸೆ, ದ್ವೇಷ ಮುಂತಾದುವುಗಳನ್ನು ನಮ್ಮ ಹೃದಯದಿಂದ ಹೊರದೂಡಿದಲ್ಲದೆ ಸಾಧ್ಯವಾಗದು. ನಮ್ಮವರಿಗೆ ಭಾರತದೇಶದ ವಿಷಯದಲ್ಲಿ ಪ್ರೇಮವೂ ಭಕ್ತಿಯೂ ಉತ್ಪನ್ನವಾಗಬೇಕು. ದೇಶಕ್ಕಾಗಿ ಸ್ವಾರ್ಥತೆಯನ್ನು ತ್ಯಜಿಸಲು ಸಿದ್ಧರಾಗುವಂತಹ ದೇಶಪುತ್ರರು ಪ್ರೈದೋರಬೇಕು. ದೇಶಕ್ಷೇಮ ವಿಷಯದಲ್ಲಿ ಪ್ರಾಣಾಂತ್ಯದವರೆಗೂ ಕೆಲಸಮಾಡುವ ನಿಶ್ಚಯವಿರಬೇಕಾದರೂ, ನಮ್ಮ ಶತ್ರುಗಳನ್ನಾದರೂ ದ್ವೇಷಿಸದಂತಹ ಸಾತ್ವಿಕ-ಶಾಂತಸ್ವಭಾವವು ಅವರ ಮನಸ್ಸಿನಲ್ಲಿ ಬೇರೂರಬೇಕು. ಅಂತಹ ಶಾಂತತೆಯ ತಳಹದಿಯಮೇಲೆ ಏರ್ಪಟ್ಟ ಆತ್ಮಶಕ್ತಿಯಿಂದ ಈ ದುಷ್ಟ ರೌಲಟ್ ಶಾಸನವನ್ನು ನಾವು ಎದುರಿಸಬೇಕು." ಎಂದು ಮುಂತಾಗಿ ಉಪನ್ಯಾಸಮಾಡಿ ಜನಮನವನ್ನು ಒಲಿಸಿ, ಸತ್ಯಾಗ್ರಹ ಸಮರಕ್ಕೆ ಬಂಗಾಳದ ಜನತೆಯನ್ನು ಸಿದ್ಧಪಡಿಸಿದರು.

ಮೇಲ್ಕಂಡ ಸತ್ಯಾಗ್ರಹ ಸಮರದ ಸಿದ್ಧತೆಗಾಗಿ ದೇಶದ ವಿವಿಧ ಭಾಗಗಳಲ್ಲಿ ನಡೆದವಿಚಾರಗಳ ಚರಿತ್ರೆಯು ದುರ್ದೈವದಿಂದ ರಕ್ತಾಕ್ಷರಗಳಿಂದ

ಬರೆವಿಡಲ್ಪಡಬೇಕಾಯಿತು. ಪಂಜಾಬಿನಲ್ಲಿ, ಆ ಸಂಬಂಧದಲ್ಲೇ ಡಾ. ಸತ್ಯಪಾಲ್, ಡಾ. ಕಿಚ್ಲೂ ಎಂಬಿಬ್ಬರು ನಾಯಕರವಿಷಯದಲ್ಲಿ ಸಹಾನುಭೂತಿಯಿಂದ ಅಮೃತಸರದಬಳಿ ಜಲಿಯನ್ವಾಲಾಬಾಗ್ ಎಂಬಲ್ಲಿ ನೆರೆದ ದೊಡ್ಡದೊಂದು ಸಭೆಯಮೇಲೆ ಮೆಷೀನ್‌ಗನ್, ಎಂಬ ಯುದ್ಧ ಸಾಧನವನ್ನು ಉಪಯೋಗಿಸಿ, ಸರ್ ಮೈಕೇಲ್ ಒಡ್ವಯರನು ರಕ್ತ ಪ್ರವಾಹವನ್ನೇ ಹರಿಸಿಬಿಟ್ಟನು. ಆಕಾಶ ವಿಮಾನಗಳಿಂದ ಬಾಂಬು ಗುಂಡುಗಳನ್ನು ಎಸೆದು ನಿಶ್ಯಸ್ತ್ರರೂ, ನಿರಾಧಾರಿಗಳೂ ಆದ ನೂರಾರು - ಸಹಸ್ರಾರುಮಂದಿಯ ಪ್ರಾಣಹರಣವಾಯಿತು. ದೇಶದಲ್ಲಿ ಪ್ರಜೆಗಳ ಹಾಹಾಕಾರವು ಮುಗಿಲಿಗೆದ್ದಿತು. ಸರ್ಕಾರದವರಿಂದ ಕೊಡಲ್ಪಟ್ಟ ವರದಿಯು ಕೇವಲ ಏಕಮುಖವಾದುದೂ, ಪ್ರಜೆಗಳಮೇಲೆಯೇ ಆಪಾದನೆ ಹೊರಿಸುವುದೂ ಆಗಿದ್ದಿತು. ಆ ಸಂದರ್ಭದಲ್ಲಿ ರಾಷ್ಟ್ರೀಯ ಸಭೆಯು ಮಹಾತ್ಮ ಗಾಂಧಿಯವರನ್ನೂ ನಮ್ಮ ಕಥಾನಾಯಕರನ್ನೂ ಇತರ ಕೆಲಮಂದಿ ಸುಪ್ರಸಿದ್ಧ ದೇಶಭಕ್ತರನ್ನೂ ಒಂದು ಸಮಿತಿಯಾಗಿ ಏರ್ಪಡಿಸಿ ಪಂಜಾಬು ನರಹತ್ಯದ ಸಂಪೂರ್ಣ ನಿಶ್ಚಯವೃತ್ತಾಂತವನ್ನೂ ಪ್ರಕಟಿಸಬೇಕೆಂದು ನಿಯಮಿಸಿತು. ಆಗ ಚಿತ್ತರಂಜನರ ದೇಹಸ್ಥಿತಿಯು ಸರಿಯಾಗಿಲ್ಲದಿದ್ದರೂ, ಕರ್ತವ್ಯ ಪ್ರೇರಣೆಯಿಂದ ತನುಮನಧನಗಳ ಅಗಾಧ ತ್ಯಾಗವನ್ನುಸಹಿಸಿ, ಆ ಮಹನೀಯರು ನಾಲ್ಕು ತಿಂಗಳಕಾಲ ಆ ಸಮಿತಿಯಲ್ಲಿದ್ದು ಕೆಲಸಮಾಡಿ, ನುಡಿಯಲಾಗದ—ನೆನೆಯಲಾಗದ ಭಯೋತ್ಪಾದಕ ಕಾರ್ಯಗಳಿಂದ ಪ್ರಜಾಹಿಂಸೆಯನ್ನು ನಡೆಸಿದ ಜನರಲ್ ಡೈಯರನ ಕೃತ್ಯಗಳನ್ನೆಲ್ಲ ಬೆಳಕಿಗೆ ತರುವಂತಹ ಒಂದು ವರದಿಯನ್ನು ಸಿದ್ಧಪಡಿಸಿದರು. ಆದರೇನು! ಐರೋಪ್ಯ ಮೆಂಬರುಗಳ ಬಹುತ್ವ ಸಂಖ್ಯೆಯಿಂದ ಕೂಡಿ ನಿಯಮಿತವಾದ ಒಂದು ಪ್ರತ್ಯೇಕ ಸಮಿತಿಯ ಮೂಲಕ ನಡೆಸಿದ ವಿಚಾರದಿಂದ ಸರ್ಕಾರದವರು ಸಿದ್ಧಪಡಿಸಿದ ಬೇರೊಂದು ವರದಿಗೂ, ರಾಷ್ಟ್ರೀಯ ಸಭಾಮೂಲಕ ಪ್ರಕಟವಾದ ಈ ವರದಿಗೂ ಅಜಗಜ ನ್ಯಾಯದಿಂದ ವ್ಯತ್ಯಾಸ ತೋರಿತು. ಸರ್ಕಾರವು ತನ್ನ ತಪ್ಪನ್ನುಮರೆಸಿ ಜನರಲ್ ಡೈಯರ್‌ಸಾಹೇಬನು ಮಾಡಿದ ಆ ಮಹತ್ಕಾರ್ಯಕ್ಕಾಗಿ ಆತನನ್ನು ಭಾರತಸಾಮ್ರಾಜ್ಯರಕ್ಷಕನೆಂದು ಹೊಗಳಿ, ಆತನ ಚಿರಜೀವಿತಕ್ಕಾಗಿ ಹರಕೆಯನ್ನು ಹೊತ್ತುದಲ್ಲದೆ, ಆತನನ್ನು ಸತ್ಕರಿಸಿ

ಬಹುಮಾನಪಡಿಸಲಿಕ್ಕಾಗಿ ಹಿಂದೂಸ್ಥಾನದಿಂದಲೇ ಎಷ್ಟೋ ದ್ರವ್ಯವನ್ನೂ ಸಂಗ್ರಹಿಸಿ ಕಳುಹಿಸಿದರು.

ಇದರೊಂದಿಗೇ, ಭಾರತವಾಸೀ ಮುಹಮ್ಮದೀಯರಿಗೆ ವಿಷಾದ ಜನಕವಾದ ಮತ್ತೊಂದು ಕಾರ್ಯವೂ ಸಾಮ್ರಾಜ್ಯ ಸರ್ಕಾರದವರಿಂದ ಆಚರಿಸಲ್ಪಟ್ಟಿತು. ಯುದ್ಧಾಂತ್ಯದಲ್ಲಿ, ಹಿಂದೆ ವಾಗ್ದಾನ ಮಾಡಿದ್ದಂತೆ ನಡೆಯದೆ ಸಾಮ್ರಾಜ್ಯ ಮಂತ್ರಿ ಲಾಯಿಡ್ ಜಾರ್ಜ್ ಸಾಹೇಬನು ಮುಹಮ್ಮದೀಯರ ಮತಗುರುಸ್ಥಾನವಾದ ಖಿಲಾಫತ್ ವಿಚಾರದಲ್ಲಿ ಬಹು ಅನ್ಯಾಯಕರವಾದ ರೀತಿಯಲ್ಲಿ ಆಚರಿಸಿದನು. ಇದನ್ನು ತಿಳಿದೊಡನೆಯೇ ಪ್ರತಿಯೊಬ್ಬ ಮುಹಮ್ಮದೀಯನ ಹೃದಯರಕ್ತವೂ ಕಾಯ್ದು ಕುದಿಯತೊಡಗಿತು. ಭಾರತವಾಸಿಗಳಾದ ಹಿಂದೂ ಮುಹಮ್ಮದೀಯರಿಬ್ಬರಿಗೂ ಪ್ರಾಪ್ತವಾದ ಈ ಸಂಕಟಗಳಿಂದ ಬಹು ಬೇಸತ್ತ ಮಹಾತ್ಮ ಗಾಂಧಿಯವರು ಕೇವಲ ಕೃತಘ್ನವಾದ ಈ ಸಾಮ್ರಾಜ್ಯ ಸರಕಾರದೊಂದಿಗೆ ಇನ್ನೂ ಸಹಕರಿಸಿಕೊಂಡಿರುವುದು ಪಾಪಸಾಧನವೆಂದು ನಿಶ್ಚಯಿಸಿ, ದೇಶಭಕ್ತ ಲಾಲಾಲಜಪತ್‌ರಾಯ್‌ಯವರ ಅಧ್ಯಕ್ಷತೆಯಲ್ಲಿ ೧೯೨೦ ನೆಯ ಸೆಪ್ಟಂಬರಿನಲ್ಲಿ ಕಲ್ಕತ್ತಾ ನಗರದಲ್ಲಿ ನೆರೆದ 'ಸ್ಪೆಷಲ್ ಕಾಂಗ್ರೆಸ್ಸಿ'ನಲ್ಲಿ ಬ್ರಿಟಿಷ್ ಸರ್ಕಾರದೊಂದಿಗೆ ಸಂಪೂರ್ಣ ಅಸಹಕಾರವನ್ನು ವ್ಯಕ್ತಪಡಿಸುತ್ತ ಸರ್ಕಾರಿ ಪಾಠಶಾಲಾ ಬಹಿಷ್ಕಾರ, ನ್ಯಾಯಾಸ್ಥಾನಗಳ ಬಹಿಷ್ಕಾರ, ಪರದೇಶೀ ವಸ್ತು ಬಹಿಷ್ಕಾರ ಮುಂತಾದ ಠರಾವುಗಳನ್ನು ತಂದರು. ಅವು ಮಹಾಸಭೆಯಿಂದ ಅಂಗೀಕಾರವನ್ನೂ ಪಡೆದುವು. ಆದರೆ ಚಿತ್ತರಂಜನದಾಸರು ಮಾತ್ರ ಆಗ್ಗೆ ನ್ಯಾಯಾಸ್ಥಾನಗಳ ಬಹಿಷ್ಕಾರದ ಠರಾವನ್ನು ಒಪ್ಪದಿದ್ದರೂ ಮುಂದೆ ಡಿಸಂಬರು ತಿಂಗಳಲ್ಲಿ ನಾಗಪುರದಲ್ಲಿ ನಡೆದ ಮಹಾಸಭೆಯಲ್ಲಿ ಒಪ್ಪಿ, ಅದಕ್ಕನುಸಾರವಾಗಿ ತಿಂಗಳೊಂದಕ್ಕೆ ಐವತ್ತು ಸಹಸ್ರ ರೂಪಾಯಿಗಳ ಸಂಪಾದನೆಯಿದ್ದ ತಮ್ಮ ನ್ಯಾಯವಾದಿ ವೃತ್ತಿಯನ್ನು ತ್ಯಜಿಸಿಬಿಟ್ಟರು. ಆ ಸಂದರ್ಭದಲ್ಲಿ ಅವರ ಮಿತ್ರರೊಬ್ಬರು,—"ಹೌದು, ವೃತ್ತಿಯನ್ನು ಬಿಟ್ಟುಬಿಟ್ಟಿರಲ್ಲ, ನೀವು ಕೈಕೊಂಡು ನಡೆಯಿಸಿಕೊಂಡು ಬರುತ್ತಿರುವ ಧರ್ಮಕಾರ್ಯಗಳ ಗತಿಯೇನು"? ಎಂದು ಕೇಳಲು, ಚಿತ್ತರಂಜನರು ಕ್ಷಣಕಾಲ ಸುಮ್ಮನಿದ್ದು, —"ನಾನೇನು ಮಾಡಲಿ! ನನಗೀಗ ವ್ಯಕ್ತಿ ಪ್ರಶ್ನೆಯಾದ ಇದಕ್ಕಿಂತಲೂ

ಅಧಿಕವಾದ ದೇಶಸೇವಾ ಸಂದೇಶವು ಬಂದಿದೆ. ಅದಕ್ಕೆ ಸಮ್ಮತಿಸಿದ್ದೇನೆ. ಈವರೆಗೆ ನನ್ನಿಂದ ಸಹಾಯ ಹೊಂದುತ್ತಿದ್ದವರನ್ನು ಮುಂದೆ ಆ ಸರ್ವ ಶಕ್ತನೇ ನೋಡಿಕೊಳ್ಳಬೇಕು'' ಎಂದು ನುಡಿದರಂತೆ! —

ನಮ್ಮ ಕಥಾನಾಯಕರ ಈ ಅಗಾಧ ಸ್ವಾರ್ಥತ್ಯಾಗವನ್ನು ಕಂಡು ದೇಶೀಯರು ಮಾತ್ರವಲ್ಲ - ಆಂಗ್ಲೇಯರೂ ಇತರರೂ ಪರಮಾಶ್ಚರ್ಯ ಮಗ್ನರಾದರು. ಚಿತ್ತರಂಜನದಾಸರಾದರೋ ಸರ್ಕಾರದ ಅಧಿಕಾರಿಗಳ ಆಗ್ರಹ ಅನುಗ್ರಹಗಳಿಗಾಗಲೀ, ಇತರರ ಹೊಗಳಿಕೆ ಬೊಗಳಿಕೆಗಳಿಗಾಗಲೀ ಲಕ್ಷ್ಯಕೊಡದೆ ಬಂಗಾಳಾ ದೇಶದಲ್ಲೆಲ್ಲ ಸಂಚರಿಸಿ, ಅಸಹಕಾರ ಚಳವಳಿಯ ನಿಶ್ಚಯ ಸಿದ್ಧಾಂತಗಳನ್ನು ಜನಗಳ ಮನಸ್ಸಿನಲ್ಲಿ ಬೇರೂರಿಸಿದರು. ಸರ್ಕಾರಿ ಪಾಠಶಾಲೆಗಳ ಬಹಿಷ್ಕಾರವನ್ನು ಕುರಿತು ಎಬ್ಬಿಸಿದ ಚಳವಳಿಯಿಂದಂತೂ ಬಂಗಾಳಾ ದೇಶವೇ ಅಲ್ಲೋಲಕಲ್ಲೋಲವಾದಂತಾಗಿ ೪೦-೫೦ ಸಹಸ್ರಮಂದಿ ಬಾಲಕರು ಕಾಲೇಜುಗಳನ್ನೂ ಪಾಠಶಾಲೆಗಳನ್ನೂ ತ್ಯಜಿಸಿಬಿಟ್ಟರು. ತರುವಾಯ ೧೯೨೧ ನೆಯ ಏಪ್ರಿಲಿನಲ್ಲಿ ಬೆಜವಾಡಾದಲ್ಲಿ ನಡೆದ ರಾಷ್ಟ್ರೀಯ ಸಭಾ ಸಂದೇಶವನ್ನು ಅನುಸರಿಸಿ ಮುಂಜೂರಾದ ತಿಲಕ ಸ್ವರಾಜ್ಯ ಫಂಡಿಗಾಗಿ ಒಂದು ಕೋಟಿ ರೂಪಾಯಿಗಳನ್ನು ಸಂಗ್ರಹಿಸುವಿಕೆ, ರಾಷ್ಟ್ರೀಯ ಮಹಾಸಭಾ ಮೆಂಬರರಾಗಿ ಒಂದು ಕೋಟಿ ಜನಗಳನ್ನು ಸೇರಿಸುವಿಕೆ ಮತ್ತು ಇಪ್ಪತ್ತುಲಕ್ಷ ಚರಕಾಗಳನ್ನು ಗ್ರಾಮಾಂತರಗಳಲ್ಲಿ ಹಂಚಿಕೊಟ್ಟು ನೂಲುವಿಕೆಯನ್ನು ಅಭಿವೃದ್ಧಿಪಡಿಸುವಿಕೆ ಎಂಬ ಠರಾವುಗಳನ್ನು ಕಾರ್ಯರೂಪಕ್ಕೆ ತರುವುದರಲ್ಲೂ ಅವರು ಅಗಾಧ ಶ್ರಮವನ್ನು ವಹಿಸಿ, ಬಂಗಾಳಾ ಪ್ರಾಂತದ ಪಾಲಿಗೆ ಬಂದಿದ್ದ ದ್ರವ್ಯವನ್ನೂ ಬಹು ಶೀಘ್ರಕಾಲದಲ್ಲೇ ಶೇಖರಿಸಿಕೊಟ್ಟರು.

---

## — ಕಾ ರಾ ಗಾ ರ ವಾ ಸ —

ಈ ಮಧ್ಯೆ ಅಸ್ಸಾಂ ದೇಶದ ತೇ ಎಲೆ ತೋಟಗಳವರು ತಮ್ಮ ಕೂಲಿಕಾರ ಜನಗಳಿಗೆ ಕೊಡುತ್ತಿದ್ದ ಅಮಾನುಷ ಹಿಂಸೆಗಳನ್ನೂ ಅಸಹನೀಯ ತೊಂದರೆಗಳನ್ನೂ ಸಹಿಸಲಾರದೆ ಮೊರೆಯಿಟ್ಟುಕೊಂಡ ಆ ಜನ

ಗಳಿಗೆ ಸಹಾಯಕರಾದ ದೇಶಬಂಧು ದಾಸರು ಅಲ್ಲಿಗೆ ಪತ್ನೀ ಸಮೇತರಾಗಿ ನಡೆದು, ಹುಚ್ಚೇರಿ ಬರುತ್ತಿದ್ದ ಪ್ರವಾಹಾದಿಗಳಿಂದ ಉಂಟಾಗಲಿದ್ದ ಪ್ರಾಣಾಪಾಯಗಳನ್ನೂ ಲಕ್ಷಿಸದೆ ರಾತ್ರಿಹಗಲುಗಳೆನ್ನದೆ ದುಡಿದು ಅವರಿಗೆ ಸಹಾಯಕರಾಗಿ ಅವರ ಕಷ್ಟಗಳನ್ನು ನೀಗಿಸಿದರು. ತರುವಾಯ ಅದೇ ವರ್ಷದ ಸೆಪ್ಟಂಬರಿನಲ್ಲಿ ಅಸಹಕಾರ ಚಳವಳಿಯ ಒಂದು ಶಾಖೆಯಾದ ಪರ ದೇಶೀ ವಸ್ತ್ರ ಬಹಿಷ್ಕರಣದ ಕಾರ್ಯಕ್ರಮವನ್ನು ಹೆಚ್ಚುರೀತಿಯಿಂದ ಆಚ ರಣೆಗೆ ತರಬೇಕೆಂಬ ಆಜ್ಞೆಯು ಕಾಂಗ್ರೆಸ್ಸಿನಿಂದ ಬರಲು ಶ್ರೀ ದಾಸರು ಅದನ್ನು ಅನುಸರಿಸಿ, ಬಂಗಾಳಾ ಪ್ರಾಂತದಲ್ಲೂ ಮುಖ್ಯವಾಗಿ ಕಲ್ಕತ್ತಾ ನಗರದಲ್ಲೂ ಮಹತ್ಸಭೆಗಳನ್ನು ನಡಿಸಿ ಉಪನ್ಯಾಸಗಳ ಮೂಲಕ ಸ್ವದೇಶೀ ಯ ವಸ್ತ್ರ ಧಾರಣೆಗೂ ಪರದೇಶೀ ವಸ್ತ್ರ ಬಹಿಷ್ಕರಣಕ್ಕೂ ಜನಗಳನ್ನು ಪ್ರೇರಿಸಿದರು.—"ನಮ್ಮ ದೇಶೀಯರ ಜೀವಿತವು ಕುಂಟೆಯಲ್ಲಿ ನಿಂತ ನೀರಿ ನಂತೆ ಕೊಳೆಯತೊಡಗಿದೆ. ಅದನ್ನು ನಾವು ಶುದ್ಧ ಪಡಿಸಬೇಕೆಂದರೆ ನಮ್ಮ ಹಿಂದಿನ ಪಾಪಗಳಿಗಾಗಿ ಪಶ್ಚಾತ್ತಾಪಪಡಬೇಕಾಗಿದೆ. ನಮ್ಮ ದಂಭದರ್ಪ ಸುಖಾಪೇಕ್ಷೆಗಳನ್ನೆಲ್ಲ ಬದಿಗೊತ್ತಿ ದೇಶೋದ್ಧಾರಕ್ಕಾಗಿ ಕಷ್ಟಸಹಿಷ್ಣುತೆಯ ಜೀವಿತವನ್ನು ಕೈಕೊಳ್ಳಬೇಕಾಗಿದೆ" ಎಂದು ಮುಂತಾಗಿ ಜನಗಳನ್ನು ಹುರಿ ದುಂಬಿಸತೊಡಗಿದರು. ಅದೇ ಕಾಲದಲ್ಲೇ ಜಾರ್ಜ್ ಚಕ್ರವರ್ತಿಗಳ ಜ್ಯೇಷ್ಠ ಕುಮಾರ - ಪ್ರಿನ್ಸ್ಆಫ್‌ವೇಲ್ಸನು ಭಾರತ ಯಾತ್ರೆಗೆಂದು ಕರೆತರ ಲ್ಪಟ್ಟು ಕಲ್ಕತ್ತಾ ನಗರ ಪ್ರವೇಶ ಮಾಡುತ್ತಿದ್ದನು. ನಗರದಲ್ಲಿ ಹರತಾಳ ವನ್ನು ಆಚರಿಸಿ ತನ್ಮೂಲಕ ಅದನ್ನು ಬಹಿಷ್ಕರಿಸುವಲ್ಲಿ ಚಿತ್ತರಂಜನದಾಸರು ಸ್ವಯಂಸೇವಕ ಗಣದ ಮುಖಂಡತ್ವವನ್ನು ತಮ್ಮ ಏಕಮಾತ್ರ ಪುತ್ರನಾದ ಚಿರರಂಜನದಾಸನಿಗೆ ವಹಿಸಿ ಕಳುಹಿಸಿದ್ದರು. ಆತನು ಇತರ ಅನೇಕಮಂದಿ ಯುವಕರೊಂದಿಗೆ ಸರ್ಕಾರದವರಿಂದ ಬಂಧಿತನಾಗಿ ಸೆರೆಮನೆಗೆ ಕಳುಹಿಸ ಲ್ಪಟ್ಟನು. ತರುವಾಯ ಸ್ವಲ್ಪ ಹೊತ್ತಿನೊಳಗಾಗಿಯೇ ಶ್ರೀ ದಾಸರ ಪತ್ನಿ ಶ್ರೀಮತಿ ವಾಸಂತಿದೇವಿಯೂ, ಶ್ರೀಮತಿ ಊರ್ಮಿಳಾದೇವಿ - ಸುನೀತಿ ದೇವಿಯರೂ ಸ್ವಯಂಸೇವಕರ ಗುಂಪಿಗೆ ನಾಯಕರಾಗಿ ಮುಂದೆ ಬಂದರು. ಸರ್ಕಾರದವರು ಅವರನ್ನೂ ನಿರ್ಬಂಧಿಸಿ ಸೆರೆಮನೆಗೆ ಕಳುಹಿಸಿದರು. ಆ ರಾತ್ರಿಯೇ ಆ ಸ್ತ್ರೀಯರನ್ನು ಬಂಧಮುಕ್ತ ಮಾಡಿದರಾದರೂ ಈ ಎಲ್ಲಾ

ಕಾರ್ಯಗಳಿಂದ ಜನಮನದಲ್ಲಿ ಸಾಮ್ರಾಜ್ಯ ಸರ್ಕಾರದ ನ್ಯಾಯಪಾಲನೆಯ ವಿಷಯದಲ್ಲಿದ್ದ ಅಲ್ಪ ಸ್ವಲ್ಪ ನಂಬಿಕೆಯೂ ನಿಶ್ಶೇಷವಾಗಿ ಬತ್ತಿ ಹೋಯಿತು. ಅಧಿಕಾರಿಗಳ ದುರ್ವರ್ತನೆಗಳನ್ನು ಬಹು ಕಠಿಣವಾಕ್ಯಗಳಿಂದ ನಿಷೇಧಿಸಿ ಶ್ರೀ ದಾಸರು ಭಾಷಣಗಳನ್ನಿತ್ತರು. ಸರ್ಕಾರದವರಿಗೆ ಜನಮನದಲ್ಲುಂಟಾದ ತಳಮಳವನ್ನು ಶಾಂತಗೊಳಿಸುವ ಬೇರೆ ಮಾರ್ಗವು ತೋರಲಿಲ್ಲ. ಗವರ್ನರು ಸಾಹೇಬನು ಅವರನ್ನು ಕರೆಸಿಕೊಂಡು ಬಹುಹೊತ್ತು ಸಂಭಾಷಿಸಿದನಾದರೂ, ಇಬ್ಬರ ಮಾರ್ಗಗಳೂ ಏಕಮುಖವಾಗುವ ಆಸೆಯೇ ಕಂಡು ಬರಲಿಲ್ಲ. ಮುಂದೆ ಸರ್ಕಾರವು ಅತಿಕಠಿಣ ರೀತಿಯ ನಿರ್ಬಂಧವನ್ನು ಪ್ರಯೋಗಿಸಿ ಅಧಿಕಾರದ ಬಿಗಿಯನ್ನು ಕಾಪಾಡಿಕೊಳ್ಳಬೇಕೆಂದು ನಿರ್ಧರಿಸಿತು. ಅದನ್ನನುಸರಿಸಿ ಶ್ರೀ ದಾಸರು ಡಿಸಂಬರು ೧೦ ನೆಯ ದಿನ ಸಾಯಂಕಾಲ ೪-೩೦ ಗಂಟೆಗೆ ನಿರ್ಬಂಧಿಸಲ್ಪಟ್ಟರು. ಅದೇ ಕಾಲದಲ್ಲೇ ದೇಶದ ವಿವಿಧ ಪ್ರಾಂತಗಳಲ್ಲೂ ಗಬ್ಬಾಳಿಕೆಯು ಮಿತಿಮೀರಿ ನಡೆದು ದೇಶಭಕ್ತ ಲಾಲಾಲಜಪತ್‌ರಾಯಿಯವರೂ, ಪಂಡಿತ ಮೋತೀಲಾಲ್ ನೆಹ್ರೂಯವರೂ ನಿರ್ಬಂಧಿತರಾದರು. ಶ್ರೀಯುತ ದಾಸರು ಕಾರಾಗೃಹಕ್ಕೆ ಹೋಗುವುದಕ್ಕ ಮುಂಚಿತವಾಗಿ ಭಾರತ ದೇಶಬಾಂಧವರನ್ನುದ್ದೇಶಿಸಿ,—"ಸ್ವದೇಶ ಬಾಂಧವರೇ, ನೋಡಿ, ಸ್ವರಾಜ್ಯದ ಅರುಣೋದಯವಾಗಿದೆ. ನಿಮ್ಮಲ್ಲಿ ಆತ್ಮಶಕ್ತಿಯಿದ್ದರೆ-ಕಷ್ಟಸಹನೆಯ ಸಾಮರ್ಥ್ಯವಿದ್ದರೆ ಅದನ್ನು ಇಂದೇ ಗಳಿಸಿಕೊಳ್ಳಬಲ್ಲಿರಿ. ನಿಮ್ಮ ಹೃದಯದಲ್ಲಿ ಧೈರ್ಯವೂ ಆತ್ಮವಿಶ್ವಾಸವೂ ಅಕ್ಷಯವಾಗಿದ್ದರೆ,-ನೀವು ಮಹಾತ್ಮರು ವಿಧಿಸಿರುವ ಅಹಿಂಸಾ ತತ್ವಮಾರ್ಗವನ್ನು ಕ್ಷಣಮಾತ್ರವೂ ಮೀರದೆ ನಡೆಯುವಿರಾದರೆ, ಇಂದೇ ಸ್ವರಾಜ್ಯವನ್ನು ಹೊಂದಬಲ್ಲಿರಿ! ಮಂದಪಕ್ಷದವರಿಗೆ ನನ್ನದೊಂದು ಮಾತು: ಪ್ರಪಂಚದ ಯಾವ ದೇಶದಲ್ಲಿನ ಚರಿತ್ರೆಯನ್ನಾದರೂ ನೋಡಿರಿ. ಯಾವ ದೇಶಕ್ಕಾದರೂ ಸ್ವಾತಂತ್ರ್ಯವು ಎಂದೂ ಯಾರಿಂದಲೂ ದಯಮಾಡಿ ಕೊಡಲ್ಪಟ್ಟಿಲ್ಲ. ಅದನ್ನು ಆಯಾ ದೇಶೀಯರೇ ಸ್ವಯಂ ಕಷ್ಟಪಟ್ಟು ಸ್ವಾರ್ಥತ್ಯಾಗಮಾಡಿ ಸಂಪಾದಿಸಿಕೊಳ್ಳಬೇಕಾಗಿದೆ! ವಿದ್ಯಾರ್ಥಿಗಳೇ, ನಿಮಗಾಗಿ ಒಂದು ಮಾತು ಹೇಳುತ್ತೇನೆ: ಭಾರತದೇಶದ ಭವಿಷ್ಯತ್ತಿನ ಸಮಸ್ತ ಆಸೆಯೂ ನಿಮ್ಮನ್ನೇ ಆಧರಿಸಿದೆ. ನೀವೀಗ ಪಾಠಶಾಲೆ ಕಾಲೇಜುಗಳಲ್ಲಿ ಕಲಿಯುತ್ತಿರುವುದು ಹೊಟ್ಟೆಯ ಪಾಡಿನ ಮಾರ್ಗವಲ್ಲದೆ, ಅದು ವಿದ್ಯೆಯೆನಿಸಲಾರದು. ನಿಮ್ಮ ದೇಶ

ಮಾತೆಯ ಸೇವೆಗಾಗಿ ತನು ಮನ ಧನಗಳನ್ನು ಸಮರ್ಪಿಸುವ ತ್ಯಾಗಬುದ್ಧಿಯನ್ನು ಪ್ರೇರಿಸುವುದಾವುದೋ ಅದೇ ವಿದ್ಯೆಯು! ಅದನ್ನು ಕಲಿಯಲು - ಆ ಮಾರ್ಗವನ್ನು ಅನುಸರಿಸಲು ನಿಮ್ಮಲ್ಲಿ ಯಾರು ಸಿದ್ಧರಿರುವಿರಿ?" ಹೀಗೆ ಅಂತ್ಯ ಸಂದೇಶಗಳನ್ನು ನುಡಿದು ಕಾರಾಗೃಹಾಭಿಮುಖರಾದ ಒಡನೆಯೇ 'ವಂದೇ ಮಾತರಮ್', ಮಹಾತ್ಮಾ ಗಾಂಧೀಕೀ ಜೈ, ದೇಶಬಂಧು ಚಿತ್ತರಂಜನದಾಸ್‌ಕೀ ಜೈ" ಎಂಬ ಜಯಜಯಧ್ವಾನಗಳು ಗಗನವನ್ನು ಮುಟ್ಟಲೆದ್ದುವು. ಶ್ರೀ ದಾಸರು ಆರು ತಿಂಗಳು ಸಾದಾ ಶಿಕ್ಷೆ ವಿಧಿಸಲ್ಪಟ್ಟು ಆಲಿಪೂರಿನ ಜೈಲಿನಲ್ಲಿಡಲ್ಪಟ್ಟರು.

---

## — ಸ್ವರಾಜ್ಯ ಪಾರ್ಟಿ —

ದೇಶಬಂಧು ಚಿತ್ತರಂಜನದಾಸರ ಆರುತಿಂಗಳ ಕಾರಾಗೃಹವಾಸವೂ ಹೆಚ್ಚು ಶ್ರಮವಿಲ್ಲದೆಯೇ ಕಳೆದು, ಅವರು ೧೯೨೨ ನೆಯ ಜೂಲೈ ತಿಂಗಳಲ್ಲಿ ಹಿಂದಿರುಗಿ ಬಂದರು. ಒಡನೆ, ಗಯಾನಗರದಲ್ಲಿ ನಡೆಯಲಿದ್ದ ಆ ವರ್ಷದ ರಾಷ್ಟ್ರೀಯ ಮಹಾಸಭೆಗೆ ಅವರನ್ನು ಅಧ್ಯಕ್ಷರನ್ನಾಗಿ ಚುನಾಯಿಸಿ ಭಾರತದೇಶವು - ತನ್ನ ಸ್ವಾಧೀನದಲ್ಲಿದ್ದ ಅತ್ಯಧಿಕ ಪದವಿಯನ್ನು ಕೊಟ್ಟು ಆ ದೇಶಪುತ್ರಾಗ್ರಣಿಯನ್ನು ಗೌರವಿಸಿತು.

ಬ್ರಿಟಿಷ್ ಸರ್ಕಾರದವರಿಂದ ಏರ್ಪಡಿಸಲ್ಪಟ್ಟ ನ್ಯಾಯಾಸ್ಥಾನಗಳು, ಪಾಠಶಾಲೆಗಳು, ಮತ್ತು ನ್ಯಾಯವಿಧಾಯಕ ಸಭೆಗಳು (ಲಾಯಿದೇ ಕೌನ್ಸಿಲು) ಮುಂತಾದುವುಗಳನ್ನು ನಿಷೇಧಿಸುವ ವಿಷಯವು ನೈತಿಕದೃಷ್ಟಿಯಿಂದ ಸಮಂಜಸವಿದ್ದರೂ, ದೇಶಹಿತವನ್ನು ಕುರಿತು ವ್ಯವಹಾರ ದೃಷ್ಟಿಯಿಂದ ಅದರಲ್ಲಿ ಒಂದು ಲೋಪವಿದ್ದಿತು. ನಿಸ್ವಾರ್ಥಿಗಳೂ ಪ್ರಜ್ಞಾವಂತರೂ ಪ್ರಜೆಗಳ ಕಷ್ಟಸುಖಗಳನ್ನು ಸಾಕ್ಷಾತ್ತಾಗಿ ವಿವರಿಸಿ ಸರ್ಕಾರಕ್ಕೆ ತಿಳಿಸಿ ಯೋಗ್ಯ ಪ್ರತೀಕಾರಗಳನ್ನೂ ಪ್ರಯೋಜನಗಳನ್ನೂ ಪಡೆಯಬಲ್ಲ ವಾಗ್ಮಿಗಳೂ ಈ ನೈತಿಕ ದೃಷ್ಟಿಯಿಂದ ಪ್ರೇರಿತರಾಗಿ ಲಾಯಿದ ಕೌನ್ಸಿಲುಗಳಿಗೆ ಪ್ರಜಾಪ್ರತಿನಿಧಿಗಳಾಗಿ ಹೋಗದೆ ನಿಂತುಬಿಟ್ಟುದರಿಂದ, ಆ ಸ್ಥಾನಗಳೆಲ್ಲವೂ ಸ್ವಾರ್ಥಿಗಳೂ, ಸರ್ಕಾರದವರ ತಾಳಕ್ಕೆ ತಕ್ಕಂತೆ ಕುಣಿಯುವವರೂ ವಿದ್ಯಾವಿಹೀನರೂ ಆದ ಅನೇಕ ಪ್ರತಿನಿಧಿಗಳಿಂದ ತುಂಬಲು ಅವಕಾಶವಾಯಿತು. ಮಹಾತ್ಮ ಗಾಂಧಿಯವರ ಅಸಹಕಾರ ಚಳವಳಿಯ ನಿಬಂಧನೆ

ಗಳಿಂದ ಉಂಟಾಗಲಿದ್ದ ಪರಿಣಾಮಗಳಲ್ಲಿನ ಈಯೊಂದು ಲೋಪವನ್ನು ಕಂಡುಹಿಡಿದ ಶ್ರೀ ದಾಸರು, ಸರ್ಕಾರದವರು ದೇಶಪಾಲನೆಗಾಗಿ ನ್ಯಾಯ ಚಟ್ಟಗಳನ್ನು ನಿರ್ಮಿಸುವ ಆ ಸ್ಥಳಗಳಿಗೆ, ದೇಶಹಿತ ದೃಷ್ಟಿಯಿಂದ ದುಡಿಯ ಲಾಶಿಸುವ ಧುರೀಣರು ತಪ್ಪದೆ ಹೋಗಬೇಕೆಂದು ಗಯಾ ಕಾಂಗ್ರೆಸ್ಸಿನ ತಮ್ಮ ಅಧ್ಯಕ್ಷ ಭಾಷಣದಲ್ಲಿ ಪ್ರತಿಪಾದಿಸಿ ಗಾಂಧೀ ಮತವನ್ನು ಗೆದ್ದರು. ಮಾತ್ರವಲ್ಲ-ತಮ್ಮ ಆ ನವೀನ ಸಿದ್ಧಾಂತವನ್ನು ದೇಶದ ತುಂಬ ಹರಡಿ ಸರ್ಕಾ ರದವರ ವಿಘಾತಕ ಕಾರ್ಯಗಳೊಂದಿಗೆಲ್ಲ ಕಾಯಿದೆ ಸಭೆಗಳಲ್ಲಿದ್ದೇ ಎದುರಿಸಿ ಹೋರಾಡಲು ಯೋಗ್ಯರಾದವರನ್ನು ಏಕೀಕರಿಸುವುದಕ್ಕಾಗಿ, ೧೯೨೩ ನೆಯ ಸಂವತ್ಸರದ ಪ್ರಾರಂಭದಲ್ಲೇ 'ಸ್ವರಾಜ್ಯಪಾರ್ಟಿ' ಎಂಬೊಂದು ಸಂಸ್ಥೆ ಯನ್ನೂ ಸ್ಥಾಪಿಸಿದರು. ಮತ್ತು ತಮ್ಮ ಉದ್ದೇಶಗಳನ್ನೂ ಸರ್ಕಾರದವರ ಕಾರ್ಯಕರ್ಮಗಳ ಮೇಲಿನ ತಮ್ಮ ಟೀಕೆ ಟಿಪ್ಪಣಿಗಳನ್ನೂ ಸರ್ವತ್ರ ಪ್ರಚಾ ರಗೊಳಿಸಲಿಕ್ಕಾಗಿ, 'ಫಾರ್ವರ್ಡ್' ಎಂಬೊಂದು ಆಂಗ್ಲೇಯ ದೈನಿಕ ಪತ್ರಿಕೆಯನ್ನೂ ಹೊರಡಿಸಹತ್ತಿದರು. ಆ ಮಾನ್ಯಸಂಸ್ಥೆಗೂ ಅದರ ನಾಯಕ ರಾದ ಅವರಿಗೂ ದೇಶದ ಸಕಲ ಭಾಗಗಳಲ್ಲೂ ಸನ್ಮಾನವುಂಟಾಗತೊಡಗಿತು. ಮುಂದೆ ೧೯೨೩ ನೆಯ ಸಂವತ್ಸರದ ಸೆಪ್ಟಂಬರಿನಲ್ಲಿ ಡೆಲ್ಲೀ ನಗರದಲ್ಲಿ ನಡೆದ ಸ್ಪೆಷಲ್ ಕಾಂಗ್ರೆಸ್ಸಿನಲ್ಲೂ, ಕಾಕಿನಾಡಾ ಕಾಂಗ್ರೆಸ್ ಸಭೆಯಲ್ಲೂ ಅವರ ಸ್ವರಾಜ್ಯ ಪಾರ್ಟಿಯ ಠರಾವುಗಳಿಗೇ ವಿಜಯವು ದೊರಕಿತು. ಮುಂದೆ ಸ್ವಲ್ಪ ದಿನಗಳಲ್ಲೇ ಭಾರತದೇಶದ ಎಲ್ಲಾ ಆಧಿಪತ್ಯಗಳಲ್ಲೂ ನಡೆದ ನ್ಯಾಯ ವಿಧಾಯಕ ಸಭಾ ಚುನಾವಣೆಯಲ್ಲಿ ಸ್ವರಾಜ್ಯಪಾರ್ಟಿ ಮೆಂಬರರೇ ಹೆಚ್ಚು ಸಂಖ್ಯೆಯಿಂದ ಚುನಾಯಿತರಾದರು. ಅಷ್ಟೇ ಅಲ್ಲ, ಚಿತ್ತರಂಜನದಾಸರು ಕಲ್ಕತ್ತಾ ಮಹಾನಗರದ ವಿಚಾರಣಾ ಸಭೆ (Calcutta Corporation) ಯಲ್ಲೂ ತಮ್ಮ ಪಾರ್ಟಿಗೆ ಜಯವನ್ನು ದೊರಕಿಸಿಕೊಂಡರು. ಮತ್ತು ಆ ಮಹಾನಗರದ ಪ್ರಥಮ ಅಧ್ಯಕ್ಷರಾಗಿಯೂ ಶ್ರೀ ದಾಸರೇ ಚುನಾಯಿತ ರಾದರು. ಸ್ವರಾಜ್ಯಪಾರ್ಟಿಯ ನಾಯಕರಾಗಿಯೂ ಕಲ್ಕತ್ತಾನಗರದ ಸಭಾಧ್ಯಕ್ಷರಾಗಿಯೂ, ಆ ಮಹನೀಯರು ಅನೇಕ ದೇಶಸೇವಾ ಕಾರ್ಯ ಗಳನ್ನು ಮಾಡಿದ್ದಲ್ಲದೆ - ಅಗತಾನೇ ದೇಶಸೇವಾ ಕಾರ್ಯಗಳನ್ನು ಕೈಗೊ ಳ್ಳುತ್ತಲಿದ್ದ ಅನೇಕಮಂದಿ ತರುಣರಿಗೆ ಮಾರ್ಗದರ್ಶಕರೂ ಆದರು.

---

## — ರೋಗ, ಅಂತ್ಯದೆಸೆ —

೧೯೨೪ ನೆಯ ಸಂವತ್ಸರಾಂತ್ಯದ ವೇಳೆಗೆ ಶ್ರೀಯುತ ದಾಸರು ಕೀರ್ತಿ ಶಿಖರದ ತುದಿಯನ್ನೇರಿದ್ದರು. ಭಾರತದೇಶದಲ್ಲೂ - ಇಂಗ್ಲೆಂಡಿನಲ್ಲೂ ಅವರಿಗೆ ಅಗಾಧ ಕೀರ್ತಿಪ್ರತಿಷ್ಠೆಗಳುಂಟಾದುವು. ೧೯೨೪ ನೆಯ ಡಿಶಂಬರಿನಲ್ಲಿ ಬೆಳಗಾಂವಿಯಲ್ಲಿ ನೆರೆದ ರಾಷ್ಟ್ರೀಯ ಮಹಾಸಭೆಗೆ ಬಂದು, ಮಹಾತ್ಮ ಗಾಂಧಿಯವರ ಅಧ್ಯಕ್ಷತೆಯಲ್ಲಿ ನಡೆದ ಆ ಸಭೆಯಲ್ಲಿ ತಮ್ಮ ಕಾರ್ಯಕ್ರಮವನ್ನು ವಿವರಿಸಿ ಭಾಷಣ ಮಾಡಿದರು. ಮುಂದೆ ೧೯೨೫ ನೆಯ ಜನವರಿಯಲ್ಲಿ ಕಲ್ಕತ್ತಾನಗರವನ್ನು ಸೇರುವವೇಳೆಗೇ ಅವರಿಗೆ ದೇಹದಲ್ಲಿ ಅಸ್ವಸ್ಥತೆಯು ಉಂಟಾಯಿತು.

ತಮ್ಮ ಇಹಜೀವಿತದ ಕೊನೆಯ ದಿನಗಳು ಪ್ರಾಪ್ತವಾದುವೆಂಬುದನ್ನು ಆಗ್ಗೆ ಆ ಮಹನೀಯರು ತಿಳಿದಂತೆ ತೋರುತ್ತದೆ. ಏಕೆಂದರೆ ಇದಾದ ಕೆಲವು ದಿನಗಳೊಳಗಾಗಿಯೇ, ಅವರು ಆಗ್ಗೆ ಮಿಕ್ಕಿದ್ದ ತಮ್ಮ ಸ್ವಂತ ಆಸ್ತಿಯನ್ನೆಲ್ಲ ಸ್ತ್ರೀಯರ ಮತ್ತು ಮಕ್ಕಳ ಆಸ್ಪತ್ರೆಗಾಗಿಯೂ, ವೈದ್ಯವಿದ್ಯೆಯನ್ನು ಅಭ್ಯಸಿಸುವ ಬಾಲಿಕೆಯರ ಶಿಕ್ಷಣ ಶಾಲೆಗಾಗಿಯೂ ವಿನಿಯೋಗಿಸಬೇಕೆಂದು ಮರಣ ಶಾಸನವನ್ನು ಬರೆದು ಜನಾಂಗಕ್ಕೆ ಧರ್ಮಾರ್ಥವಾಗಿ ಒಪ್ಪಿಸಿಬಿಟ್ಟರು. ಹಾಗೆ ಒಪ್ಪಿಸಿಕೊಟ್ಟ ಆಸ್ತಿಯಲ್ಲಿ ಕಲ್ಕತ್ತಾನಗರದ ರಸ್ಸಾರೋಡಿನಲ್ಲಿ ಅವರು ಇಪ್ಪತ್ತೈದು ಸಂವತ್ಸರಗಳಿಂದ ವಾಸಿಸಿದ್ದ ಅವರ ಭವ್ಯಗೃಹವೂ ಸೇರಿದ್ದಿತು. ಆ ಪುಣ್ಯಭವನದಲ್ಲೇ ಈಗ ಸ್ತ್ರೀಯರ ಮತ್ತು ಮಕ್ಕಳ ವೈದ್ಯಶಾಲೆಯು ತೆರೆಯಲ್ಪಟ್ಟು ಆ ಮಹನೀಯರ ಪೂತನಾಮದ ಸ್ಮರಣೆಯನ್ನು ಜನಮನಕ್ಕೆ ತರುತ್ತಾ ಕೀರ್ತಿಜ್ಯೋತಿಯೋ ಎಂಬಂತೆ ಬೆಳಗುತ್ತದೆ.

ಅಧಿಕಾರ ವರ್ಗದಿಂದ ನಡೆಯುತ್ತಿದ್ದ ಅನ್ಯಾಯಗಳನ್ನು ನಿಷ್ಠುರರೀತಿಯಲ್ಲಿ ನಿಷೇಧಿಸುತ್ತಿದ್ದಂತೆಯೇ, ಶ್ರೀ ದಾಸರು, ನ್ಯಾಯಮಾರ್ಗವನ್ನು ಬಿಟ್ಟು ಕುಹಕ ಮಾರ್ಗಗಳನ್ನವಲಂಬಿಸಿ ಬಾಂಬು ಗುಂಡುಗಳನ್ನೆಸೆದು ಪ್ರಾಣಹರಣಮಾಡುತ್ತಿದ್ದ ಸ್ವದೇಶೀಯ ಪ್ರಳಯಕಾರಿಗಳ ಕೃತ್ಯಗಳನ್ನಾದರೂ ತಪ್ಪದೆ ಖಂಡಿಸುತ್ತಿದ್ದರು. ಅವರ ಈ ನಿರ್ದಾಕ್ಷಿಣ್ಯ ಪ್ರಕೃತಿಯೂ ಅಪ್ರತಿಹತವಾದ ಕಾರ್ಯಕ್ರಮವೂ ಲಾರ್ಡ್‌ಬರ್ಕನ್‌ಹೆಡ್ಡನ ಗಮನವನ್ನೂ ಎಳೆದು ಭಾರತದೇಶದ ಆಡಳಿತವಿಚಾರದಲ್ಲಿ ಏನಾದರೊಂದು ಸುಲಲಿತ ಮಾರ್ಗವನ್ನು ಕುರಿತು ಯೋಚಿಸದಿದ್ದರೆ ಮುಂದೆ ಪರಿಣಾಮವಿಲ್ಲವೆಂಬಂತಹ ಒತ್ತಾಯವನ್ನು ಉಂಟುಮಾಡಿತು. ರಾಜಕಾರ್ಯ ಯೋಚನೆ

ಗಾಗಿ ವೈಸರಾಯಿ ಲಾರ್ಡ್ ರೀಡಿಂಗ್ ಸಾಹೇಬನು ವಿಲಾಯತಿಗೆ ಆಹ್ವಾನಿತನಾದನು. ಆ ಇಬ್ಬರ ಮಂತ್ರಾಲೋಚನೆಯಿಂದ ದೇಶಕ್ಕೆ ಏನಾದರೊಂದು ಮೇಲುಂಟಾಗಬಹುದೆಂದು ಎಲ್ಲರೂ ನಂಬಿದ್ದರು.

೧೯೨೫ ನೆಯ ಮೇ ತಿಂಗಳು ೨ ನೆಯ ದಿನ, ಅವರು ಫರೀದ್‌ಪುರದ ಬಂಗಾಳಾ ಪ್ರಾಂತಿಕಸಭೆಯ ಅಧ್ಯಕ್ಷ ಭಾಷಣವನ್ನು ಮುಗಿಸಿಕೊಂಡು ಜ್ವರದಿಂದ ನರಳುತ್ತ ಕಲ್ಕತ್ತಾನಗರವನ್ನು ಸೇರಿದರು. ಆಗಿನ ಅವರ ದೇಹಸ್ಥಿತಿಯು ಬಹು ಭೀತಿಜನಕವಾಗಿತ್ತು. ಡಾಕ್ಟರರು ಯುರೋಪಿನ ಯಾವುದಾದರೊಂದು ಆರೋಗ್ಯಕ್ಷೇತ್ರಕ್ಕೆ ಹೋಗಿ ದೇಹಸ್ಥಿತಿಯನ್ನು ಸರಿಪಡಿಸಿಕೊಳ್ಳಿರೆಂದು ಒತ್ತಾಯಪಡಿಸಿದರಾದರೂ ದಾಸರು ಅದಕ್ಕೆ ಒಪ್ಪದೆ ಹಿಮಾಲಯದ ತಪ್ಪಲಿನಲ್ಲಿರುವ ಡಾರ್ಜಿಲಿಂಗ್ ಪಟ್ಟಣದಲ್ಲೇ ಒಂದು ಮನೆಯನ್ನು ಖರೀದಿಗೆ ಪಡೆದು, ಅಲ್ಲಿಗೆ ತಮ್ಮ ಪತ್ನಿಯೊಂದಿಗೆ ಮೇ ೧೬ ನೆಯ ದಿನ ಹೋಗಿ ಸೇರಿ ಯೋಗ್ಯ ಚಿಕಿತ್ಸೆ ತೆಗೆದುಕೊಳ್ಳುತ್ತಿದ್ದರು.

ಆದರೆ ಈ ಬಾರಿ ಅವರಿಗೆ ಬಂದ ಜ್ವರವು, ವಾಸಿಯಾಗಲು ಬಂದುದಾಗಲಿಲ್ಲ. ಬೆಳಗಾಂವಿಯಿಂದ ಬಂದತರುವಾಯ ಪ್ರಾಪ್ತವಾದ ಕಾಯಿಲೆಯನ್ನು ಪರೀಕ್ಷಿಸಿದ ವೈದ್ಯರು, ಅದು (food poisoning) ವಿಷಮಿಶ್ರಿತ ಆಹಾರ ಪ್ರಯೋಗದಿಂದ ಉಂಟಾದುದೆಂದು ಅಭಿಪ್ರಾಯ ಪಟ್ಟಿದ್ದರು. ಅಂದಿನಿಂದ ಮಧ್ಯೆ ಕೆಲಕೆಲವುದಿನ ಆರೋಗ್ಯವಾಗಿದ್ದಂತೆ ಇದ್ದು ಕೆಲಸಮಾಡುತ್ತಿದ್ದರಾದರೂ ಅವರು ಸಂಪೂರ್ಣವಾಗಿ ಆರೋಗ್ಯದಿಂದಿದ್ದ ದಿನವೇ ಇರಲಿಲ್ಲ. ಈಸಾರಿ ಅವರು ಕಲ್ಕತ್ತಾವನ್ನು ಬಿಟ್ಟವರು ಪುನಃ ಜೀವಂತರಾಗಿ ಆ ನಗರಕ್ಕೆ ದರ್ಶನ ಕೊಡಲೇ ಇಲ್ಲ. ರೋಗವು ಬರುತ್ತಾ ಬರುತ್ತಾ ಪ್ರಬಲಿಸ ತೊಡಗಿತು. ಕೊನೆಗೆ ೧೯೨೫ ನೆಯ ಜೂನ್ ೧೬ ನೆಯ ಮಂಗಳವಾರ ಮಧ್ಯಾಹ್ನ ೧ ಗಂಟೆಗೆ ಆ ಮಹನೀಯರು ತಮ್ಮ ಜೀವಿತಯಾತ್ರೆಯನ್ನು ಮುಗಿಸಿದರು. ಅವರ ದಿವ್ಯಾತ್ಮವು ಲೋಕಪಿತನ ಸನ್ನಿಧಿಗೆ ತೆರಳಿತು.

---

## — ‘ ಅಂತ್ಯ ಸಂಸ್ಕಾರಾದಿಗಳು ’ —

ದೇಶಬಂಧು ಚಿತ್ತರಂಜನರು ಕೀರ್ತಿಶೇಷರಾದರೆಂಬ ವಾರ್ತೆಯು ತಿಳಿದೊಡನೆಯೇ ಆ ಊರಿನ ಸಕಲನಿವಾಸಿಗಳೂ ಬಂದು ಆ ದೇಶಬಾಂಧವರ ಮೃತಕಳೇಬರವನ್ನು ದರ್ಶಿಸಿದರು. ಒಡನೆ ಆ ವಾರ್ತೆಯು ಕಲ್ಕತ್ತೆಗೂ ದೇಶದ ಸಕಲ ಭಾಗಗಳಿಗೂ ತಲುಪಿತು. ಭಾರತದೇಶದ ಸಕಲಭಾ

ಗಗಳಲ್ಲೂ ಸಹಸ್ರಾರು ವ್ಯಸನಸೂಚಕ ಸಭೆಗಳು ನಡೆದು ಅವರ ಆತ್ಮಕ್ಕೆ ಶಾಂತಿಯು ಕೋರಲ್ಪಟ್ಟಿತು. ಇತ್ತ ಮೃತದೇಹವು ಪುಷ್ಪಾಚ್ಛಾದಿತವಾಗಿ ರೈಲುಮಾರ್ಗದಿಂದ ಕಲ್ಕತ್ತಾನಗರಕ್ಕೆ ತರಲ್ಪಟ್ಟಿತು. ಮಾರ್ಗದಲ್ಲಿ ಒಂದೊಂದು ನಿಲ್ದಾಣದಲ್ಲೂ ಸಹಸ್ರಾರುಮಂದಿ ನೆರೆದುನಿಂತು ಪುಷ್ಪಾಂಜಲಿಗಳನ್ನು ಎರಚುತ್ತ ಆ ಪುಣ್ಯದೇಹವನ್ನು ದರ್ಶಿಸಿದರು. ಕಲ್ಕತ್ತಾನಗರವನ್ನು ಸೇರುವವೇಳೆಗಂತೂ ಸ್ಟೇಷನ್ಬಳಿ ಜನಸಾಗರವೇ ನೆರೆದಿದ್ದಿತು. ಮಹಾತ್ಮ ಗಾಂಧಿಯುವರೇ ನೇತೃಗಳಾಗಿರಲು, ಮೂರುಲಕ್ಷ ಪ್ರಜೆಗಳು ತಮ್ಮ ನಗರಾಧಿಪತಿಯನ್ನು ಗೌರವಿಸುತ್ತ ರುದ್ರಭೂಮಿಗೆ ಮೆರೆವಣಿಗೆಯಾಗಿ ನಡೆದರು. ಹೀಗೆ ಆರುಗಂಟೆಗಳಕಾಲ ಮಹಾ ಜನಸಮೂಹದೊಂದಿಗೆ ಪ್ರೇತೋತ್ಸವವು ಸಾಗಿ ಸಾಯಂಕಾಲ ನಾಲ್ಕು ಗಂಟೆಗೆ ಆ ಮೃತದೇಹವು ಅಗರುಚಂದನ ಕರ್ಪೂರಾದಿಗಳಿಂದ ಏರ್ಪಟ್ಟಿದ್ದ ಚಿತೆಗೇರಿಸಲ್ಪಟ್ಟಿತು. ನೆರೆದ ಮೂರುಲಕ್ಷ ಜನ ಪ್ರೇಕ್ಷಕರ ಕಣ್ಣೀರೂ ಹೊಳೆಯಾಗಿ ಹರಿಯುತ್ತಿರಲು ಚಿರರಂಜನನು ಪಿತೃವಿನ ಕಳೇಬರಕ್ಕೆ ಅಗ್ನಿಸಂಸ್ಕಾರ ಮಾಡಿದನು. ದೇಶಭಕ್ತನಾದ ಒಬ್ಬ ಮಹರ್ಷಿಯ ದೇಹಕ್ಕೆ ಇಷ್ಟುಮಟ್ಟಿನ ವೈಭವೋಪಚಾರಗಳು ನಡೆದುದನ್ನು ಕಂಡು ಕಲ್ಕತ್ತಾನಗರ ವಾಸಿಗಳಾದ ಯೂರೋಪಿಯನರು ಮಹದಾಶ್ಚರ್ಯದಿಂದ - ಅಂತಹ ಒಂದು ಮಹೋತ್ಸವವನ್ನು ತಮ್ಮ ಜೀವಿತದಲ್ಲೇ ಕಂಡು ಕೇಳಿದುದಿಲ್ಲವೆಂದು ಹೇಳಿಕೊಂಡರು.

ಜೂಲೈ ೧ ನೆಯದಿನ ದೇಶಬಂಧುವಿನ ಶ್ರಾದ್ಧಕ್ರಿಯೆಯು ಗಂಗಾತೀರದಲ್ಲಿ ಆಚರಿಸಲ್ಪಟ್ಟಿತು. ಆ ದಿನವೂ ಕಲ್ಕತ್ತಾನಗರದ ಪಾಠಶಾಲೆಗಳೂ ಕಚೇರಿಗಳೂ ವರ್ತಕಶಾಲೆಗಳೂ ಮುಚ್ಚಲ್ಪಟ್ಟುವು. ಹತ್ತಾರು ಸಹಸ್ರಮಂದಿ ನೆರೆದು ಅಲ್ಲೇ ಇಡಲ್ಪಟ್ಟಿದ್ದ ದೇಶಬಂಧುವಿನ ಪುರುಷಪ್ರಮಾಣದ ಭಾವಚಿತ್ರವನ್ನು ಗೌರವಿಸಿ ತಮ್ಮ ಕೊನೆಯ ಭಕ್ತಿಕಾಣಿಕೆಯನ್ನು ಸಮರ್ಪಿಸಿದರು. ಗೋಭೂಹಿರಣ್ಯಾದಿಗಳೂ ವಸ್ತ್ರಾದಿಗಳೂ ಸಾವಿರಾರುಮಂದಿ ಯೋಗ್ಯಪಾತ್ರರಿಗೆ ದಾನವಾಗಿ ಕೊಡಲ್ಪಟ್ಟುವು. ನಾಲ್ಕೆಂಟು ಸಹಸ್ರಮಂದಿ ಬ್ರಾಹ್ಮಣರಿಗೂ ಹಲವು ಸಹಸ್ರಮಂದಿ ಬಡಜನಗಳಿಗೂ ದಿವ್ಯ ಭಕ್ಷ್ಯಭೋಜ್ಯಗಳ ಭೂರಿ ಭೋಜನಗಳು ನಡೆದುವು. ಇಂತು ಆ ಮಹರ್ಷಿಯು ಬದುಕಿದ್ದು ಹೇಗೆ ಸ್ವದೇಶೀಯರನ್ನು ಸಂತೋಷಗೊಳಿಸಿದರೋ—ಸತ್ತೂ ಹಾಗೆಯೇ ಒಂದು ಬಗೆಯಿಂದ ಸಂತೋಷಗೊಳಿಸಿದರು. ಅದು ಧನ್ಯಜೀವಿತವಲ್ಲವೆ !

---

# ಉಪಸಂಹಾರ

ದೇಶಬಂಧು ದಾಸರು ಭಾರತದೇಶದ ಅಭಿವೃದ್ಧಿಯ ವಿಷಯದಲ್ಲಿ ತಮ್ಮ ಮನಸ್ಸಿನಲ್ಲಿ ಅಪೇಕ್ಷಿಸಿದ್ದುದನ್ನೆಲ್ಲ ಸಾಧಿಸಿದರೇ ಎಂಬುದನ್ನು ಚರ್ಚಿಸಲು ಇಲ್ಲಿ ಸಂದರ್ಭವಿಲ್ಲ-ಹಿಂದೂಗಳಾದ ನಾವು ಜನ್ಮಾಂತರವನ್ನು ನಂಬತಕ್ಕವರಾದುದರಿಂದ, ಒಂದು ಶುಭಸಂಕಲ್ಪಮಾಡಿ ಕಾರ್ಯಪ್ರಯತ್ನದಲ್ಲಿ ಕೈಯಿಟ್ಟವ್ಯಕ್ತಿಯು ಮಧ್ಯದಲ್ಲಿ ಮೃತನಾದರೆ, ಮರಣದೊಂದಿಗೇ ಸಮಸ್ತವೂ ಲಯವಾಗಿ ಹೋಯಿತೆಂದು ಕಂಗೆಟ್ಟು ಕಳವಳಿಸಬೇಕಾದ ಕಾರಣವಿಲ್ಲ. ಭಾರತಬಂಧು ಚಿತ್ತರಂಜನದಾಸರು - ಇಂದು ಸಾಧ್ಯವಾಗದಿದ್ದರೆ, ಮುಂದೆ ಮತ್ತೊಂದು ಜನ್ಮವೆತ್ತಿ, ತಮ್ಮ ಆತ್ಮಕ್ಕೆ ಅತ್ಯಂತ ಪ್ರಿಯಕರವಾಗಿದ್ದ ಈ ದೇಶಮಾತೆಯ ಸೇವೆಗಾಗಿಯೇ ತಮ್ಮ ತನುಮನಧನಗಳನ್ನು ಸಮರ್ಪಿಸಿ ಅದನ್ನು ಸಾಧಿಸುವರು. ಅವರ ಮನಸ್ಸಿನಲ್ಲಿ ನೆಲೆಗೊಂಡಿದ್ದ ಭಾರತದೇಶದ ಸ್ವಾತಂತ್ರ್ಯ ಸಾಧನೆಗಾಗಿ ನೂರು ಜನ್ಮಗಳನ್ನಾದರೂ ಎತ್ತಿ ಕೃತಕೃತ್ಯರಾಗುವರು. ಇದಕ್ಕೆ ಸಂಶಯವಿಲ್ಲ.—

ಯಾವ ಮಹನೀಯರು ಲಕ್ಷಲಕ್ಷವಾಗಿ ದ್ರವ್ಯವನ್ನು ಗಳಿಸಿದರೂ, ಸಮಸ್ತವನ್ನೂ ಸ್ವದೇಶೀಯರ ಅಭಿವೃದ್ಧಿಗಾಗಿಯೇ ಉಪಯೋಗಿಸಿ, ಮಹಾರಾಜರೂ ಅಸೂಯೆಪಡುವಂತಹ ದಿವ್ಯಭೋಗಗಳಿಂದ ಕೂಡಿದ್ದರೂ ಮಾತೃದೇಶದ ದುರವಸ್ಥೆಯನ್ನು ಕಂಡು ಬೀದಿಯ ಕಡುಬಡವನ ಸ್ಥಿತಿಗಿಳಿದು, ಮಹಾಯೋಗಿಯಂತೆ ಕಷ್ಟಸುಖ ಶೀತೋಷ್ಣ ಐಶ್ವರ್ಯ ದಾರಿದ್ರ್ಯಗಳನ್ನು ಒಂದೇ ವಿಧವಾದ ಮನೋಭಾವದಿಂದ ಕಂಡು 'ದೇಶಸೇವೆ' ಎಂಬ ಏಕನಿಷ್ಠೆಯಲ್ಲಿ ಪ್ರತಿಷ್ಠಿತವಾದ ಮನಸ್ಸುಳ್ಳವರಾಗಿ ಕೀರ್ತಿಶರೀರವನ್ನು ಗಳಿಸಿಕೊಂಡರೋ ಆ ದೇಶಭಕ್ತಾಗ್ರಣಿ **ದೇಶಬಂಧು ಚಿತ್ತರಂಜನದಾಸರ** ಸ್ವಾರ್ಥತ್ಯಾಗವೂ, ಉದಾರತೆಯೂ, ಧೈರ್ಯಸಾಹಸಾದಿಗಳೂ, ದೇಶಾಭಿಮಾನವೂ ಪ್ರತಿಯೊಬ್ಬ ಭಾರತೀಯನಿಗೂ ಆದರ್ಶವಾಗಿದ್ದು, ದೇಶಮಾತೆಯ ಸೇವೆಯಲ್ಲಿ ತನುವನ್ನೂ ಮನ-ಧನಗಳನ್ನೂ ಸಮರ್ಪಿಸುವಂತೆ ಹುರುಪುಗೊಳಿಸಲಿ.

ತ [illegible]

